ಕರ್ನಾಟಕ ಅನುವಾದ ಸಾಹಿತ್ಯ ಅಕಾಡೆಮಿ ಪ್ರಕಟಣೆ - ೨೩
ಸಾಹಿತ್ಯಮಾಲೆ - ೨೨

ಪ್ರಧಾನ ಸಂಪಾದಕರು
**ಡಾ. ಪ್ರಧಾನ್ ಗುರುದತ್ತ**

ಸಂಪಾದಕರು
**ಡಾ. ಪಿ. ಎಸ್. ರಾಮಾನುಜಂ**

# ಕಥಾಸರಿತ್ಸಾಗರ

(ಸಂಪುಟ ೧)

(ಲಂಬಕ: ಕಥಾಪೀಠ)

**Kathā Sarit-sāgara (Vol. 1)** by **Somadeva Bhatta**, consisting Book 1 **Kathāpīṭha**; Kannada translation by **H. V. Nagaraja Rao**; Editor-in-Chief: **Dr. Pradhan Gurudatta**; General Editor of the series: **Dr. P. S. Ramanujam;** Published by **Registrar**, **Karnataka Anuvada Sahitya Academy**, Kannada Bhavana, J.C. Road, Bangalore - 560 002. 2007; Pp. xxxviii + 140; Price: Rs. 50/-.



ಮುದ್ರಣ : ೨೦೦೭
ಪುಟಗಳು : xxxviii + ೧೪೦
ಬೆಲೆ : ರೂ. ೫೦/–
ಪ್ರತಿಗಳು : ೩೨೦೦

ಪ್ರಕಾಶಕರು :
**ಪಿ. ನಾರಾಯಣಸ್ವಾಮಿ**
ರಿಜಿಸ್ಟ್ರಾರ್
ಕರ್ನಾಟಕ ಅನುವಾದ ಸಾಹಿತ್ಯ ಅಕಾಡೆಮಿ
ಕನ್ನಡ ಭವನ, ಜೆ.ಸಿ.ರಸ್ತೆ, ಬೆಂಗಳೂರು
ದೂ : ೨೨೧೦೭೭೭೦

ಸಹಕಾರ :
**ಕನ್ನಡ ಮತ್ತು ಸಂಸ್ಕೃತಿ ಇಲಾಖೆ**
ಬೆಂಗಳೂರು

ಮುಖಪುಟ ವಿನ್ಯಾಸ ಮತ್ತು ಚಿತ್ರ : **ವಿಶ್ವನಾಥ್**

**ISBN : 978-81-905692-1-7**

ಮುದ್ರಕರು :
**ಮೆ॥ ಮಯೂರ ಪ್ರಿಂಟ್ ಆಡ್ಸ್**
ನಂ. ೬೯, ಸುಬೇದಾರ್‌ಛತ್ರಂ ರೋಡ್
ಬೆಂಗಳೂರು – ೫೬೦೦೨೦ ದೂ : ೨೩೩೪೨೭೨೪

ಹೆಚ್.ಡಿ. ಕುಮಾರಸ್ವಾಮಿ
ಮುಖ್ಯಮಂತ್ರಿಗಳು

ಕರ್ನಾಟಕ ಸರ್ಕಾರ

ವಿಧಾನಸೌಧ
ಬೆಂಗಳೂರು – ೫೬೦ ೦೦೧

ದಿನಾಂಕ : ೧೫.೦೩.೨೦೦೭

# ಮುನ್ನುಡಿ

ಕರ್ನಾಟಕ ರಾಜ್ಯ ಪುನರ್ ಘಟನೆಯ ಐವತ್ತು ವರ್ಷಗಳ ನೆನಪಿಗಾಗಿ ಕರ್ನಾಟಕ ಸರ್ಕಾರ 'ಸುವರ್ಣ ಕರ್ನಾಟಕ'ದ ಸಂಭ್ರಮಪೂರ್ಣ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಬೇಕೆಂದು ನಿರ್ಧರಿಸಿತು. ಈ ಹೊತ್ತಿಗೆ ಸರಿಯಾಗಿ ಕರ್ನಾಟಕ ಅನುವಾದ ಸಾಹಿತ್ಯ ಅಕಾಡೆಮಿಯ ಸ್ಥಾಪನೆಯ ಮೂಲಕ ಕರ್ನಾಟಕ ಸರ್ಕಾರ ಇನ್ನೊಂದು ಹೊಸ ಹೆಜ್ಜೆಯನ್ನೂ ಇಟ್ಟಿತ್ತು. ಭಾರತೀಯ ಭಾಷೆಗಳ ನಡುವಣ ಪಾರಸ್ಪರಿಕ ಅರಿವನ್ನು ಹೆಚ್ಚಿಸುವುದರ ಜೊತೆಗೆ, ನಮ್ಮ ನಾಡು–ನುಡಿಗಳ ಹಿರಿಮೆಯನ್ನು ಇತರ ಭಾಷಾ–ಬಾಂಧವರಿಗೆ ಹಾಗೂ ಜಾಗತಿಕ ನೆಲೆಯಲ್ಲಿ ಪರಿಚಯಿಸಿ ಕೊಡುವುದು ಮತ್ತು ಜಗತ್ತಿನ ಇತರ ಭಾಷೆಗಳ ಶ್ರೇಷ್ಠ ಸಾಹಿತ್ಯವನ್ನು ಕನ್ನಡಿಗರಿಗೆ ಒದಗಿಸುವುದು ಇದರ ಮುಖ್ಯ ಉದ್ದೇಶಗಳಲ್ಲಿ ಒಂದಾಗಿದೆ. ಅನುವಾದ ಸಾಹಿತ್ಯ ಈ ಹೊತ್ತು ಸಾಹಿತ್ಯ ಕ್ಷೇತ್ರಕ್ಕೆ ಮಾತ್ರ ಸೀಮಿತವಾಗಿಲ್ಲದಿರುವುದರಿಂದ, ಜ್ಞಾನ–ವಿಜ್ಞಾನ– ತಂತ್ರಜ್ಞಾನಗಳ ಕ್ಷೇತ್ರಗಳನ್ನು ಒಳಗೊಂಡಂತೆ ವಿವಿಧ ಕ್ಷೇತ್ರಗಳಲ್ಲಿನ ಶ್ರೇಷ್ಠ ಕೃತಿಗಳನ್ನು ಕನ್ನಡಕ್ಕೆ ತರುವುದೂ ಇದರಲ್ಲಿ ಸೇರಿದೆ. ಇದರಿಂದ ಐತಿಹಾಸಿಕ ಹಿರಿಮೆಯ ಜೊತೆಗೆ, ಕನ್ನಡದ ಸಾಮರ್ಥ್ಯ, ವೈಶಿಷ್ಟ್ಯ, ಹಿರಿಮೆಗಳು ರಾಷ್ಟ್ರೀಯ ಮತ್ತು ಅಂತಾರಾಷ್ಟ್ರೀಯ ಮಟ್ಟಗಳಲ್ಲಿ ಕಂಗೊಳಿಸುವಂತಾಗುತ್ತದೆ.

'ಸುವರ್ಣ ಕರ್ನಾಟಕ' ಸಂಭ್ರಮದ ಸಂದರ್ಭದಲ್ಲಿ, ಈ ಹಿಂದೆ ನಾಡು ನುಡಿಗೆ ಸೇವೆಯನ್ನು ಸಲ್ಲಿಸಿರುವ ಹಿರಿಯ ಚೇತನಗಳು ಸ್ವಪ್ರೇರಣೆಯಿಂದ ಕನ್ನಡಕ್ಕೆ ತಂದುಕೊಟ್ಟಿರುವ ಶ್ರೇಷ್ಠ ಕೃತಿಗಳಲ್ಲಿ ಆಯ್ದ ಗ್ರಂಥಗಳನ್ನು 'ಸುವರ್ಣ ಅನುವಾದ ಮಾಲೆಯ' ಅಂಗವಾಗಿ ಹೊರತರಲಾಗುತ್ತಿದೆ. ಅಂತೆಯೇ, ಇತರ ಭಾಷೆಗಳಲ್ಲಿನ ಹಾಗೂ ವಿಶ್ವದಲ್ಲಿನ ಶ್ರೇಷ್ಠ ಕೃತಿಗಳನ್ನೂ ಪರಿಚಯಿಸಿ ಕೊಡಲಾಗುತ್ತಿದೆ. ಇವು ಕನ್ನಡಿಗರಿಗೆ ಪ್ರಿಯವಾಗುತ್ತವೆಂದು ನಂಬಿದ್ದೇನೆ. ಈ ಕೃತಿಗಳನ್ನು ಸಹೃದಯತೆಯಿಂದ ಸ್ವಾಗತಿಸುವ ಮೂಲಕ, ಅನುವಾದ ಸಾಹಿತ್ಯ ಅಕಾಡೆಮಿಯ ಇಂಥ ಕೆಲಸಗಳಿಗೆ ಕನ್ನಡ ನಾಡಿನ ಜನತೆ ಪ್ರೋತ್ಸಾಹ ನೀಡುತ್ತದೆ ಎಂದು ಭಾವಿಸಿದ್ದೇನೆ.

**(ಹೆಚ್.ಡಿ. ಕುಮಾರಸ್ವಾಮಿ)**

**ಹೆಚ್.ಎಸ್. ಮಹದೇವ ಪ್ರಸಾದ್**
ಕನ್ನಡ ಮತ್ತು ಸಂಸ್ಕೃತಿ ಸಚಿವರು

ಕರ್ನಾಟಕ ಸರ್ಕಾರ

ನಂ. ೩೩೦, ೩ನೇ ಮಹಡಿ,
ವಿಧಾನಸೌಧ,
ಬೆಂಗಳೂರು – ೫೬೦ ೦೦೧

ದಿನಾಂಕ : ೦೮–೦೨–೨೦೦೭

## ಶುಭಾಕಾಂಕ್ಷೆ

ಕರ್ನಾಟಕ ರಾಜ್ಯದಲ್ಲಿ ಮೊಟ್ಟಮೊದಲ ಬಾರಿಗೆ ಅಸ್ತಿತ್ವಕ್ಕೆ ಬಂದಿರುವ ಅನುವಾದ ಸಾಹಿತ್ಯ ಅಕಾಡೆಮಿ, ರಾಷ್ಟ್ರದಲ್ಲಿಯೇ ಇಂಥ ಆದ್ಯ ಸಂಸ್ಥೆಯಾಗಿದ್ದು ಅನೇಕ ಮಹತ್ವಪೂರ್ಣ ಯೋಜನೆಗಳನ್ನು ಕೈಗೊಂಡು, ಕನ್ನಡ ಸಾಹಿತ್ಯ ಮತ್ತು ಜ್ಞಾನ–ವಿಜ್ಞಾನ ಕ್ಷೇತ್ರಕ್ಕೆ ಅರ್ಥಪೂರ್ಣವಾದ ಕೊಡುಗೆಗಳನ್ನು ನೀಡುವ ಹಂಬಲವನ್ನು ಹೊಂದಿದೆ. ಇದರ ಸ್ಥಾಪನೆಯ ತರುಣದಲ್ಲಿಯೇ ಕರ್ನಾಟಕ ರಾಜ್ಯದ ಸುವರ್ಣ ಸಂಭ್ರಮದ ಉತ್ಸವವೂ ಕೂಡಿಬಂದಿರುವ ಕಾರಣದಿಂದಾಗಿ, ಅನುವಾದ ಸಾಹಿತ್ಯ ಅಕಾಡೆಮಿ ಗಾಂಧೀಜಿ, ನೆಹರೂ ಇಂಥ ಶ್ರೇಷ್ಠ ವ್ಯಕ್ತಿಗಳನ್ನು ಕುರಿತ ಮಹತ್ವದ ಕೃತಿಗಳನ್ನೇ ಅಲ್ಲದೆ, ವಿವಿಧ ಭಾಷೆಗಳಲ್ಲಿನ ಅತ್ಯುತ್ತಮ ಸಾಹಿತ್ಯ ಗ್ರಂಥಗಳನ್ನು ಮತ್ತು ಇತರ ಕೃತಿಗಳನ್ನು ಕನ್ನಡಿಗರಿಗೆ ಒದಗಿಸುವ ಕಾರ್ಯವನ್ನು ಹಮ್ಮಿಕೊಂಡಿರುವುದು ನನಗೆ ತುಂಬಾ ಸಂತೋಷವನ್ನು ಉಂಟುಮಾಡಿದೆ. ಇದರಲ್ಲಿ ದೇಶ–ವಿದೇಶಗಳ ಕಥೆ–ಕಾದಂಬರಿಗಳೂ, ನಾಟಕಗಳೂ, ಮಕ್ಕಳ ಸಾಹಿತ್ಯ, ವಿಜ್ಞಾನ ಸಾಹಿತ್ಯ ಮುಂತಾದ ಹಲವು ಕ್ಷೇತ್ರಗಳ ಕೃತಿಗಳೂ ಸೇರಿದ್ದು, ಕನ್ನಡಿಗರಿಗೆ ವೈವಿಧ್ಯಮಯ ಅನುಭವವನ್ನು ತಂದುಕೊಡುವಲ್ಲಿ ನೆರವಾಗುತ್ತವೆ ಎಂದು ನಂಬಿದ್ದೇನೆ. ಈ ಮಾಲೆಯಲ್ಲಿ ಈ ಬಗೆಯ ಇನ್ನೂ ಅನೇಕ ಕೃತಿಗಳು ಮುಂದಿನ ದಿನಗಳಲ್ಲಿ ಕನ್ನಡಿಗರಿಗೆ ದೊರೆಯಲಿವೆ ಎಂಬ ವಿಚಾರ ನನಗೆ ಹೆಚ್ಚಿನ ಸಂತೋಷವನ್ನು ಉಂಟುಮಾಡಿದೆ. ಇದೇ ರೀತಿ ಕನ್ನಡದ ಶ್ರೇಷ್ಠ ಕೃತಿಗಳನ್ನು ಇತರ ಭಾರತೀಯ ಭಾಷೆಗಳಿಗೆ ಹಾಗೂ ವಿದೇಶೀ ಭಾಷೆಗಳಿಗೆ ಅನುವಾದಿಸಿ ಕೊಡುವ ಕಾರ್ಯಗಳೂ ಸಾಕಷ್ಟು ಪ್ರಮಾಣದಲ್ಲಿ ನಡೆದು ಕನ್ನಡಿಗರ ಸಾಧನೆ ಜಗತ್ತಿಗೆ ಚೆನ್ನಾಗಿ ತಿಳಿದುಬರುವಂಥ ಸಾರ್ಥಕ ಪ್ರಯತ್ನಗಳು ನಡೆಯಲಿ ಎಂದು ಹಾರೈಸುತ್ತೇನೆ.

ಈಗ ಹೊರಬರುತ್ತಿರುವ ಕೃತಿಗಳಿಗೆ ಕನ್ನಡ ವಾಚಕಲೋಕದ ಸಹೃದಯಪೂರ್ಣ ಸ್ವಾಗತ ದೊರೆಯುತ್ತದೆಂದು ನಂಬಿದ್ದೇನೆ. ಇಂಥ ಸ್ವಾಗತ ಮತ್ತು ಪ್ರೋತ್ಸಾಹಗಳು ಅಕಾಡೆಮಿಯ ಮುಂದಿನ ಕಾರ್ಯಚಟುವಟಿಕೆಗಳಿಗೆ ಪ್ರೇರಣೆಯನ್ನೊದಗಿಸಲಿ ಎಂದು ಹಾರೈಸುತ್ತೇನೆ.

**(ಹೆಚ್.ಎಸ್. ಮಹದೇವ ಪ್ರಸಾದ್)**

ಕಛೇರಿ : ೨೨೨೫೫೪೮೨
೨೨೦೩೪೦೦೭

ಕರ್ನಾಟಕ ಸರ್ಕಾರ

ಐ.ಎಂ. ವಿಠ್ಠಲಮೂರ್ತಿ, ಭಾ.ಆ.ಸೇ.
ಸರ್ಕಾರದ ಕಾರ್ಯದರ್ಶಿ
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ
ಹಾಗೂ ಪ್ರವಾಸೋದ್ಯಮ ಇಲಾಖೆ

ಕರ್ನಾಟಕ ಸರ್ಕಾರದ ಸಚಿವಾಲಯ
ಕೊ.ನಂ.೫, ನೆಲಮಹಡಿ, ವಿಕಾಸಸೌಧ,
ಬೆಂಗಳೂರು–೫೬೦ ೦೦೧

## ಹೊಸ ಹೆಜ್ಜೆ

ರಾಷ್ಟ್ರಕವಿ ಶ್ರೀ ಕುವೆಂಪು ಅವರ ಹೆಸರಿನಲ್ಲಿ ಸ್ಥಾಪಿಸಲಾಗುತ್ತಿರುವ 'ಶ್ರೀ ಕುವೆಂಪು ಭಾಷಾಭಾರತೀ' ಎಂಬ ರಾಷ್ಟ್ರೀಯ ಸಂಸ್ಥೆಯ ಒಂದು ಸ್ವತಂತ್ರ ವಿಭಾಗವಾಗಿ ಕರ್ನಾಟಕ ಸರ್ಕಾರ 'ಕರ್ನಾಟಕ ಅನುವಾದ ಸಾಹಿತ್ಯ ಅಕಾಡೆಮಿ'ಯನ್ನು ಈಗಾಗಲೇ (೨೦೦೬ರಲ್ಲಿ) ಅಸ್ತಿತ್ವಕ್ಕೆ ತಂದಿದೆ. ಇಂಥ ಉಪಕ್ರಮವನ್ನು ಮೆರೆಯುವಲ್ಲಿ ಕರ್ನಾಟಕವೇ ಮೊದಲನೆಯ ರಾಜ್ಯವಾಗಿದೆ ಎಂಬುದು ಹೆಮ್ಮೆಯ ಸಂಗತಿಯೇ ಆಗಿದೆ. ಈ ಅನುವಾದ ಅಕಾಡೆಮಿ, ಪ್ರಾರಂಭಗೊಂಡ ತರುಣದಲ್ಲಿಯೇ ಕರ್ನಾಟಕ ರಾಜ್ಯದ ಪುನರ್–ರಚನೆಯ ಸುವರ್ಣ ಮಹೋತ್ಸವದ ಸಂದರ್ಭ ಕೂಡಿ ಬಂದದ್ದು ಒಂದು ವಿಶಿಷ್ಟ ಯೋಗಾಯೋಗವೇ ಆಗಿದೆ. ಈ ಸುವರ್ಣ ಮಹೋತ್ಸವದ ಸಂದರ್ಭದ ಆಚರಣೆಯ ಅಂಗವಾಗಿ ಅನುವಾದ ಅಕಾಡೆಮಿ ಅನೇಕ ಮಹತ್ವಪೂರ್ಣ ಯೋಜನೆಗಳನ್ನು ಕೈಗೊಂಡಿದೆ. ಈ ಮೊದಲೇ ವಿಭಿನ್ನ ಭಾಷೆಗಳಲ್ಲಿನ ಹಲವು ಶ್ರೇಷ್ಠ ಲೇಖಕರ ಹಲವಾರು ಶ್ರೇಷ್ಠ ಕೃತಿಗಳು ನಮ್ಮ ಸಾಹಿತಿಗಳ ಗಮನವನ್ನು ಸೆಳೆದಿದ್ದು, ಅವುಗಳ ಯಥಾವತ್ತಾದ, ಸಂಗ್ರಹರೂಪವಾದ, ಅಳವಡಿಕೆಯಂತಿರುವ ಅನುವಾದಗಳನ್ನು ಅವರು ನಮಗೆ ಕೊಡಮಾಡಿದ್ದಾರೆ. 'ಒಬ್ಬನೇ ಉಂಡ ಊಟ ಹಬ್ಬವಲ್ಲ; ಒಬ್ಬನೇ ಸವಿದ ರುಚಿ ರುಚಿಯಲ್ಲ' ಎಂಬ ಗಾದೆ ಮಾತನ್ನು ಸಾರ್ಥಕಗೊಳಿಸುವಂತೆ, ಅವರು ಈ ಕೆಲಸವನ್ನು ಮಾಡಿದ್ದಾರೆ. ಇಂಥ ಪ್ರಸಿದ್ಧ, ಜನಪ್ರಿಯ, ಅಲಭ್ಯ ಕೃತಿಗಳನ್ನು 'ಸುವರ್ಣ ಕರ್ನಾಟಕ' ಯೋಜನೆಯ ಅಂಗವಾಗಿ ಹೊರತರಲಾಗುತ್ತಿದೆ. ಅಂತೆಯೇ, ಇತರ ಭಾಷೆಗಳಲ್ಲಿನ ಹೊಸ ಶ್ರೇಷ್ಠ ಗ್ರಂಥಗಳನ್ನು ಕನ್ನಡಿಗರಿಗೆ ಪರಿಚಯಿಸಿಕೊಡುವ ಪ್ರಯತ್ನವನ್ನೂ ಮಾಡಲಾಗುತ್ತಿದೆ. ಹೀಗೆ, ದೇಶ–ವಿದೇಶಗಳ ಉತ್ಕೃಷ್ಟ ಕೃತಿಗಳಿಂದ ಕನ್ನಡ ಭಾಷೆ–ಸಾಹಿತ್ಯಗಳನ್ನು ಸಮೃದ್ಧಗೊಳಿಸುವ ದಿಕ್ಕಿನಲ್ಲಿ ಅನುವಾದ ಅಕಾಡೆಮಿ ಮಹತ್ತರವಾದ ಪಾತ್ರವನ್ನು ನಿರ್ವಹಿಸಬೇಕಾಗಿದೆ.

ಅನುವಾದ ಇಂದು ತನ್ನ ಆಯಾಮವನ್ನು ಬಹುವಾಗಿ ವಿಸ್ತರಿಸಿಕೊಂಡು ಜ್ಞಾನ–ವಿಜ್ಞಾನ–ತಂತ್ರಜ್ಞಾನ ಕ್ಷೇತ್ರಗಳನ್ನು ತನ್ನ ತೆಕ್ಕೆಗೆ ಒಳಪಡಿಸಿಕೊಂಡಿದೆ. ಹೀಗಾಗಿ, ಈ ದಿಕ್ಕಿನಲ್ಲಿಯೂ ಕನ್ನಡವನ್ನು ಸಮೃದ್ಧಗೊಳಿಸುವತ್ತ ನಮ್ಮ ಗಮನ ಹರಿಯಬೇಕಾಗಿದೆ. ಅಕಾಡೆಮಿ ಈ ದಿಕ್ಕಿನಲ್ಲಿಯೂ ಕಾರ್ಯೋನ್ಮುಖವಾಗಿರುವುದು ಸಂತೋಷದ ವಿಚಾರವೇ ಆಗಿದೆ. ಈ ಬಗೆಯ ಬಹುಮುಖೀ ಕಾರ್ಯಚಟುವಟಿಕೆಗಳಿಂದ ಭಾರತೀಯ ಭಾಷೆಗಳಲ್ಲಿ ಈಗಾಗಲೇ ತನ್ನದೇ ಆದ ಹಿರಿಮೆಯನ್ನು

ಮರೆದಿರುವ, ಮರೆಯುತ್ತಿರುವ  ಕನ್ನಡ ಭಾಷೆ–ಸಾಹಿತ್ಯ ಮತ್ತಷ್ಟು ಕಂಗೊಳಿಸುವಂತಾಗುತ್ತದೆ. ಅನೇಕ ಮಹತ್ವದ ಗ್ರಂಥಗಳು ದೊರೆಯುವಂತಾಗುತ್ತಿರುವುದು ವೈಯಕ್ತಿಕವಾಗಿಯೂ ನನಗೆ ಸಂತೋಷವನ್ನು ಉಂಟುಮಾಡುತ್ತಿದೆ. ಇಂಥ ಕಾರ್ಯಗಳಿಗೆ ಸರ್ಕಾರದ ಬೆಂಬಲದ ಜೊತೆಗೆ, ಜನತೆಯ ಹೃತ್ಪೂರ್ವಕ ಪ್ರೋತ್ಸಾಹವೂ ಅಗತ್ಯವಾಗುತ್ತದೆ. ವಿವೇಚನಾಶೀಲರೂ, ಸಹೃದಯರೂ ಆದ ಕನ್ನಡಿಗರು ಇಂಥ ಪ್ರೋತ್ಸಾಹ ನೀಡುವಲ್ಲಿ ಮುಂದಾಗುತ್ತಾರೆ ಎಂದು ನಂಬಿದ್ದೇನೆ. ಅಕಾಡೆಮಿಯ ಕಾರ್ಯಚಟುವಟಿಕೆಗಳು ಇತೋಪ್ಯತಿಶಯವಾಗಿ ಮುಂದುವರಿಯಲಿ ; ಕರ್ನಾಟಕದ ಜನತೆಗೆ ಹೊಸ ಅನುಭವಗಳ ಲೋಕವನ್ನು ತೆರೆದು ತೋರುವ ಕಾರ್ಯಗಳು ಅವಿಚ್ಛಿನ್ನವಾಗಿ ನಡೆಯಲಿ ಎಂದು ಈ ಸಂದರ್ಭದಲ್ಲಿ ಹಾರೈಸಬಯಸುತ್ತೇನೆ.



**(ಐ.ಎಂ. ವಿಠ್ಠಲಮೂರ್ತಿ)**

# ಪ್ರಸ್ತಾವನೆ

ಭಾರತದಲ್ಲಿ ಯಾವುದೇ ರಾಜ್ಯವೊಂದರಲ್ಲಿ ಅನುವಾದ ಸಾಹಿತ್ಯ ಅಕಾಡೆಮಿಯನ್ನು ಮೊಟ್ಟಮೊದಲ ಬಾರಿಗೆ ಸ್ಥಾಪಿಸಿದ ಹಿರಿಮೆ ಕರ್ನಾಟಕ ಸರ್ಕಾರದ್ದಾಗಿದೆ. ಜನವರಿ ೬, ೨೦೦೬ರಂದು ಅಂದಿನ ಮಾನ್ಯ ಮುಖ್ಯಮಂತ್ರಿಗಳಾಗಿದ್ದ ಶ್ರೀ ಧರ್ಮಸಿಂಗ್ ಅವರು ವಿಧ್ಯುಕ್ತವಾಗಿ ಕರ್ನಾಟಕ ಅನುವಾದ ಸಾಹಿತ್ಯ ಅಕಾಡೆಮಿಯನ್ನು ಉದ್ಘಾಟಿಸಿದರು. ಮೈಸೂರು ವಿಶ್ವವಿದ್ಯಾನಿಲಯದ ಮಾಜಿ ಕುಲಪತಿಗಳೂ ಹಾಗೂ ಭಾಷಾಂತರವನ್ನು ವಿಶ್ವವಿದ್ಯಾಲಯದ ಹಂತದಲ್ಲಿ ಶಿಕ್ಷಣ ವಿಷಯವಾಗಿ ಅಳವಡಿಸಿದ ಭಾಷಾಂತರ ಕ್ಷೇತ್ರದ ಭೀಷ್ಮಾಚಾರ್ಯರೂ ಆದ ಪ್ರೊ॥ ದೇ. ಜವರೇಗೌಡ ಅವರೂ, ಹಿರಿಯ ವಿದ್ವಾಂಸರಾದ ಪ್ರೊ॥ ಎಲ್.ಎಸ್. ಶೇಷಗಿರಿರಾವ್ ಅವರೂ ಅಕಾಡೆಮಿಯ ಕಾರ್ಯಚಟುವಟಿಕೆಗಳ ದಿಕ್ಕು-ದೆಸೆಗಳನ್ನು ನಿರ್ದೇಶಿಸಿದರು.

ನಮ್ಮ ನಾಡಿನಲ್ಲಿರುವ ವಿಚಿತ್ರ ಪರಿಸ್ಥಿತಿ ಎಂದರೆ ವಿದೇಶೀಯ ಭಾಷಾಸಾಹಿತ್ಯಗಳ ಅಷ್ಟಿಷ್ಟು ಪರಿಚಯವಾದರೂ ಇರುವ ನಮಗೆ ನಮ್ಮ ನಾಡಿನ ನೆರೆಹೊರೆಯ ಭಾಷೆಗಳಲ್ಲಿನ ಶ್ರೇಷ್ಠ ಸಾಹಿತ್ಯದ, ಶ್ರೇಷ್ಠ ಸಾಹಿತಿಗಳ ಪರಿಚಯ ಬಹುಮಂದಿಗೆ ಇಲ್ಲವೇ ಇಲ್ಲದಂತಾಗಿದೆ. ಕೇಂದ್ರ ಸಾಹಿತ್ಯ ಅಕಾಡೆಮಿ ಮತ್ತು ಇತರ ಕೆಲವು ರಾಷ್ಟ್ರೀಯ ಸಂಸ್ಥೆಗಳು ತಮ್ಮ ಕಾರ್ಯಚಟುವಟಿಕೆಗಳಲ್ಲಿ ಅನುವಾದಗಳನ್ನು ಹೊರತರುವ ಕೆಲವು ಯೋಜನೆಗಳನ್ನು ಕೈಗೊಳ್ಳುತ್ತಿರುವುದುಂಟು. ಆದರೆ, ಈ ಕಾರ್ಯಗಳು ಅಪೇಕ್ಷಣೀಯ ಪ್ರಮಾಣದಲ್ಲಿ ಹಾಗೂ ಪರಸ್ಪರ ಪೂರಕವಾಗುವ ರೀತಿಯಲ್ಲಿ ಆಗುತ್ತಿಲ್ಲ. ಮೇಲಾಗಿ ಈ ಕಾರ್ಯಕ್ರಮಗಳು ಬಹುಮಟ್ಟಿಗೆ ಸಾಹಿತ್ಯ ಕ್ಷೇತ್ರಕ್ಕೆ ಮಾತ್ರವೇ ಸೀಮಿತವಾಗಿವೆ. ಹೀಗಾಗಿ, ಪರಸ್ಪರ ಕೊಳು-ಕೊಡೆಯ ಕಾರ್ಯಕ್ರಮಗಳು ಹೆಚ್ಚು-ಹೆಚ್ಚಾಗಿ ಹಾಗೂ ವೈವಿಧ್ಯಮಯವಾಗಿ ಆಗಬೇಕಾದ ಅಗತ್ಯವೂ ಇದೆ.

ಭಾರತೀಯ ಭಾಷಾಸಾಹಿತ್ಯಗಳು ಸಮೃದ್ಧವಾಗಿ ಬೆಳೆಯಬೇಕಾದರೆ, ಎರಡು ಮುಖಗಳಲ್ಲಿ ಕಾರ್ಯಗಳು ಆಗಬೇಕಾಗಿದೆ: (೧) ರಾಷ್ಟ್ರೀಯ ಮಟ್ಟದಲ್ಲಿ; (೨) ಅಂತಾರಾಷ್ಟ್ರೀಯ ಮಟ್ಟದಲ್ಲಿ. ರಾಷ್ಟ್ರೀಯ ಸ್ತರದಲ್ಲಿ ನಮ್ಮ ಭಾಷಾ ಸಾಹಿತ್ಯವನ್ನು ಬಿಂಬಿಸುವ ಕೆಲಸ ಎಷ್ಟು ಮುಖ್ಯವೋ, ಇತರ ಭಾಷೆಗಳಲ್ಲಿನ ಶ್ರೇಷ್ಠ ಸಾಹಿತ್ಯವನ್ನು ಕನ್ನಡಕ್ಕೆ ತಂದುಕೊಳ್ಳುವುದು ಅಷ್ಟೇ ಮುಖ್ಯ. ರಾಷ್ಟ್ರೀಯ-ಅಂತಾರಾಷ್ಟ್ರೀಯ ಮಹತ್ವದ ಸಾಹಿತ್ಯವನ್ನು ಕನ್ನಡಕ್ಕೆ ತಂದುಕೊಳ್ಳುವುದು ಹಾಗೂ ಕನ್ನಡ ಸಾಹಿತ್ಯವನ್ನು ಅಂತಾರಾಷ್ಟ್ರೀಯ ಮಟ್ಟದಲ್ಲಿ ಬಿಂಬಿಸುವುದೂ ಅಷ್ಟೇ ಮುಖ್ಯ. ಈ ದೃಷ್ಟಿಯಿಂದ ನೊಬೆಲ್ ಪ್ರಶಸ್ತಿ, ಬೂಕರ್ ಪ್ರಶಸ್ತಿ, ಜ್ಞಾನಪೀಠ ಪ್ರಶಸ್ತಿ, ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ಪಂಪ ಪ್ರಶಸ್ತಿ ಮೊದಲಾದ ಪ್ರಶಸ್ತಿ ಪುರಸ್ಕಾರಗಳನ್ನು ಪಡೆದುಕೊಂಡಿರುವ ಲೇಖಕರ ಮಹತ್ವದ ಕೃತಿಗಳನ್ನು ಇತರ ಭಾಷೆಗಳಲ್ಲಿ ಹೊರತರುವ ಯೋಜನೆಗಳನ್ನು ಅನುವಾದ ಸಾಹಿತ್ಯ ಅಕಾಡೆಮಿ ತನ್ನ ಮುಂದಿರಿಸಿಕೊಂಡಿದೆ. ಅಷ್ಟೇ ಅಲ್ಲದೆ, ವಿಜ್ಞಾನ-ತಂತ್ರಜ್ಞಾನ, ವೈದ್ಯಕೀಯ, ಮಾನವಿಕ ಮೊದಲಾದ ಕ್ಷೇತ್ರಗಳಲ್ಲಿನ ಶ್ರೇಷ್ಠ ಕೃತಿಗಳನ್ನು ಕನ್ನಡದಲ್ಲಿ ತರುವ ಯೋಜನೆಗಳೂ

ಅಕಾಡೆಮಿಯ ಮುಂದಿವೆ. ಇತರ ರಾಜ್ಯ ಸರ್ಕಾರಗಳೊಂದಿಗೆ ಸಮಾಲೋಚಿಸಿ, ಅಂತೆಯೇ, ಕೇಂದ್ರ ಸರ್ಕಾರದ ಮಾನವ ಸಂಪನ್ಮೂಲ ವಿಭಾಗ, ಕೇಂದ್ರೀಯ ಹಿಂದೀ ನಿರ್ದೇಶನಾಲಯ, ವೈಜ್ಞಾನಿಕ ಮತ್ತು ತಾಂತ್ರಿಕ ಪಾರಿಭಾಷಿಕ ಪದಾವಲೀ ಆಯೋಗ ಇತ್ಯಾದಿ ಸಂಸ್ಥೆಗಳೊಂದಿಗೆ ಸಂಪರ್ಕಿಸಿ ಈ ದಿಕ್ಕಿನಲ್ಲಿ ಸಹಕಾರವನ್ನು ಪಡೆದುಕೊಳ್ಳುವ ಆಲೋಚನೆಯನ್ನೂ ಅಕಾಡೆಮಿ ಇರಿಸಿಕೊಂಡಿದೆ.

ಅಕಾಡೆಮಿಯ ಕಾರ್ಯಚಟುವಟಿಕೆಗಳ ಅಂಗವಾಗಿ ಕಾರ್ಯಶಿಬಿರಗಳನ್ನು ಆಯೋಜಿಸಿ, ಅನುವಾದದ ಸಮಸ್ಯೆಗಳ ಬಗ್ಗೆ ಚರ್ಚೆ ನಡೆಸುವ, ಸಮರ್ಥ ಭಾಷಾಂತರಕಾರರನ್ನು ಗುರುತಿಸುವ ಪ್ರಯತ್ನಗಳನ್ನು ಅಕಾಡೆಮಿ ಮಾಡುತ್ತಿದೆ. ಈಗಾಗಲೇ ಕನ್ನಡ–ತೆಲುಗು, ಕನ್ನಡ–ಹಿಂದೀ, ಯಂತ್ರಾನುವಾದ, ವಿಜ್ಞಾನ ಸಾಹಿತ್ಯ ಅನುವಾದ ಇವುಗಳಿಗೆ ಸಂಬಂಧಿಸಿದಂತೆ ರಾಜ್ಯದ ಬೇರೆ–ಬೇರೆ ಕೇಂದ್ರಗಳಲ್ಲಿ ಹಾಗೂ ಹೊರ ರಾಜ್ಯಗಳಲ್ಲಿ ಕಾರ್ಯಶಿಬಿರಗಳನ್ನೂ, ವಿಚಾರಗೋಷ್ಠಿಗಳನ್ನೂ ನಡೆಸಲಾಗಿದೆ. ಉರ್ದೂ ಮತ್ತು ತಮಿಳು ಭಾಷೆಗಳ ಕಾರ್ಯಶಿಬಿರಗಳನ್ನು ಆಯೋಜಿಸಲಾಗುತ್ತಿದೆ.

ಭಾಷಾಂತರ ಕ್ಷೇತ್ರದಲ್ಲಿನ ಇತ್ತೀಚಿನ ಬೆಳವಣಿಗೆಗಳನ್ನು ಗಮನಕ್ಕೆ ತೆಗೆದುಕೊಂಡು ಆ ದಿಕ್ಕಿನಲ್ಲಿ ಅಗತ್ಯವಾದ ಕ್ರಮಗಳನ್ನು ಕೈಗೊಳ್ಳುವ ಆಲೋಚನೆಯೂ ಇದೆ. ಇತ್ತೀಚೆಗೆ ಸ್ಯಾಮ್ ಪಿಟ್ರೋಡಾ ಅವರು 'ರಾಷ್ಟ್ರೀಯ ಅನುವಾದ ಮಿಷನ್' (National Translation Mission) ಅನ್ನು ಸ್ಥಾಪಿಸುವ ಬಗ್ಗೆ ಕೇಂದ್ರ ಸರ್ಕಾರಕ್ಕೆ ಯೋಜನೆಯೊಂದನ್ನು ಸಲ್ಲಿಸಿದ್ದು, ಕೇಂದ್ರ ಸರ್ಕಾರ ಆ ಯೋಜನೆಯನ್ನು ಒಪ್ಪಿಕೊಂಡಿರುವ ವಿಚಾರ ಪತ್ರಿಕೆಗಳಲ್ಲಿ ವರದಿಯಾಗಿದೆ. ಈ ಯೋಜನೆ ಕಾರ್ಯರೂಪಕ್ಕೆ ಬಂದಲ್ಲಿ, ಜ್ಞಾನ–ವಿಜ್ಞಾನ–ತಂತ್ರಜ್ಞಾನಗಳು ಜನಸಾಮಾನ್ಯರ ವರೆಗೂ ಯಶಸ್ವಿಯಾಗಿ ಮುಟ್ಟುವುದು ಸಾಧ್ಯವಾಗುತ್ತದೆ ಹಾಗೂ ರಾಷ್ಟ್ರದ ಪ್ರಗತಿಯೂ ಅಭೂತಪೂರ್ವ ರೀತಿಯಲ್ಲಿ ಆಗುತ್ತದೆ ಎಂದು ಆಶಿಸಲಾಗಿದೆ. ಈ ಯೋಜನೆ ಉದ್ಯೋಗಸೃಷ್ಟಿಯ ಮಹತ್ತರ ಯೋಜನೆಯೂ ಆಗಲಿದೆ. ಇಂಥ ಸಂದರ್ಭದಲ್ಲಿ ಅಗತ್ಯವಾಗುವ ಲಕ್ಷಾಂತರ ಮಂದಿ ಅನುವಾದಕರ ಪಡೆಯನ್ನು ಸಿದ್ಧಪಡಿಸುವುದು ಇಂಥ ಸಂಸ್ಥೆಗಳ ಮತ್ತು ವಿಶ್ವವಿದ್ಯಾನಿಲಯಗಳ ಹೊಣೆಯೇ ಆಗಿರುತ್ತದೆ. ರಾಜ್ಯದ ಹಾಗೂ ಹೊರಗಿನ ವಿಶ್ವವಿದ್ಯಾನಿಲಯಗಳಲ್ಲಿ ಈಗಾಗಲೇ ಭಾಷಾಂತರ ವಿಭಾಗಗಳು ಸ್ಥಾಪಿತವಾಗಿದ್ದು, ಅವು ಕಾರ್ಯಶೀಲವಾಗುತ್ತಿರುವುದು ಶುಭಸೂಚಕವಾಗಿದೆ.

ಇದುವರೆಗೆ ವಿದ್ವಾಂಸರ ವೈಯಕ್ತಿಕ ಪಾಂಡಿತ್ಯ, ವ್ಯುತ್ಪತ್ತಿ ಮತ್ತು ಒಲವನ್ನು ಆಧರಿಸಿ ಅನುವಾದ ಕಾರ್ಯಗಳು ನಡೆಯುತ್ತಾ ಬಂದಿವೆ. ಆದರೆ ಇಂಥ ಕಾರ್ಯಗಳು ವ್ಯವಸ್ಥಿತವಾಗಿ ಹಾಗೂ ಉತ್ತಮ ಗುಣಮಟ್ಟದೊಂದಿಗೆ ನಡೆಯಬೇಕಾದ್ದು ಅಪೇಕ್ಷಣೀಯವಾಗಿರುವ ಹಿನ್ನೆಲೆಯಲ್ಲಿ, ಭಾಷಾಂತರ ಸಂಬಂಧವಾದ ಶಿಕ್ಷಣ–ಕ್ರಮಗಳನ್ನು ರೂಪಿಸುವುದು ಹಾಗೂ ದ್ವಿಭಾಷಾ ಮತ್ತು ಬಹುಭಾಷಾ ನಿಘಂಟುಗಳನ್ನು, ನುಡಿಗಟ್ಟುಗಳ ಮತ್ತು ಗಾದೆಗಳ ಕೋಶಗಳು, ಸಮಾನಾರ್ಥಕ ಮತ್ತು ಭಿನ್ನಾರ್ಥಕ ಕೋಶಗಳು ಹಾಗೂ ವಾಕ್ಯರಚನಾ ಕೈಪಿಡಿಗಳನ್ನು ಹೊರತರುವುದು – ಇವೇ ಮೊದಲಾದ ಕಾರ್ಯಗಳು ಆದ್ಯತೆಯ ಮೇರೆಗೆ ನಡೆಯಬೇಕಾಗಿವೆ. ಅನುವಾದ ಅಕಾಡೆಮಿ ಸ್ಥಾಪಿತವಾದ ಅತ್ಯಲ್ಪ ಅವಧಿಯಲ್ಲಿಯೇ ಇತರ ಸಂಘ–ಸಂಸ್ಥೆಗಳ ಗಮನವನ್ನು ಸೆಳೆದಿದ್ದು, ಅಂತರರಾಷ್ಟ್ರೀಯ ಕನಕದಾಸ ಮಿಷನ್‌ನಂತಹ

ಸಂಸ್ಥೆ ಅನುವಾದ ಅಕಾಡೆಮಿಯೊಂದಿಗೆ ಸಹಕರಿಸಲು ಮುಂದೆ ಬಂದಿರುವುದು ಗಮನಾರ್ಹವಾದ ವಿಚಾರವೇ ಆಗಿದೆ. ಅಂತೆಯೇ, ವಿಶ್ವೇಶ್ವರಯ್ಯ ತಾಂತ್ರಿಕ ವಿಶ್ವವಿದ್ಯಾಲಯದ ಸಹಕಾರದೊಂದಿಗೆ ಇಂಜಿನಿಯರಿಂಗ್ ವಿಷಯಕ್ಕೆ ಸಂಬಂಧಿಸಿದ ಪುಸ್ತಕಗಳನ್ನು ಕನ್ನಡದಲ್ಲಿ ಹೊರತರುವ ಬಗ್ಗೆಯೂ ಆಲೋಚನೆ ಮಾಡಲಾಗುತ್ತಿದೆ. ಹೀಗೆ ಅನುವಾದ ಅಕಾಡೆಮಿ ಅನೇಕ ದಿಕ್ಕುಗಳಲ್ಲಿ ಮುಂದುವರಿದು ಸಾಧನೆ ಮಾಡಬೇಕಾಗಿದೆ.

ಕರ್ನಾಟಕ ಸರ್ಕಾರ ಅನುವಾದ ಅಕಾಡೆಮಿಯ ವಿಷಯದಲ್ಲಿ ವಿಶೇಷವಾದ ಆಸಕ್ತಿಯನ್ನು ತೋರಿ ಅಗತ್ಯವಾದ ನೆರವನ್ನು ನೀಡಲು ಮುಂದೆ ಬಂದಿರುವುದು ಅಕಾಡೆಮಿಗೆ ವಿಶೇಷ ಸಂತೋಷದ ವಿಚಾರವೇ ಆಗಿದೆ. ಅದರಲ್ಲಿಯೂ ಈ ಬಾರಿ ಸುವರ್ಣ ಕರ್ನಾಟಕ ಕಾರ್ಯಕ್ರಮಗಳ ಅಂಗವಾಗಿ ವಿಶೇಷ ಧನಸಹಾಯ ನೀಡಿರುವುದರಿಂದ ಪ್ರಸಿದ್ಧ/ಅಲಭ್ಯ ಅನುವಾದಗಳ ಮರುಪ್ರಕಟಣೆ ಕಾರ್ಯವನ್ನು ಕೈಗೊಳ್ಳುವುದು, ಮತ್ತಿತರ ಮಹತ್ವದ ಪ್ರಕಟಣೆಗಳನ್ನು ಕೈಗೊಳ್ಳುವುದು ಸಾಧ್ಯವಾಗಿದೆ. ಈ ದಿಕ್ಕಿನಲ್ಲಿ ನಾಡಿನ ವಿದ್ವಾಂಸರು ವಿಶೇಷವಾದ ಸಹಾಯ–ಸಹಕಾರಗಳನ್ನು ನೀಡಲು ಮುಂದೆ ಬಂದಿರುವುದು ಅಕಾಡೆಮಿಗೆ ಗೌರವದ, ಸಂತೋಷದ ಹಾಗೂ ಹೆಮ್ಮೆಯ ವಿಚಾರವೇ ಆಗಿದೆ. ಈ ಸಂದರ್ಭದಲ್ಲಿ ವಿಲ್ ಡ್ಯೂರಾಂಟ್ ಅವರ ಜಗತ್–ಪ್ರಸಿದ್ಧವಾಗಿರುವ ಹಾಗೂ ಭಾರತದ ಬೇರಾವ ಭಾಷೆಯಲ್ಲೂ ಇನ್ನೂ ಬೆಳಕು ಕಾಣದಿರುವ 'ದಿ ಸ್ಟೋರಿ ಆಫ್ ಸಿವಿಲಿಜೇಷನ್' ಸಂಪುಟಗಳ ಕನ್ನಡ ಅನುವಾದವನ್ನು ಹೊರತರುವಲ್ಲಿ ಪ್ರೊ|| ಎಲ್.ಎಸ್. ಶೇಷಗಿರಿರಾವ್ ಅವರೂ, ಬಹಳ ಹಿಂದೆಯೇ ಇಂಗ್ಲಿಷ್‌ನಲ್ಲಿ ೧೦ ಸಂಪುಟಗಳಲ್ಲಿ ಪ್ರಕಟಣೆಗೊಂಡಿರುವ ಸಂಸ್ಕೃತ ಸಾಹಿತ್ಯದ ವಿಶಿಷ್ಟ ಕೃತಿಯಾದ ಸೋಮದೇವನ 'ಕಥಾಸರಿತ್ಸಾಗರ'ದ ಕನ್ನಡ ಅನುವಾದವನ್ನು ನೇರವಾಗಿ ಸಂಸ್ಕೃತದಿಂದ ಅನುವಾದಿಸಿ ಹೊರತರುವಲ್ಲಿ ಡಾ|| ಪಿ.ಎಸ್.ರಾಮಾನುಜಮ್ ಅವರೂ ನೆರವು ನೀಡುತ್ತಿರುವುದು ವಿಶೇಷವಾಗಿ ಸ್ಮರಣೀಯವಾಗಿದೆ. ಕನ್ನಡ ಸಹೃದಯಲೋಕ ಅಕಾಡೆಮಿಯ ಈ ಕಾರ್ಯಚಟುವಟಿಕೆಗಳ ವಿಷಯದಲ್ಲಿ ತನ್ನ ಸಹೃದಯತೆಯನ್ನು ಮೆರೆಯುತ್ತದೆ ಎಂದು ಆಶಿಸಿದ್ದೇನೆ.

ಕರ್ನಾಟಕ ಅನುವಾದ ಸಾಹಿತ್ಯ ಅಕಾಡೆಮಿಯ ಸ್ಥಾಪನೆಗೆ ಕಾರಣರಾದ ಮಾಜಿ ಮುಖ್ಯಮಂತ್ರಿಗಳಾದ ಶ್ರೀ ಧರ್ಮಸಿಂಗ್ ಅವರಿಗೂ, ಅಕಾಡೆಮಿಯ ಕಾರ್ಯಚಟುವಟಿಕೆಗಳ ವಿಷಯದಲ್ಲಿ ವಿಶೇಷ ಆಸಕ್ತಿಯನ್ನು ತೋರಿ, ಎಲ್ಲ ನೆರವನ್ನು ನೀಡುತ್ತಿರುವ ಇಂದಿನ ಮಾನ್ಯ ಮುಖ್ಯಮಂತ್ರಿಗಳಾದ ಶ್ರೀ ಹೆಚ್.ಡಿ.ಕುಮಾರಸ್ವಾಮಿ ಅವರಿಗೂ, ಮಾನ್ಯ ಉಪಮುಖ್ಯಮಂತ್ರಿಗಳಾದ ಶ್ರೀ ಬಿ.ಎಸ್.ಯಡಿಯೂರಪ್ಪನವರಿಗೂ, ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಸಚಿವರಾದ ಮಾನ್ಯ ಶ್ರೀ ಮಹದೇವ ಪ್ರಸಾದ್ ಅವರಿಗೂ ಅಕಾಡೆಮಿ ವಿಶೇಷ ಕೃತಜ್ಞತೆಗಳನ್ನು ಸಲ್ಲಿಸಬಯಸುತ್ತದೆ. ಅಕಾಡೆಮಿಯ ಕಾರ್ಯಚಟುವಟಿಕೆಗಳಿಗೆ ಎಲ್ಲ ಬಗೆಯ ಸಹಾಯ–ಸಹಕಾರ–ಮಾರ್ಗದರ್ಶನ ನೀಡುತ್ತಾ ಬಂದ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಪ್ರಧಾನ ಕಾರ್ಯದರ್ಶಿಗಳಾಗಿದ್ದ ಶ್ರೀಮತಿ ಉಷಾ ಗಣೇಶ್ ಅವರಿಗೂ, ಚೈತನ್ಯಶೀಲರೂ, ದೂರಗಾಮಿ ದೃಷ್ಟಿಯನ್ನುಳ್ಳವರೂ ಆದ ಇಂದಿನ ಕಾರ್ಯದರ್ಶಿಗಳಾದ ಶ್ರೀ ಐ.ಎಂ.ವಿಠ್ಠಲಮೂರ್ತಿ ಅವರಿಗೂ, ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಹಿಂದಿನ ಆಯುಕ್ತರುಗಳಾಗಿದ್ದ ಶ್ರೀ ಕೆ.ಆರ್.ನಿರಂಜನ್ ಮತ್ತು ಶ್ರೀ ಎಸ್.ಎಫ್. ಯೋಗಪ್ಪನವರ್

ಅವರಿಗೂ, ಈಗಿನ ನಿರ್ದೇಶಕರಾಗಿರುವ ಶ್ರೀ ಕಾ.ತ. ಚಿಕ್ಕಣ್ಣ ಅವರಿಗೂ ಅಕಾಡೆಮಿ ವಿಶೇಷ ವಂದನೆಗಳನ್ನು ಸೂಚಿಸಬಯಸುತ್ತದೆ.

ಅಕಾಡೆಮಿಯ ಕಾರ್ಯಚಟುವಟಿಕೆಗಳಿಗೆ ಎಲ್ಲ ಸಹಾಯ, ಸಹಕಾರ ಮತ್ತು ಮಾರ್ಗದರ್ಶನ ಮಾಡುತ್ತಿರುವ ಅಕಾಡೆಮಿಯ ಎಲ್ಲ ಗೌರವಾನ್ವಿತ ಸದಸ್ಯರಿಗೂ ನಮ್ಮ ವಂದನೆಗಳು ಸಲ್ಲುತ್ತವೆ.

ಮಹಾಕವಿ ಸೋಮದೇವಭಟ್ಟನ 'ಕಥಾಸರಿತ್ಸಾಗರ' ಸಂಸ್ಕೃತ ಕಥಾಸಾಹಿತ್ಯದ ಅಪೂರ್ವ ಕೃತಿಗಳಲ್ಲಿ ಒಂದು. ಭಾರತೀಯ ಧರ್ಮ, ಸಂಸ್ಕೃತಿ, ನೀತಿಶಾಸ್ತ್ರ, ರಾಜಕೀಯ ಚಿಂತನೆ, ಸಾಮಾಜಿಕ ಕಳಕಳಿ, ಸಾಹಿತ್ಯ ಪ್ರೀತಿ, ಕಥಾನಿರೂಪಣೆಯ ಕಲೆಗಾರಿಕೆ ಮತ್ತು ಸ್ವಾರಸ್ಯ – ಇವುಗಳೆಲ್ಲದರಿಂದ ಅದು ಭಾರತೀಯ ಸಾಹಿತ್ಯದ ವಿಶಿಷ್ಟ ಕೃತಿಗಳಲ್ಲಿ ಒಂದಾಗಿದೆ. ಜೀವನದ ಬಗೆಗಿನ ಎಲ್ಲ ಭಾರತೀಯ ಆದರ್ಶಗಳು ಇಲ್ಲಿಯ ಕಥೆಗಳಲ್ಲಿ ಅತ್ಯಂತ ಪರಿಣಾಮಕಾರಿಯಾಗಿ ಮೈದಳೆದಿವೆ. ನಮ್ಮ ಪ್ರಾಚೀನ ಕಥಾಪರಂಪರೆಯ ಪ್ರತೀಕವಾಗಿರುವಂತೆಯೇ, ತನ್ನ ಕಾವ್ಯಮಯ ನಿರೂಪಣೆಯಿಂದಲೂ ಅದು ಸಾಹಿತ್ಯಪ್ರಿಯರನ್ನು ತನ್ನತ್ತ ಸೆಳೆದುಕೊಂಡಿದೆ. ಇಂಥ ಕೃತಿಯ ಓದು ನಮ್ಮ ಮಕ್ಕಳಲ್ಲಿ, ಜನತೆಯಲ್ಲಿ ಸತ್–ಸಂಸ್ಕೃತಿಯನ್ನು ಮೂಡಿಸಲು ಖಂಡಿತವಾಗಿಯೂ ನೆರವಾಗುತ್ತದೆ. ಇದರ ಮಹತ್ವವನ್ನು ಅರಿತ ಸಿ.ಎಚ್. ಥಾನಿ ಎಂಬ ಪಾಶ್ಚಾತ್ಯ ವಿದ್ವಾಂಸ ಕಳೆದ ಶತಮಾನದಲ್ಲಿಯೇ (ಸು. ೧೯೨೩) ಹನ್ನೊಂದು ಸಂಪುಟಗಳಲ್ಲಿ ಇದನ್ನು ಇಂಗ್ಲಿಷಿಗೆ ಭಾಷಾಂತರಿಸಿದ್ದನೆಂಬ ಸಂಗತಿ ಇದರ ವೈಶಿಷ್ಟ್ಯ–ಮಹತ್ವಗಳಿಗೆ ಸಾಕ್ಷಿಯಾಗಿದೆ. ಟಿ. ಚಿದಂಬರ ಪಂಡಿತರು 'ಕರ್ಣಾಟಕ ಕಥಾಸರಿತ್ಸಾಗರ' (೧೯೨೨) ಎಂಬ ಹೆಸರಿನಲ್ಲಿಯೂ, ಎ. ಆರ್. ಕೃಷ್ಣಶಾಸ್ತ್ರಿಗಳು 'ಕಥಾಮೃತ' (೧೯೩೨, ೬೮) ಎಂಬ ಹೆಸರಿನಲ್ಲಿಯೂ ಇದರ ಸಂಕ್ಷಿಪ್ತ ಆವೃತ್ತಿಗಳನ್ನು ಹೊರತಂದಿದ್ದರು. ದೇವುಡು ಅವರ ವಿ. ರಾಘವನ್ ಅವರಿಂದ ಸಂಕಲಿತವಾದ ಇದರ ೧೬–ಕಥೆಗಳನ್ನು ಕನ್ನಡಕ್ಕೆ ತಂದಿರುವುದೂ (೧೯೫೮) ಗಮನಿಸಬೇಕಾದ ಸಂಗತಿಯೇ ಆಗಿದೆ. ಆದರೆ ಸಮಗ್ರವಾಗಿ ಹಾಗೂ ಸಮೂಲವಾಗಿ ಇದರ ಕನ್ನಡ ಆವೃತ್ತಿ ಹೊರಬರುತ್ತಿರುವುದು ಇದೇ ಮೊದಲು. 'ನಿರ್ಣಯ ಸಾಗರ'ದ ವತಿಯಿಂದ ಪ್ರಕಟವಾಗಿರುವ ಪಂಡಿತ ದುರ್ಗಾ ಪ್ರಸಾದ್ ಮತ್ತು ಕಾಶೀನಾಥ ಪಾಂಡುರಂಗ ಪರಬ್ ಅವರಿಂದ ಸಂಪಾದಿತವಾದ ಹಾಗೂ ವಾಸುದೇವ ಲಕ್ಷ್ಮಣಶಾಸ್ತ್ರೀ ಪಣಶೀಕರ ಅವರಿಂದ ಪರಿಶೋಧಿತವಾಗಿರುವ ೧೯೧೫ರ ಆವೃತ್ತಿಯನ್ನು ಇದಕ್ಕೆ ಆಧಾರವಾಗಿ ಇರಿಸಿಕೊಳ್ಳಲಾಗಿದೆ. ನಾಡಿನ ಅನೇಕ ಖ್ಯಾತ ಸಂಸ್ಕೃತ ವಿದ್ವಾಂಸರು ಅಕಾಡೆಮಿಯ ಈ ಯೋಜನೆಯಲ್ಲಿ ಸಹಕರಿಸಿದ್ದಾರೆ. ಡಾ. ಪಿ.ಎಸ್. ರಾಮಾನುಜಂ ಅವರಂಥ ಅಪರೂಪದ ಸಾಹಿತಿ, ವಿದ್ವಾಂಸರು ಈ ಯೋಜನೆಯ ಸಂಪಾದಕರಾಗಿ ಕಾರ್ಯನಿರ್ವಹಿಸಲು ಒಪ್ಪಿರುವುದಂತೂ ಅಕಾಡೆಮಿಗೆ ಗೌರವಪ್ರಾಯವಾದ ಸಂಗತಿಯಾಗಿದೆ ಎಂದು ನಂಬಿದ್ದೇನೆ. ಅನುವಾದಗಳಿಗೆ ಶಿಷ್ಟತೆ, ಸಾಹಿತ್ಯಸೌಷ್ಠವ ಮತ್ತು ಲಾಲಿತ್ಯಗಳನ್ನು ತಂದುಕೊಟ್ಟಿರುವುದಲ್ಲದೆ, ಕನ್ನಡ ಗದ್ಯದ ಸಹಜಗುಣಗಳು ಅಳವಡುವಂತೆ ಅವರು ನೋಡಿಕೊಂಡಿದ್ದಾರೆ. ಜೊತೆಗೆ ವಿದ್ವತ್ ಪೂರ್ಣವಾಗಿರುವ ಪೀಠಿಕೆಯನ್ನು ಬರೆದುಕೊಟ್ಟು ಈ ಸಂಪುಟಗಳ ಶೋಭೆ ಮತ್ತು ಮಹತ್ವವನ್ನು ಹೆಚ್ಚಿಸಿದ್ದಾರೆ. ಇವೆಲ್ಲ ಕನ್ನಡದ ಬಗೆಗಿನ ಅವರ ಪ್ರೀತಿ–ಗೌರವಗಳಿಗೆ ನಿದರ್ಶನವಾಗಿವೆಯೆಂದು ನಂಬಿದ್ದೇನೆ. ಅವಿರತವಾಗಿ ಶ್ರಮಿಸಿ, ನಮ್ಮ ಈ ಯೋಜನೆ ಕಾಲಬದ್ಧವಾಗಿ ಕೈಗೂಡುವಂತೆ ಮಾಡುವಲ್ಲಿ

ಅವರು ನೀಡಿರುವ ಸಹಾಯ–ಸಹಕಾರ–ಮಾರ್ಗದರ್ಶನಗಳು ಅವಿಸ್ಮರಣೀಯವಾಗಿರುವಂಥವು. ಈ ಮೊದಲ ಸಂಪುಟದ ಅನುವಾದ ಕಾರ್ಯದಲ್ಲಿ ನಮಗೆ ನೆರವಾಗಿರುವವರು ಅಂತರರಾಷ್ಟ್ರೀಯ ಖ್ಯಾತಿಯ ಸಂಸ್ಕೃತ ವಿದ್ವಾಂಸರಾದ ಶ್ರೀ ಎಚ್.ವಿ. ನಾಗರಾಜರಾವ್ ಅವರು. ಆದರ್ಶವೆನ್ನಬಹುದಾದ ರೀತಿಯಲ್ಲಿ ಮೊದಲ ಐದು ಲಂಬಕಗಳನ್ನು ಅನುವಾದಿಸಿಕೊಟ್ಟಿರುವುದಲ್ಲದೆ, ಮೂಲದಲ್ಲಿ ಉಳಿದುಹೋಗಿದ್ದ ಭಾಷಾದೋಷಗಳನ್ನೂ/ಅಚ್ಚಿನ ತಪ್ಪುಗಳನ್ನೂ ಸರಿಪಡಿಸಿಕೊಡುವುದರ ಮೂಲಕ ಕನ್ನಡ ಆವೃತ್ತಿ ಶಿಷ್ಟ ಆವೃತ್ತಿಯಾಗುವಂತೆಯೂ ಅವರು ನೋಡಿಕೊಂಡಿದ್ದಾರೆ. ಬೇಸರವಿಲ್ಲದೆ ಕರಡುಗಳನ್ನು ಪರಿಶೀಲಿಸಿಕೊಟ್ಟಿದ್ದಾರೆ. ಅವರ ಈ ವಿದ್ವತ್ ಪ್ರೇಮ ಸಾಹಿತ್ಯಪ್ರಿಯರೆಲ್ಲರ ಮೆಚ್ಚುಗೆಗೆ ಪಾತ್ರವಾಗುತ್ತದೆಂದು ನಂಬಿದ್ದೇವೆ. ಈ ಸಂಪುಟದಲ್ಲಿ ಮೊದಲ 'ಕಥಾಪೀಠ' ಲಂಬಕ ಅನುವಾದವನ್ನು ಅಳವಡಿಸಲಾಗಿದೆ. ಈ ಎಲ್ಲ ಮಹನೀಯರಿಗೂ ಅಕಾಡೆಮಿ ಹೃತ್ಪೂರ್ವಕ ವಂದನೆಗಳನ್ನು ಸಲ್ಲಿಸಬಯಸುತ್ತದೆ.

ಇನ್ನೊಂದು ಮಾತು: ಇದರ ಮಹತ್ವವನ್ನು ಮನಗಂಡ ಕನ್ನಡ ನಾಡಿನ ಅನೇಕ ಗಣ್ಯ ವಿದ್ವಾಂಸರು ಥಾನಿಯವರು ಸಂಪಾದಿಸಿರುವ '*The Ocean of Story*' ಆವೃತ್ತಿಯ ಕನ್ನಡ ಅವತರಣಿಕೆಯನ್ನು ಹೊರತರಬೇಕೆಂಬ ಪ್ರಸ್ತಾಪವನ್ನು ಕನ್ನಡ ಪುಸ್ತಕ ಪ್ರಾಧಿಕಾರದ ಮುಂದೆ ಇರಿಸಿದ್ದರು. ಹೀಗಾಗಿ ಇದು ಮೂಲತಃ ಕನ್ನಡ ಪುಸ್ತಕ ಪ್ರಾಧಿಕಾರದವರ ಯೋಜನೆ, ಅವರು ಈ ದಿಕ್ಕಿನಲ್ಲಿ ಕ್ರಮ ಕೈಗೊಂಡು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿದ್ದರು. ಅನುವಾದ ಅಕಾಡೆಮಿಯ ಸ್ಥಾಪನೆಯಾದ ಹಿನ್ನೆಲೆಯಲ್ಲಿ, ಅಂದಿನ ಪ್ರಧಾನ ಕಾರ್ಯದರ್ಶಿಗಳು ಇದನ್ನು ಅಕಾಡೆಮಿಗೆ ವರ್ಗಾಯಿಸಿದರು. ಬೇಸರಪಟ್ಟುಕೊಳ್ಳದೆ ಇದಕ್ಕೆ ಒಪ್ಪಿಗೆ ನೀಡಿದ ಪುಸ್ತಕ ಪ್ರಾಧಿಕಾರದ ಅಧ್ಯಕ್ಷರಾದ ಪ್ರೊ॥ ಎಸ್. ಜಿ. ಸಿದ್ಧರಾಮಯ್ಯನವರಿಗೆ ಅನುವಾದ ಅಕಾಡೆಮಿ ಕೃತಜ್ಞವಾಗಿದೆ.

ಅಕಾಡೆಮಿ ಈ ಯೋಜನೆಯಲ್ಲಿ ಒಂದು ಬದಲಾವಣೆ ಮಾಡಿಕೊಂಡಿದೆ. ಮೂಲ ಸಂಸ್ಕೃತ ಗ್ರಂಥದ ಇಂಗ್ಲಿಷ್ ಆವೃತ್ತಿಯನ್ನು ಕನ್ನಡಕ್ಕೆ ತಂದುಕೊಳ್ಳುವ ಬದಲಿಗೆ ನೇರವಾಗಿ ಸಮೂಲವಾಗಿ ಸಂಸ್ಕೃತದಿಂದಲೇ ಅನುವಾದಿಸಿಕೊಳ್ಳುವುದೇ ಆ ಬದಲಾವಣೆ. ಕನ್ನಡ ಓದುಗರಿಗೆ ನೇರವಾಗಿ ಕಥೆಯನ್ನು ಓದಿಕೊಂಡು ಹೋಗಲು ಅನುಕೂಲವಾಗುವಂತೆ ಕನ್ನಡಾನುವಾದವನ್ನು ಪುಟದ ಮೇಲು ಅರ್ಧದಲ್ಲಿ ಕೊಟ್ಟು, ಮೂಲವನ್ನು ಕೆಳ ಅರ್ಧದಲ್ಲಿ ಅಳವಡಿಸಲಾಗಿದೆ. ಇದು ಕನ್ನಡ–ಸಹೃದಯರಿಗೆ ಪ್ರಿಯವಾಗುತ್ತದೆಂದು ನಂಬಿದ್ದೇವೆ. ಮುಂದಿನ ಒಂದೆರಡು ವರ್ಷಗಳಲ್ಲಿ ಸುಮಾರು ೨೦ ಸಂಪುಟಗಳ ಇಡೀ ಕೃತಿಯನ್ನು ಕನ್ನಡ ಜನಸಮುದಾಯಕ್ಕೆ ಒಪ್ಪಿಸಲು ಸಾಧ್ಯವಾದೀತೆಂದೂ ನಂಬಿದ್ದೇವೆ. ಇದು ಸಾಧ್ಯವಾದಾಗ ಕನ್ನಡದ ಸಾಧನೆಗೆ ಇನ್ನೊಂದು ಹೆಮ್ಮೆಯ ಗರಿ ಸೇರಿದಂತಾಗುತ್ತದೆಂದು ನಂಬಿದ್ದೇವೆ.

ಅನುವಾದ ಅಕಾಡೆಮಿಯ ಕೆಲಸ–ಕಾರ್ಯಗಳಲ್ಲಿ ಹಾಗೂ ಪ್ರಕಟಣೆಯ ವಿಚಾರದಲ್ಲಿ ಹೃತ್ಪೂರ್ವಕವಾಗಿ ತಮ್ಮನ್ನು ತೊಡಗಿಸಿಕೊಂಡಿರುವ ಅಕಾಡೆಮಿಯ ರಿಜಿಸ್ಟ್ರಾರ್ ಪಿ. ನಾರಾಯಣಸ್ವಾಮಿ ಮತ್ತು ಇತರ ಸಿಬ್ಬಂದಿವರ್ಗದವರಿಗೆ ಹಾಗೂ ಸುಂದರವಾಗಿ ಮುದ್ರಿಸುವಲ್ಲಿ ಸಹಕರಿಸಿರುವ

ಮೆ॥ ಮಯೂರ ಪ್ರಿಂಟ್ ಆಡ್ಸ್‌ನ ಶ್ರೀ ಬಿ.ಎಲ್. ಶ್ರೀನಿವಾಸ ಮತ್ತು ಅವರ ಸಿಬ್ಬಂದಿವರ್ಗದವರಿಗೆ ನಮ್ಮ ವಂದನೆಗಳು.

ಈ ಯೋಜನೆಯಲ್ಲಿ ಹೃತ್ಪೂರ್ವಕವಾಗಿ ಸಹಕರಿಸಿದ್ದ ಡಾ. ಬಿ. ಎಸ್. ರಾಮಕೃಷ್ಣರಾವ್ ಅವರು ಈ ಸಂಪುಟಗಳು ಹೊರಬರುವ ಮೊದಲೇ ವಿಧಿವಶರಾದದ್ದು ನಮಗೆ ತುಂಬ ವಿಷಾದವನ್ನುಂಟು ಮಾಡಿದೆ. ಅವರ ಆತ್ಮಕ್ಕೆ ನಮ್ಮ ಕಾರ್ಯ ಸಂತೋಷವನ್ನು ತರುತ್ತದೆಂದು ನಂಬಿದ್ದೇವೆ.

**ಪ್ರಧಾನ್ ಗುರುದತ್ತ**
ಅಧ್ಯಕ್ಷ

# ಅನುವಾದಕ್ರಮ-ವಿಧಾನ

**‘ಕಥಾಸರಿತ್ಸಾಗರ’ದ ಅನುವಾದಕ್ಕೆ ಸಂಬಂಧಿಸಿದ ಕೆಲವು ಮಾರ್ಗದರ್ಶಕ ಸೂಚನೆಗಳು:**

೧. ‘ನಿರ್ಣಯಸಾಗರ’ದವರು ಹೊರತಂದಿರುವ ‘ಕಥಾಸರಿತ್ಸಾಗರ’ದ ಪ್ರತಿಯನ್ನೇ ಅಧಿಕೃತ ಆವೃತ್ತಿಯೆಂದು ಪರಿಗಣಿಸಿ, ಭಾಷಾಂತರದಲ್ಲಿ ಅಲ್ಲಿನ ಮೂಲಪಾಠಗಳನ್ನೇ ಅನುಸರಿಸಬೇಕು.

೨. ಕನ್ನಡ ಗದ್ಯಾನುವಾದವನ್ನು ಮೊದಲು ಸ್ಪಷ್ಟವಾಗಿ ಕನ್ನಡ ಲಿಪಿಯಲ್ಲಿ ಬರೆದು, ಅನಂತರ ಪುಟದ ಕೆಳ ಅರ್ಧದಲ್ಲಿ ಅದರ ಮೂಲ ಸಂಸ್ಕೃತ ಶ್ಲೋಕವನ್ನು ಕೊಡತಕ್ಕದ್ದು.

೩. ಭಾಷಾಂತರ ಮಾಡುವ ಸಂದರ್ಭದಲ್ಲಿ ಯಾವುದೇ ವಿಷಯ–ಅದು ಗೌಣವಾಗಿರಲಿ, ಪ್ರಧಾನವಾಗಿರಲಿ–ಮೂಲದಿಂದ ಲುಪ್ತವಾಗಬಾರದು. ಉದಾಹರಣೆಗೆ, ಮೂಲದಲ್ಲಿ ಯಾವುದಾದರೂ ಒಂದು ಪಾತ್ರವನ್ನು ಅಥವಾ ಒಬ್ಬ ವ್ಯಕ್ತಿಯನ್ನು ಎರಡು ಮೂರು ವಿಶೇಷಣಗಳೊಂದಿಗೆ ಅಭಿವ್ಯಕ್ತಿಸಿದ್ದರೆ, ಆ ಯಾವೊಂದು ವಿಶೇಷಣವನ್ನೂ ಬಿಡದೆ ಎಲ್ಲವನ್ನೂ ಅನುವಾದಿಸಬೇಕು.

೪. ಹಾಗೆಯೇ ಕನ್ನಡಾನುವಾದದಲ್ಲಿ ಮೂಲದಲ್ಲಿಲ್ಲದ ಯಾವುದೇ ವಿಷಯ ಹೊಸದಾಗಿ–ಅಲ್ಪ ಪ್ರಮಾಣದ ಮಟ್ಟಿಗೂ–ಸೇರ್ಪಡೆಯಾಗಬಾರದು. ಕೆಲವೊಮ್ಮೆ ತೀರಾ ಅನಿವಾರ್ಯವಾಗಿ ಕ್ರಿಯಾಪದಗಳನ್ನಾಗಲೀ, ಕರ್ತೃಪದಗಳನ್ನಾಗಲೀ ಸೇರಿಸಲೇ ಬೇಕಾದ ಸಂದರ್ಭ ಬಂದಲ್ಲಿ ಅವನ್ನು ಚೌಕ ಕಂಸಗಳಲ್ಲಿ ಕೊಡತಕ್ಕದ್ದು. ಆದರೆ ಈ ಬಗೆಯ ಸೇರ್ಪಡೆ ವಿರಳವಾಗಿ ಬರುವಂತಿರುವುದು ಅಪೇಕ್ಷಣೀಯ. ಬಹುತೇಕವಾಗಿ ವಿವರಣಾತ್ಮಕವಾದ ಹೇಳಿಕೆಗಳು ಅನುವಾದದ ಮಧ್ಯೆ ಮಸುಳದಂತೆ ಎಚ್ಚರವಹಿಸಬೇಕು.

೫. ಮೂಲ ಶ್ಲೋಕಗಳಲ್ಲಿನ ಭಾವ, ಅರ್ಥ, ಆಶಯ ಇವುಗಳಿಗೆ ಯಾವುದೇ ರೀತಿಯಲ್ಲಿ ಧಕ್ಕೆಯುಂಟಾಗದಂತೆ, ಕವಿಯ ಉದ್ದೇಶ ನಿರೂಪಣೆಗೆ ಯಾವುದೇ ರೀತಿಯಲ್ಲಿ ಭಂಗಬಾರದಂತೆ ಭಾಷಾಂತರಿಸಬೇಕು.

೬ ಭಾಷಾಂತರವು ಕೇವಲ ಪ್ರತಿಪದಾರ್ಥವಾಗದೆ, ಮೂಲಶ್ಲೋಕಗಳ ಭಾವಾರ್ಥದ ಸೊಗಸು ಸ್ವಾರಸ್ಯಗಳನ್ನು ಪ್ರತಿಫಲಿಸುವಂತಿರಬೇಕು.

೭ ಭಾಷಾಂತರವು ಸರಳವೂ ಪರಿಸ್ಫುಟವೂ ಆಗಿರುವುದರ ಜೊತೆಗೆ ಕನ್ನಡದ ಗದ್ಯಗುಣಗಳನ್ನು ಮೈಗೂಡಿಸಿಕೊಂಡಿದ್ದು, ಓದಿದ ತಕ್ಷಣವೇ ಅರ್ಥವು ಸಾಮಾನ್ಯ ಜನರಿಗೂ ಮನವರಿಕೆಯಾಗುಂವತಿರಬೇಕು. ಭಾಷಾಂತರದಲ್ಲಿನ ಗದ್ಯಗುಣದ ಲಾಲಿತ್ಯ, ಸ್ಪಷ್ಟತೆ ಹಾಗೂ ಸರಳತೆಗಳಿಗೆ ಎ.ಆರ್.ಕೃಷ್ಣಶಾಸ್ತ್ರಿಗಳ ‘ವಚನ ಭಾರತ’ವನ್ನು ಮಾದರಿಯಾಗಿ ಇಟ್ಟುಕೊಳ್ಳಬೇಕು.

೮. ಭಾಷಾಂತರದಲ್ಲಿ ಸಂಸ್ಕೃತ ಶಬ್ದಗಳ ಬಳಕೆಯನ್ನು ಆದಷ್ಟೂ ಕಡಿಮೆ ಮಾಡುವುದು ಅಪೇಕ್ಷಣಿಯ. ಆದರೆ ಮೂಲ ಶ್ಲೋಕಗಳಲ್ಲಿನ ಸಂಸ್ಕೃತ ಪದಗಳು, ವಾಕ್ಯಭಾಗಗಳು ಕನ್ನಡ ಭಾಷೆಯಲ್ಲಿ ಪ್ರಚಲಿತವಾಗಿದ್ದು, ಬಹು ಸುಲಭವಾಗಿ ಅರ್ಥವಾಗುವಂತಿದ್ದಲ್ಲಿ ಅವನ್ನು ಕನ್ನಡಾನುವಾದದಲ್ಲಿ ಬಳಸಿಕೊಳ್ಳಬಹುದು.

೯. ಒಂದು ಶ್ಲೋಕದ ಅರ್ಥ ಸ್ವಯಂಪೂರ್ಣವಾಗಿ, ಸಮಗ್ರವಾಗಿದ್ದಲ್ಲಿ ಅದನ್ನು ಹಾಗೆಯೇ ಅಡಕವಾಗಿ ಭಾಷಾಂತರಿಸಬೇಕು. ಕೆಲವೊಮ್ಮೆ ಮೂಲದಲ್ಲಿ ಅರ್ಥವ್ಯಕ್ತಿ ಎರಡು ಮೂರು ಶ್ಲೋಕಗಳಲ್ಲಿ ಅನುಸ್ಯೂತವಾಗಿ ಹರಿದುಬಂದಿದ್ದಲ್ಲಿ, ಮೂಲದ ಯಾವೊಂದು ಶ್ಲೋಕಕ್ಕೂ ಅರ್ಥಚ್ಯುತಿಯಾಗದಂತೆ ಆ ಮೂರನ್ನೂ ಒಳಗೊಂಡಂತೆ ಭಾಷಾಂತರ ಮಾಡಬಹುದು. ಇಂತಹ ಸಂದರ್ಭಗಳಲ್ಲಿ ಮೂಲ ಶ್ಲೋಕಗಳ ಸಂಖ್ಯೆಯನ್ನು ನಮೂದಿಸಿ ಮುಂದುವರಿಯಬೇಕು.

೧೦. ಕರ್ಮಣೀ ಪ್ರಯೋಗವನ್ನು ಸಾಧ್ಯವಾದಷ್ಟು ಮಟ್ಟಿಗೂ ದೂರವಿರಿಸಬೇಕು.

೧೧. ಲಿಪ್ಯಂತರಕ್ಕೆ ಕನ್ನಡದಲ್ಲಿ ಬಳಕೆಯಲ್ಲಿರುವ ಸಂಪ್ರದಾಯವನ್ನೇ ಅನುಸರಿಸಬೇಕು (ಉದಾ: ಮಂಗಳ, ಚಂಚಲ).

೧೨. ಪಾತ್ರಗಳಿಗೆ ಸಂಬಂಧಿಸಿದಂತೆ ಎಲ್ಲ ಕಡೆಗಳಲ್ಲಿಯೂ ಏಕವಚನವನ್ನೇ ಬಳಸಬೇಕು.

೧೩. ಅನುವಾದ ಮಾಡುವ ಶ್ಲೋಕಗಳಲ್ಲಿ ಬರುವ ಪ್ರಮುಖ ವ್ಯಕ್ತಿಗಳ ಇಲ್ಲವೇ ಪಾತ್ರಗಳ ಪಟ್ಟಿಯೊಂದನ್ನು ಅವರು ಮೊದಲ ಸಲ ಬರುವ ಶ್ಲೋಕ, ಸಂಖ್ಯೆ, ಸರ್ಗ, ಪರ್ವ ಮುಂತಾದ ವಿವರಗಳೊಡನೆ ಭಾಷಾಂತರಕಾರರು ಭಾಷಾಂತರಿಸಿದ ಹಸ್ತಪ್ರತಿಯ ಕೊನೆಯಲ್ಲಿ ನೀಡತಕ್ಕದ್ದು.

೧೪. ಕನ್ನಡ ವಾಕ್ಯರಚನೆಯ ದೃಷ್ಟಿಯಿಂದ ಅಥವಾ ಅಭಿಪ್ರಾಯ ಸ್ಪಷ್ಟೀಕರಣದ ದೃಷ್ಟಿಯಿಂದ ಪೂರಕ ಶಬ್ದಗಳನ್ನು ಅಥವಾ ಮೂಲದಲ್ಲಿ ಇಲ್ಲದ ಮಾತುಗಳನ್ನು ಏನಾದರೂ ಸೇರಿಸಿದ್ದರೆ, ಅಂಥ ಶಬ್ದಗಳನ್ನು ಚೌಕಾಕಾರದ ಆವರಣಗಳ ನಡುವೆ ಕೊಡಲಾಗುತ್ತದೆ. ಉದಾ :

   (ಅ) ಇದರಲ್ಲಿ ಪುಣ್ಯ[ಶೀಲ]ರಾದವರೂ, ಪವಿತ್ರವಾದ ಆಚಾರವುಳ್ಳವರೂ.... ಕೀರ್ತಿತರಾಗಿದ್ದಾರೆ.

   (ಆ) ಇದರಲ್ಲಿ ವಾಸುದೇವನು ಕೀರ್ತಿತನಾಗಿದ್ದಾನೆ. [ಏಕೆಂದರೆ] ಅವನೇ ಸತ್ಯ......

   (ಇ) ಯುದ್ಧದಲ್ಲಿ..... ಭಗದತ್ತ ಮಹಾರಾಜನನ್ನು.....ಅರ್ಜುನನು ಕೊಂದುಹಾಕಿದುದು [ವರ್ಣಿತವಾಗಿದೆ].

   (ಈ) [ಸಂವತ್ಸರವೆಂಬ ಚಕ್ರದ] ನಾಭಿಪ್ರದೇಶವನ್ನು [ಮುನ್ನೂರೈವತ್ತು ಹಗಲುಗಳು ಮತ್ತು ಮುನ್ನುರೈವತ್ತು ರಾತ್ರಿಗಳೆಂಬ] ಏಳುನೂರು ಅರಗಳು ಆಶ್ರಯಿಸಿವೆ.....

   (ಉ) .....ತಮ್ಮ[ನಾದ ವಿಚಿತ್ರವೀರ್ಯನು] ಇನ್ನೂ ಬಾಲಕನಾಗಿದ್ದುದರಿಂದ ಭೀಷ್ಮನು..... ಆ ರಾಜ್ಯವನ್ನು ರಕ್ಷಿಸುತ್ತಿದ್ದನು.

೧೫. ಉವಾಚ ಎಂದು ಉಕ್ತವಾಗಿರುವ ಸಂದರ್ಭಗಳನ್ನು ಬಿಟ್ಟು, ಬೇರೆ ಕಡೆಗಳಲ್ಲಿ ಬಂದಿರುವ

ಹೇಳಿಕೆಗಳನ್ನು ಏಕ – ಉದ್ಧರಣ ಚಿಹ್ನೆಗಳ ನಡುವೆ ಇರಿಸಬೇಕು. ಆದರೂ ಉಳಿದಂತೆ ಉಚಿತ ರೀತಿಯಲ್ಲಿ ಲೇಖನ ಚಿಹ್ನೆಗಳನ್ನು ಬಳಸಬೇಕಾಗುತ್ತದೆ.

ಉದಾ: (ಅ) ಉಪಾಧ್ಯಾಯನು ಹೀಗೆ ಹೇಳಲು, ಉತ್ತಂಕನು 'ಅಮ್ಮಾ ! ಮನೆಗೆ ಹೋಗಲು ಗುರುಗಳಿಂದ ಅನುಮತಿ ಪಡೆದಿದ್ದೇನೆ.....ಗುರುದಕ್ಷಿಣೆಯಾಗಿ ಏನನ್ನು ತಂದು ಅರ್ಪಿಸಲಿ ?' ಎಂದು ಉಪಾಧ್ಯಾಯಿನಿಯನ್ನು ಕೇಳಿಕೊಂಡನು.

(ಆ) [ಆ ದಿಕ್ಕುಗಳ] ಶಿರಸ್ಸಿನ ಪ್ರದೇಶದಲ್ಲಿ – ಅಂದರೆ ಅಂತರಿಕ್ಷದಲ್ಲಿ– ರಥದಿಂದ ಸಂಚರಿಸುವ [ಎಲ್ಲರಿಗೂ] ಸಮಾನವಾದ ಸೂರ್ಯನನ್ನೂ, ಆಕಾಶ ಮಾರ್ಗಗಳನ್ನೂ ಸೃಷ್ಟಿಮಾಡುತ್ತೀರಿ......

೧೬ ತಾಂತ್ರಿಕವಾದ, ವಿಶಿಷ್ಟವಾದ ಶಬ್ದಗಳನ್ನು ಏಕ ಉದ್ಧರಣ ಚಿಹ್ನೆಗಳಲ್ಲಿ ಇರಿಸಿ, ಅಂಥ ಶಬ್ದಗಳಿಗೆ ಅನುಬಂಧದಲ್ಲಿ ಅರ್ಥವನ್ನು ವಿವರಿಸಬೇಕಾಗುತ್ತದೆ. ಉದಾ: 'ಸದಸ್ಯ', 'ಪ್ರತ್ರಿಕೆ' ಇತ್ಯಾದಿ.

೧೭ ತಾಂತ್ರಿಕವಾದ ತೀರ ವಿಶಿಷ್ಟವಾದ ಬೇರೆಯ ಅರ್ಥಗಳು ಬರುವ ಸಂದರ್ಭದಲ್ಲಿ ಅಂಥ ಅರ್ಥಗಳನ್ನು ಅಡಿ ಟಿಪ್ಪಣಿಯಲ್ಲಿ ತೋರಿಸಿ, ಸಾಹಿತ್ಯಿಕವಾದ ಯಾಥಾವತ್ತಾದ ಅರ್ಥವನ್ನು ಮಾತ್ರ ನೇರ ಅನುವಾದದಲ್ಲಿ ಇರಿಸಬೇಕು. ಉದಾ: "ಷಷ್ಟಿಶ್ಚ ಗಾವಸ್ತ್ರಿಶತಾಶ್ಚ ಧೇನವ.... ಘರ್ಮಮುಕ್ಥ್ಯಮ್' '

ಅನು: "ಮುನ್ನೂರ ಅರವತ್ತು ದಿನಗಳೆಂಬ ಕರೆಯುವ ಹಸುಗಳು ಸಂವತ್ಸರವೆಂಬ ಒಂದು ಕರುವನ್ನು ಪ್ರಸವಿಸುತ್ತವೆ. ಆ ಕರುವಿನ ಸಹಾಯದಿಂದ ಹಾಲನ್ನು ಕರೆಯುತ್ತಾರೆ. ಬೇರೆ ಬೇರೆ ಕೊಟ್ಟಿಗೆಗಳಲ್ಲಿರುವವುಗಳಾದರೂ ಕರೆಯಬೇಕಾದ ಹಾಲು ಒಂದೇ. ಪ್ರಸಿದ್ಧರಾದ ಅಶ್ವಿನಿದೇವತೆಗಳು (ಸೂರ್ಯ ರೂಪರಾಗಿ) ಸೃಷ್ಟಿ ಮತ್ತು ಸಂಹಾರಗಳನ್ನು ಮಾಡುವ ಸಂವತ್ಸರ ರೂಪವಾದ ಕರುವನ್ನು ಮುಂದಿಟ್ಟು ಇಷ್ಟು ಫಲವನ್ನು ನೀಡುತ್ತಾರೆ." (ಅದೇ, ಪು. ೯೬)

ಇದಕ್ಕೆ ಇರುವ ವಿಶೇಷವಾದ ಅರ್ಥವನ್ನು ಅಡಿಟಿಪ್ಪಣಿಯಲ್ಲಿ ಹೀಗೆ ತೋರಿಸಬೇಕಾಗುತ್ತದೆ:

"ಯಾಜ್ಞಿಕ ಪ್ರಕ್ರಿಯಗೆ ಸಂಬಂಧಪಟ್ಟಂತೆ ಈ ಪದ್ಯಕ್ಕೆ ಮತ್ತೊಂದು ಅರ್ಥವನ್ನು ಹೇಳುತ್ತಾರೆ: ಒಂದು ವರ್ಷ ಪರ್ಯಂತ ನಡೆಯುವ 'ಗವಾಮಯನ'ವೆಂಬ ಯಾಗದಲ್ಲಿ ಮುನ್ನೂರ ಅರವತ್ತು ದಿವಸಗಳ ಪರ್ಯಂತ ಪ್ರತಿ ದಿವಸವೂ ಅಶ್ವಿನೀ ದೇವತೆಗಳನ್ನು ಉದ್ದೇಶಿಸಿ 'ಘರ್ಮ'ವೆಂಬ ದ್ರವ್ಯವನ್ನು ಹೋಮ ಮಾಡುತ್ತಾರೆ. ಇದು ಬಿಸಿಯಾದ ತುಪ್ಪಕ್ಕೆ ಹಾಲು ಬೆರೆಸಿದ ಒಂದು ಹವಿರ್ದ್ರವ್ಯ ಆದುದರಿಂದ ಮುನ್ನೂರ ಅರವತ್ತು ದಿವಸಗಳವರೆಗೆ ಹಾಲು ಕರೆದರೂ

ಅದು 'ಘರ್ಮ'ವೆಂಬ ಒಂದೇ ದ್ರವಕ್ಕಾಗಿ, ಅಧ್ವರ್ಯುವೆಂಬ ಒಬ್ಬನೇ ಋತ್ವಿಕ್ ಅದನ್ನು ಕರೆಯುತ್ತಾನೆ. ಇಂತಹ ಪ್ರಶಂಸನೀಯವಾದ ಆ ಘರ್ಮಕ್ಕೆ ಅಶ್ವಿನೀ ದೇವತೆಗಳು ಭಾಗಿಗಳು."

೧೮. ವಿಶೇಷಣಗಳನ್ನು ಅನುವಾದಿಸಿಕೊಳ್ಳುವಾಗ – ಉದಾ: ಪುರುಷರ್ಷಭ, ನರಶಾರ್ದೂಲ ಇಂಥವನ್ನು ಅನುವಾದಿಸುವಾಗ–ಶಬ್ದಕ್ಕೆ ಪ್ರಾಧ್ಯಾನ್ಯನೀಡದೆ, ಭಾವಕ್ಕೆ ಒತ್ತುಕೊಟ್ಟು ಪುರುಷಶ್ರೇಷ್ಠ, ನರಶೇಷ್ಠ ಎಂದು ಮೊದಲಾಗಿ ಅನುವಾದಿಸಿಕೊಳ್ಳಬೇಕು.

೧೯. ಈ ಎಲ್ಲ ಅಂಶಗಳನ್ನೂ ದೃಷ್ಟಿಯಲ್ಲಿರಿಸಿಕೊಂಡು ಹಸ್ತಪ್ರತಿಯನ್ನು ಸಿದ್ಧಪಡಿಸಿಕೊಡಬೇಕು.

**ಪ್ರಧಾನ್ ಗುರುದತ್ತ**

ಅಧ್ಯಕ್ಷ

# ಪೀಠಿಕೆ

ಸೋಮದೇವನಿಂದ ವಿರಚಿತವಾದ ಕಥಾಸರಿತ್ಸಾಗರವು ಸುಮಾರು ೨೧,೫೦೦ ಶ್ಲೋಕಗಳನ್ನುಳ್ಳ ಕೃತಿ. ಅನುವಾದಕ್ಕೆ ಈಗ ಆಯ್ಕೆ ಮಾಡಿಕೊಳ್ಳಲಾಗಿರುವ ನಿರ್ಣಯಸಾಗರ ಮುದ್ರಣಾಲಯದಿಂದ ೧೯೧೫ರಲ್ಲಿ ಮುದ್ರಿತವಾದ ಈ ಪ್ರತಿಯಲ್ಲಿ ನಡುನಡುವೆ ಹಲವು ಶ್ಲೋಕಗಳ ಪಾದಗಳು ಲುಪ್ತವಾಗಿವೆ. ಇದು ಕೇವಲ ಅನುವಾದ ಪ್ರಯತ್ನವಾಗಿರುವುದರಿಂದ ಖಿಲಭಾಗಗಳನ್ನು ಹಾಗೆಯೇ ಬಿಟ್ಟು ಉಪಲಬ್ಧ ಶ್ಲೋಕಗಳನ್ನು ಅನುವಾದ ಮಾಡಲಾಗಿದೆ. ಇಂತಹ ಲುಪ್ತವಾದ ಶ್ಲೋಕಭಾಗಗಳು ಅಧಿಕ ಸಂಖ್ಯೆಯಲ್ಲೇನೂ ಇಲ್ಲ. ಅವುಗಳನ್ನು ಬಿಟ್ಟಿರುವುದರಿಂದ ಕಥೆಯ ಓಟಕ್ಕೇನೂ ತೊಂದರೆಯಾಗಿಲ್ಲ.

ಕಥೆಗಳೆಂಬ ನದಿಗಳು ಬಂದು ಸೇರಿ ಆಗಿರುವ ಕಥಾಸಮುದ್ರ ಎಂಬ ಅರ್ಥದಲ್ಲಿ ಈ ಕೃತಿಗೆ "ಕಥಾಸರಿತ್ಸಾಗರ' ಎಂಬ ಹೆಸರು ಬಂದಿದೆ. ಈ ಹೆಸರು ಇದೇ ಗ್ರಂಥದ ಕೊನೆಯಲ್ಲಿರುವ ಪ್ರಶಸ್ತಿಯ ಈ ಪದ್ಯದಲ್ಲಿ ಕಂಡು ಬರುತ್ತದೆ:

**ಪ್ರವಿತತತರಂಗಭಂಗಿಃ ಕಥಾಸರಿತ್ಸಾಗರೋ ವಿರಚಿತೋಽಯಂ ।**
**ಸೋಮೇನಾಮಲಮತಿನಾ ಹೃದಯಾನಂದಾಯ ಭವತು ಸತಾಂ ॥ ಪ್ರಶಸ್ತಿ. ಶ್ಲೋ. ॥೧೩॥**

ಈ ಶ್ಲೋಕದಲ್ಲೇ ಗ್ರಂಥಕರ್ತನ ಉದ್ದೇಶವೂ, ಈ ಕೃತಿಯ ಪ್ರಯೋಜನವೂ ಉಕ್ತವಾಗಿದೆ. ""ಸತಾಂ ಹೃದಯಾನಂದಾಯ" ಅಂದರೆ ಸಜ್ಜನರ ಮನಸ್ಸಿಗೆ ಮುದ ನೀಡುವುದು ಅರ್ಥಾತ್ ಮನೋರಂಜನೆಯೇ ಇದರ ಮುಖ್ಯೋದ್ದೇಶ. ಅಲ್ಲಲ್ಲಿ ಧರ್ಮಾಧರ್ಮವಿವೇಕವನ್ನು ಕೊಡುವ ನೀತಿವಾಕ್ಯಗಳು ಬರುವುವಾದರೂ ಆಶ್ಚರ್ಯಕರವಾದ, ಸ್ವಾರಸ್ಯಕರವಾದ, ಚಿತ್ರವಿಚಿತ್ರವಾದ ಘಟನೆಗಳನ್ನು ಒಳಗೊಂಡ ಕಥೆಗಳನ್ನು ಹೇಳಿ ರಂಜಿಸುವುದು ಇದರ ಲೌಕಿಕ ಪ್ರಯೋಜನವಾಗಿ ಕಾಣುತ್ತದೆ. ಇದರಲ್ಲಿ ಬಹಳ ವಿಜೃಂಭಿಸುವುದು ನಾಲ್ಕು ಪುರುಷಾರ್ಥಗಳಲ್ಲಿ ಅರ್ಥಕಾಮಗಳೇ.

ಈ ಕೃತಿಯು ಕಾವ್ಯವಾದರೂ ಕೃತಿಕಾರನ ಉದ್ದೇಶಕ್ಕೆ ಅನುಗುಣವಾಗಿ ಇದರಲ್ಲಿ ಕಥೆಗೆ ಹೆಚ್ಚು ಪ್ರಾಮುಖ್ಯವಿರುವುದರಿಂದ ಕಾವ್ಯಾಂಶಗಳ ಪ್ರಾಚುರ್ಯವಾಗಲಿ, ವರ್ಣನೆಗಳ ಅತಿಯಾದ ವಿಜೃಂಭಣೆಯಾಗಲಿ, ಶಬ್ದ ಹಾಗೂ ಅರ್ಥಾಲಂಕಾರಗಳ ಅತಿಯಾದ ವೈಭವವಾಗಲಿ ಕಾಣಸಿಗುವುದಿಲ್ಲ. ಅಲ್ಲಲ್ಲಿ ಕಥೆಗಳಿಗೆ ಪರಿಪೋಷಕವಾಗಿ ಹಿತಮಿತವಾದ ವರ್ಣನೆಗಳೂ, ಅಲಂಕಾರಗಳೂ ಕಂಡುಬರುತ್ತಿದ್ದು, ಅವು ಒಟ್ಟು ಕಥಾಶಿಲ್ಪಕ್ಕೆ ಮಾಡಿರುವ ಸದಭಿರುಚಿಯ ಅಲಂಕಾರದಂತೆ ಮೆರುಗು ನೀಡುತ್ತವೆ. "ತನ್ನ ಕಾವ್ಯ ಪ್ರತಿಭೆಯು ಕಥನ ಕಲೆಗೆ ಅಡ್ಡವಾಗಲು ಸೋಮದೇವನು ಬಿಡುವುದಿಲ್ಲ."[1]

1. ಪು. ೩. ಪೀಠಿಕೆ, ವಿ. ರಾಘವನ್‌ರವರ "ಕಥಾಸರಿತ್ಸಾಗರ ಸಂಗ್ರಹ'ದ ದೇವುಡುರವರ ಕನ್ನಡ ಭಾಷಾಂತರ)

'ಅಲ್ಲಲ್ಲಿ ಕಾವ್ಯಗುಣಗಳು ಪ್ರಕಟವಾದರೂ ಅವು ಕಥೆಯನ್ನು ಸ್ವಾರಸ್ಯಗೊಳಿಸುತ್ತವೆ. ಮನೋಗ್ರಾಹಿಗಳಾದ ಉಪಮೆಗಳು, ವಿವೇಕದ್ಯೋತಕವಾದ ಅನುಭವಗಳು ಅಲ್ಲಲ್ಲಿ ಬಂದರೂ ಶೈಲಿಯು ಎಲ್ಲಿಯೂ ಆಲಂಕಾರಿಕವಾಗುವುದಿಲ್ಲ. ಕಥೆಯ ಓಟವು ಮುಗ್ಗರಿಸುವುದಿಲ್ಲ.'[1]

"ಕಾವ್ಯವಾಗಿ ಇದರ ಭಾಷೆ ಲಲಿತವಾಗಿದೆ. ಆದರೆ ಬಂಧ ಬಿಗಿಯಾಗಿದೆ. ಅತಿಯಾದ ಅಲಂಕಾರ ಕವಿಸಮಯಗಳಾಗಲಿ ಪುರಾಣಗಳ ಪೇಲವತೆಯಾಗಲಿ ಇಲ್ಲ."[2]

ಕಥಾಸರಿತ್ಸಾಗರವನ್ನು ಒಟ್ಟು ೧೮ ಲಂಬಕಗಳಾಗಿ ವಿಭಾಗಮಾಡಲಾಗಿದೆ. ಅವು ಮತ್ತೆ ೧೨೪ ತರಂಗಗಳಾಗಿ ವಿಭಾಗಿಸಲ್ಪಟ್ಟಿವೆ. ಕೆಲವು ಲಂಬಕಗಳು ಬಹಳ ದೊಡ್ಡ ಪ್ರಮಾಣದವುಗಳಾಗಿದ್ದರೆ ಕೆಲವು ತೀರ ಚಿಕ್ಕದಾಗಿವೆ. ಹನ್ನೊಂದನೆಯ ಲಂಬಕದಲ್ಲಿ ಕೇವಲ ೧೧೪ ಶ್ಲೋಕಗಳಿದ್ದರೆ ೧೨ನೆಯದರಲ್ಲಿ ೪೯೨೮ ಶ್ಲೋಕಗಳಿವೆ. ಹದಿನೆಂಟು ಎಂಬ ಸಂಖ್ಯೆಗೆ ನಮ್ಮ ಸಾಹಿತ್ಯ ಪರಂಪರೆಯಲ್ಲಿ ಕೊಟ್ಟಿರುವ ಮಹತ್ವದಿಂದಲೋ ಏನೋ, ಇಲ್ಲಿಯೂ ಹದಿನೆಂಟು ಲಂಬಕಗಳಾಗಿ ಕೃತಿಯನ್ನು ವಿಭಾಗಿಸಲು ಕೆಲವು ಸಣ್ಣ ಲಂಬಕಗಳನ್ನು ಸೇರಿಸಲಾಗಿದೆಯೆನ್ನಿಸುತ್ತದೆ.

ಈ ಕೃತಿಯ ೧೮ ಲಂಬಕಗಳು ಈ ರೀತಿ ಇವೆ:

| | | | |
|---|---|---|---|
| ೧. | ಕಥಾಪೀಠಲಂಬಕ | ೨. | ಕಥಾಮುಖಲಂಬಕ |
| ೩. | ಲಾವಾಣಕಲಂಬಕ | ೪. | ನರವಾಹನದತ್ತಜನನಲಂಬಕ |
| ೫. | ಚತುರ್ದಾರಿಕಾಲಂಬಕ | ೬. | ಮದನಮಂಚುಕಾಲಂಬಕ |
| ೭. | ರತ್ನಪ್ರಭಾಲಂಬಕ | ೮. | ಸೂರ್ಯಪ್ರಭಲಂಬಕ |
| ೯. | ಅಲಂಕಾರವತೀಲಂಬಕ | ೧೦. | ಶಕ್ತಿಯಶೋಲಂಬಕ |
| ೧೧. | ವೇಲಾಲಂಬಕ | ೧೨. | ಶಶಾಂಕವತೀಲಂಬಕ |
| ೧೩. | ಮದಿರಾವತೀಲಂಬಕ | ೧೪. | ಪಂಚಲಂಬಕ |
| ೧೫. | ಮಹಾಭಿಷೇಕಲಂಬಕ | ೧೬. | ಸುರತಮಂಜರೀಲಂಬಕ |
| ೧೭. | ಪದ್ಮಾವತೀಲಂಬಕ | ೧೮. | ವಿಷಮಶೀಲಲಂಬಕ |

ಒಟ್ಟು ೧೮ ಲಂಬಕಗಳಿರುವ ಈ ಕಾವ್ಯವು ರಾಮಾಯಣಕ್ಕಿಂತ ಕೇವಲ ೨೦೦೦ ಶ್ಲೋಕಗಳಷ್ಟು ಕಡಿಮೆಯಿದ್ದರೂ ಇದರ ಗಾತ್ರ ಎಷ್ಟೆಂದರೆ ಪ್ರಾಚೀನ ಗ್ರೀಕ್ ಇತಿಹಾಸಕಾವ್ಯಗಳಾದ "ಇಲಿಯಡ್", "ಒಡೆಸ್ಸಿ' ಇವೆರಡನ್ನೂ ಸೇರಿಸಿದರೂ ಅವಕ್ಕೆ ಎರಡರಷ್ಟಾಗುವುದು.[3]

ಈ ಕೃತಿಯ ವಿಭಾಗಗಳಿಗೆ ಲಂಬಕವೆಂಬ ಹೆಸರಿಟ್ಟಿರುವುದು ವಿದ್ವಾಂಸರ ಚರ್ಚೆಗೆ ಗ್ರಾಸವಾಗಿದೆ. "ಲಂಬಕ 'ಗಳ ಉಪವಿಭಾಗಗಳಾದ ತರಂಗಗಳು, ಅಲೆಗಳು ಎಂಬ ಅರ್ಥದಲ್ಲಿ ಸಾಗರಕ್ಕೆ ಹೊಂದಿಕೊಂಡರೂ ಲಂಬಕವೆಂಬುದು ನದಿಗಾಗಲಿ, ಸಾಗರಕ್ಕಾಗಲಿ ಹೊಂದಿಕೊಳ್ಳುವುದಿಲ್ಲ. ಲಕೋತ್,

---

1. ಅದೇ
2. ಎ. ಆರ್. ಕೃಷ್ಣಶಾಸ್ತ್ರೀ: "ಕಥಾಮೃತ ' ಪೀಠಿಕೆ xiii
3. ಅದೇ

ಕೀತ್ ಮುಂತಾದ ವಿದ್ವಾಂಸರು "ಲಂಬಕ'ವನ್ನು "ಲಂಭಕ'ವೆಂದು ತಿದ್ದಿ ಅದಕ್ಕೆ ಲಾಭ ಅಥವಾ ವಿಜಯ ಎಂದು ಅರ್ಥಮಾಡಿರುತ್ತಾರೆ. ದಂಡಿಯು ಕಥಾಲಕ್ಷಣವನ್ನು ಹೇಳುವಾಗ ""ಬೃಹತ್ಕಥಾಲಂಭೈರಿವ ಸಾಲಭಂಜಿಕೋಪೇತೈಃ" ಎಂಬಲ್ಲಿಯೂ, ಜಿನಸೇನನು "ಆದಿಪುರಾಣ'ದಲ್ಲಿ ""ಅದ್ಭುತಾರ್ಥಾಮಿಮಾಂ ದಿವ್ಯಾಂ ಪರಮಾರ್ಥಾಂ ಬೃಹತ್ಕಥಾಂ। ಲಂಭೈರನೇಕೈಃ ಸಂದೃಬ್ಧಾಂ ಗುಣಾಢ್ಯೈಃ ಪೂರ್ವಸೂರಿಭಿಃ" ಎಂಬಲ್ಲಿಯೂ ಲಂಭವೆಂಬ ವಿಭಾಗವನ್ನು ಹೆಸರಿಸುತ್ತಾರೆ. ಎ. ಆರ್. ಕೃಷ್ಣಶಾಸ್ತ್ರಿಗಳು ತಮ್ಮ "ಕಥಾಮೃತ'ದ ಪೀಠಿಕೆಯಲ್ಲಿ ಇದರ ಬಗ್ಗೆ ಚರ್ಚಿಸುತ್ತಾ "'ಲಂಭವೇ ಲಂಭಕ ಎಂದು ಅದಕ್ಕೆ ವ್ಯುತ್ಪತ್ತಿಯನ್ನೇನೋ ಹೇಳಬಹುದು. ಆದರೆ ಲಾಭ ಎಂಬ ಅಷ್ಟೇ ಪ್ರಮಾಣದ ಶಬ್ದವೂ ರೂಢವೂ ಸುಲಭವೂ ಆಗಿರುವಾಗ ಅದನ್ನು ಬಿಟ್ಟು ಅಪ್ರತೀತವಾದ ಲಂಭವನ್ನಿಟ್ಟುಕೊಂಡು ಅದಕ್ಕೆ ಸ್ವಾರ್ಥದ 'ಕ' ಪ್ರತ್ಯಯವನ್ನು ಹತ್ತಿಸಿ ಏಕೆ ಕ್ಲಿಷ್ಟಕಲ್ಪನೆ ಮಾಡಬೇಕೋ ಗೊತ್ತಾಗುವುದಿಲ್ಲ" ಎನ್ನುತ್ತಾರೆ.[1] ಈ ಲಂಭಕವು ಅಲ್ಪಪ್ರಾಣವಾಗಿ ಲಂಬಕವಾಗಿರುವುದು ನೀಳವಾಗಿರುವುದು ಎಂಬ ಅರ್ಥದಲ್ಲಿ. ಒಂದು ನೀಳ್ಗತೆಯ ವಾಹಿನಿಯನ್ನು ಸೂಚಿಸುವುದರಿಂದ ಈ ಅರ್ಥದಲ್ಲಿ ಸೋಮದೇವನು ಅದನ್ನು ಬಳಸಿರಬಹುದೆಂದು ಹೇಳಬಹುದಾಗಿದೆ.

ಈ ಕಥಾವಾಹಿನಿಯನ್ನು ಸೋಮದೇವನು ಕಶ್ಮೀರದ ಅನಂತರಾಜನ ಹೆಂಡತಿ ಸೂರಮತಿಯ ಚಿತ್ತವಿನೋದಕ್ಕಾಗಿ ಬರೆದನೆಂಬುದು ಇದೇ ಕೃತಿಯ ಕೊನೆಯಲ್ಲಿ ಇರುವ ಪ್ರಶಸ್ತಿಯಿಂದ ತಿಳಿಯುತ್ತದೆ: "'ದೇವ್ಯಾಃ ಕ್ಷಣಂ ಚಿತ್ತವಿನೋದ ಹೇತೋಃ" (ಪ್ರಶಸ್ತಿ. ಶ್ಲೋ.೧.) ಅನಂತರಾಜನ ರಾಣಿಯು 'ಗಿರಿಶಾರ್ಚನಹೋಮಕರ್ಮನಾನಾಪ್ರದಾನವಿಧಿಬದ್ಧಸಮುದ್ಯಮೆಯಾಗಿದ್ದಳು. ಸರ್ವದಾ ಈಶ್ವರಾರ್ಚನೆ, ಹೋಮಕರ್ಮಾದಿಗಳು, ದಾನಧರ್ಮ ಮುಂತಾದುವುಗಳನ್ನು ವಿಧಿಪೂರ್ವಕ ಮಾಡುವುದರಲ್ಲೇ ನಿರತಳು. "'ಶಾಸ್ತ್ರೇಷು ನಿತ್ಯವಿಹಿತಶ್ರವಣಶ್ರಮಾಯಾಃ" ಅವಳು ನಿತ್ಯವೂ ಶಾಸ್ತ್ರವಿಚಾರಗಳಲ್ಲಿ ಕೇಳುವ ಶ್ರಮವನ್ನು ಕಿವಿಗಳಿಗೆ ಸದಾ ಕೊಡುತ್ತಿರುವವಳು. ಅಂತಹವಳಿಗೆ ಈ ಧಾರ್ಮಿಕಕ್ರಿಯೆಗಳು ಹಾಗೂ ಶಾಸ್ತ್ರ ಶ್ರವಣಕಾರ್ಯಗಳಿಂದ ಮನಸ್ಸಿಗೆ ಸ್ವಲ್ಪ ವಿರಾಮ ಕೊಡಲು, ಅವಳಿಗೆ ಮನೋರಂಜನೆಯೊದಗಿಸಲು ಈ ಕಥೆಯನ್ನು ಸೋಮದೇವನು ಸಂಗ್ರಹಿಸಿ ಹೇಳಿದನು.

ಈ ಪ್ರಶಸ್ತಿಯ ಭಾಗದಲ್ಲಿ ಈ ಕೃತಿಯನ್ನು 'ಬೃಹತ್ಕಥೆಯ ಸಾರ' ಎಂದು ಹೇಳಲಾಗಿದೆ. ಗುಣಾಢ್ಯನು ಬರೆದ 'ಬೃಹತ್ಕಥೆ'ಯ ಸಾರಸಂಗ್ರಹವೇ ಇದು ಎಂಬ ಅಂಶ ಇದರಿಂದ ಸ್ಪಷ್ಟವಾಗುತ್ತದೆ.

ಈ ಕೃತಿಯ ಮೊದಲನೆಯ ಲಂಬಕವಾದ ಕಥಾಪೀಠದಲ್ಲಿ ಇದರ ಪೌರಾಣಿಕ ಹಿನ್ನೆಲೆ ಹಾಗೂ ಚಾರಿತ್ರಿಕ ಹಿನ್ನೆಲೆಗಳು ತಿಳಿಯುತ್ತವೆ. ಈ ಲಂಬಕವು ಕಥೆಗಳ ಕಥೆಯನ್ನು ಹೇಳುವ ಕಥಾಪೀಠಿಕೆ.

ಇದರಲ್ಲಿ ಈಶ್ವರನು ಪಾರ್ವತಿಗೆ ಅಪೂರ್ವ ರಮ್ಯವಾದ ಕಥೆಗಳನ್ನು ಹೇಳುವುದರಿಂದ ಹಿಡಿದು, ಅದನ್ನು ಕದ್ದು ಕೇಳಿದ ಗಣವೂ, ಅವನ ಮಿತ್ರಗಣವೂ ಶಾಪಗ್ರಸ್ತರಾಗಿ ಭೂಮಿಯಲ್ಲಿ ಹುಟ್ಟಿ ಕಾಣಭೂತಿಯೆಂಬ ಪಿಶಾಚನಿಗೆ ಕಥೆಯನ್ನು ಹೇಳಿ, ಅವನಿಂದ ಗುಣಾಢ್ಯನು ಕೇಳಿ ಅವನಿಂದ ಒಂದು ಲಕ್ಷ ಶ್ಲೋಕ ಮಾತ್ರ ಸಾತವಾಹನರಾಜನಿಗೆ ಸೇರಿ ಅವನು ಕಥಾಪೀಠವನ್ನು ಬರೆದು, ಅನಂತರ ಅದು

1. ಪೀಠಿಕೆ xiv "ಕಥಾಮೃತ': ಎ.ಆರ್.ಕೃ.

ಜಗತ್ತಿನಲ್ಲಿ ವಿಸ್ತಾರವಾಗಿ ಪ್ರಸಿದ್ಧವಾಗುವವರೆಗಿನ ಕಥೆ ಇದೆ. ಕಥೆಗಳನ್ನು ಹೇಳಿದ ಗಣಗಳಿಗೆ ಶಾಪವಿಮೋಚನೆ. ಇದರಿಂದ ಯಾರಿಗೂ ತಿಳಿದಿರದ ಕಥೆ ಜಗತ್ಪ್ರಸಿದ್ಧವಾಗುತ್ತದೆ. ಆದರೆ ಅದಕ್ಕಾಗಿ ಇಬ್ಬರು ಗಣಗಳಿಗೆ ಶಾಪ, ಅವರು ಮನುಷ್ಯರಾಗಿ ಹುಟ್ಟುವುದು, ಕಾಣಭೂತಿಯೆಂಬ ಪಿಶಾಚಿಯ ಮೂಲಕ ಗುಣಾಢ್ಯನಿಗೆ ತಿಳಿದದ್ದು, ವಿಶ್ವ ಪ್ರಸಿದ್ಧ ಭಾಷೆಗಳನ್ನು ಪ್ರತಿಜ್ಞೆಯಿಂದ ಸೋತುಬಿಟ್ಟಿದ್ದರಿಂದ ಪೈಶಾಚೀ ಭಾಷೆಯಲ್ಲಿ ಅವನು ಬರೆದು ರಾಜನ ಅವಜ್ಞೆಗೆ ಒಳಗಾಗಿ ಅದರ ಹೆಚ್ಚು ಭಾಗವನ್ನು ಅಗ್ನಿಗೆ ಆಹುತಿಯಾಗಿ ಅರ್ಪಿಸಿದ್ದು ಮೊದಲಾದ ರೋಚಕ ವೃತ್ತಾಂತಗಳು ಬರುತ್ತವೆ.

ಇದರಿಂದ ಮೂಲಕಥೆಗಳು ಪಿಶಾಚಭಾಷೆಯಲ್ಲಿ ಇದ್ದದ್ದು ಸ್ಪಷ್ಟವಾಗುತ್ತದೆ. ಆದರೆ ಅದಕ್ಕೆ ಸಂಸ್ಕೃತದ ಸ್ಥಾನ ಇಲ್ಲದ್ದರಿಂದ ಹಾಗೂ ಸಾಹಿತ್ಯವು ಅದರಲ್ಲಿ ಸೃಷ್ಟವಾಗದಿದ್ದುದರಿಂದ ಅದು ತಿರಸ್ಕಾರಕ್ಕೆ ಒಳಗಾಗಿ ಮತ್ತೆ ಅದಕ್ಕೆ ರಾಜಮನ್ನಣೆ ದೊರೆತು ಲೋಕದಲ್ಲಿ ಪ್ರಸಾರವಾಗಿದ್ದುದೂ ಚಾರಿತ್ರಿಕವಾದ ಅಂಶಗಳು. ಜಗತ್ತಿಗೇ ಕಥೆಗಳನ್ನು ಕೊಟ್ಟ ಈ ಬೃಹತ್ಕಥೆಯನ್ನು ಅನಂತರ ಸಂಸ್ಕೃತದಲ್ಲಿ ಅನೇಕರು ಸಂಗ್ರಹಿಸಿದರು. ಅದರಲ್ಲಿ ಸೋಮದೇವನ "ಕಥಾಸರಿತ್ಸಾಗರ 'ವೇ 'ವಿಸ್ತಾರ'ವಾದ ಸಂಗ್ರಹ. ಕಾವ್ಯಮಯವಾದ ಆದರೆ ಸರಳವಾದ ಭಾಷೆಯಲ್ಲಿ ಅವನು ಇದನ್ನು ಬರೆದಾಗ ಅದು ಸಂಸ್ಕೃತ ಸಾಹಿತ್ಯದ ಒಂದು ಅಪೂರ್ವವಾದ ಆವಿಷ್ಕಾರವಾಯಿತು.

ಕಥಾಪೀಠದಲ್ಲಿ ಬರುವ ಕಥೆಯ ಉಗಮದ ಬಗೆಗಿನ ಕಥೆಯನ್ನು ವಿಸ್ತಾರವಾಗಿ ನೋಡಿದಾಗ ಕಾಲದ ಅಸ್ಪಷ್ಟವಾದ ಅವಧಿಯೊಂದರಲ್ಲಿ ನಡೆದಿರಬಹುದಾದ ಸಂದರ್ಭಗಳು ಮನಸ್ಸಿನ ಮುಂದೆ ಸುಳಿಯುತ್ತವೆ. ಇದರಲ್ಲಿ ನೀರಕ್ಷೀರನ್ಯಾಯದಂತೆ ಸತ್ಯಾಂಶಗಳನ್ನು ಸಂಗ್ರಹಿಸಿಕೊಳ್ಳಬೇಕಾಗುತ್ತದೆ.

ಈ ಕಥೆಯ ಪ್ರಕಾರ, ಒಮ್ಮೆ ಪಾರ್ವತಿಯು ಈಶ್ವರನನ್ನು ಕುರಿತು ತನಗೊಂದು ನೂತನವೂ ರಮ್ಯವೂ ಆದ ಕಥೆಯೊಂದನ್ನು ಹೇಳಬೇಕೆಂದು ಕೇಳಿದಾಗ, ಅವನು ದಿವ್ಯವಾದ ಕಥೆಯೊಂದನ್ನು ಹೇಳುತ್ತೇನೆಂದು ಮಾತುಕೊಡುತ್ತಾನೆ. ಕಥೆಯ ಓಟಕ್ಕೆ ಅಡಚಣೆಯಾಗಬಾರದೆಂದು ಪಾರ್ವತಿಯು ಯಾರನ್ನೂ ಒಳಗೆ ಬಿಡಬಾರದೆಂದು ನಂದಿಗೆ ಆಜ್ಞಾಪಿಸಿ ಬಾಗಿಲು ಹಾಕಿಕೊಳ್ಳುತ್ತಾಳೆ. ಈಶ್ವರನು ನಿತ್ಯದುಃಖಿಗಳಾದ ಮನುಷ್ಯರ ಕಥೆ ಮನೋಹರವಲ್ಲದುದರಿಂದ ನಿತ್ಯಸುಖಿಗಳಾದ ವಿದ್ಯಾಧರರ ಕಥೆಯನ್ನು ಹೇಳುತ್ತೇನೆ ಎಂದು ಪ್ರಾರಂಭಮಾಡುತ್ತಾನೆ. ಆಗ ಪುಷ್ಪದಂತನೆಂಬ ಗಣನು ಬರಲು ನಂದಿಯು ಅವನನ್ನು ಬಾಗಿಲಿನಲ್ಲಿ ತಡೆದುಬಿಡುತ್ತಾನೆ. ಪುಷ್ಪದಂತನು ಕುತೂಹಲದಿಂದ ಅದೃಶ್ಯನಾಗಿ ಒಳಹೊಕ್ಕು ಈಶ್ವರನು ಹೇಳಿದ ಏಳು ವಿದ್ಯಾಧರರ ಅದ್ಭುತ ಚರಿತ್ರೆಯನ್ನು ಕೇಳಿಕೊಂಡು ಮನೆಗೆ ಹೋಗಿ ತನ್ನ ಪತ್ನಿ ಜಯೆಗೆ ಅದನ್ನು ಹೇಳುತ್ತಾನೆ. ಜಯೆಯು ಅನಂತರ ಅದನ್ನು ಪಾರ್ವತಿಗೇ ಹೇಳುತ್ತಾಳೆ. ಪಾರ್ವತಿಯು ಈ ಕಥೆಯು ಅಪೂರ್ವವಾದದ್ದೇನಲ್ಲ,ಇದು ಜಯೆಗೂ ಗೊತ್ತಿದೆ ಎಂದು ಈಶ್ವರನಿಗೆ ಕೋಪದಿಂದ ಹೇಳಿದಾಗ ಅವನು ಧ್ಯಾನದಿಂದ ನಡೆದ ಸಂಗತಿಯನ್ನು ತಿಳಿದು ಪಾರ್ವತಿಗೆ ತಿಳಿಸುತ್ತಾನೆ. ಆಗ ಪಾರ್ವತಿಯು ಕೋಪದಿಂದ ಪುಷ್ಪದಂತನಿಗೆ "“ಮನುಷ್ಯನಾಗಿ ಹುಟ್ಟು” ಎಂದು ಶಾಪ ಕೊಡುತ್ತಾಳೆ. ಆಗ ಮಾಲ್ಯವಂತನೆಂಬ ಗಣನು ಅವನಿಗಾಗಿ ಪ್ರಾರ್ಥಿಸಿಕೊಳ್ಳಲು ಅವನಿಗೂ ಅದೇ ರೀತಿ ಶಾಪ ಕೊಡುತ್ತಾಳೆ. ಆಗ ಜಯೆಯು ಪ್ರಾರ್ಥಿಸಿಕೊಂಡಾಗ ಪಾರ್ವತಿಯು

“ವಿಂಧ್ಯಾಟವಿಯಲ್ಲಿ ಕಾಣಭೂತಿಯೆಂಬ ಪಿಶಾಚನಿದ್ದಾನೆ. ಅವನಿಗೆ ಈ ಕಥೆಯನ್ನು ಹೇಳಿದಾಗ ಪುಷ್ಪದಂತನಿಗೆ ವಿಮೋಚನೆಯಾಗುತ್ತದೆ. ಆ ಕಾಣಭೂತಿಯು ಕಥೆಯನ್ನು ಮಾಲ್ಯವಂತನಿಗೆ ಹೇಳಿದಾಗ ಕಾಣಭೂತಿಯು ಶಾಪಮುಕ್ತನಾಗುತ್ತಾನೆ. ಅನಂತರ ಈ ಕಥೆಯನ್ನು ಪ್ರಸಿದ್ಧಪಡಿಸಿ ಮಾಲ್ಯವಂತನೂ ಶಾಪಮುಕ್ತನಾಗುತ್ತಾನೆ” ಎಂದು ಶಾಪ ವಿಮೋಚನೆಯ ಮಾರ್ಗವನ್ನು ಸೂಚಿಸುತ್ತಾಳೆ. ಅನಂತರ ಇದರಂತೆ ಪುಷ್ಪದಂತನು ವರರುಚಿ ಎಂಬ ಹೆಸರಿನಿಂದ ಕೌಶಾಂಬಿಯಲ್ಲಿಯೂ, ಮಾಲ್ಯವಂತನು ಗುಣಾಢ್ಯನೆಂಬ[1] ಹೆಸರಿನಿಂದ ಸುಪ್ರತಿಷ್ಠಿತ ನಗರದಲ್ಲಿಯೂ ಹುಟ್ಟುತ್ತಾರೆ.

ವರರುಚಿಯು ಕಾತ್ಯಾಯನನೆಂಬ ಹೆಸರಿನಿಂದ ಪ್ರಸಿದ್ಧನಾಗಿ ನಂದಮಹಾರಾಜನಲ್ಲಿ ಮಂತ್ರಿತ್ವವನ್ನು ಮಾಡಿ, ಅಲ್ಲಿ ನಡೆದ ರಾಜಕೀಯ ವಿದ್ಯಮಾನಗಳಿಂದ ಖಿನ್ನನಾಗಿ, ಎಲ್ಲವೂ ಚಂಚಲವೆಂದುಕೊಂಡು ವಿಂಧ್ಯವಾಸಿನಿಯ ದರ್ಶನಕ್ಕೆಂದು ಬರುತ್ತಾನೆ. ವಿಂಧ್ಯವಾಸಿನಿಯು ಅವನ ಸ್ವಪ್ನದಲ್ಲಿ ಬಂದು ವಿಂಧ್ಯಾರಣ್ಯದಲ್ಲಿರುವ ಕಾಣಭೂತಿಯನ್ನು ನೋಡಲು ಆಜ್ಞಾಪಿಸುತ್ತಾಳೆ. ಅದರಂತೆ ಅವನು ಕಾಡಿನಲ್ಲಿ ತಿರುಗುತ್ತ ಒಂದು ದೊಡ್ಡ ಆಲದ ಮರದ ಕೆಳಗೆ ನೂರಾರು ಪಿಶಾಚಗಳ ನಡುವೆ ಕುಳಿತಿದ್ದ ಕಾಣಭೂತಿಯೆಂಬ ಪಿಶಾಚನನ್ನು ಕಾಣುತ್ತಾನೆ. ಕಾಣಭೂತಿಯು ವರರುಚಿಗೆ ನಮಸ್ಕರಿಸಿ ಪುಷ್ಪದಂತನಿಗಾಗಿ ಕಾದಿರುವುದಾಗಿ ಹೇಳಿದಾಗ ವರರುಚಿಗೆ ಅವನ ಪೂರ್ವಜನ್ಮದ ಜ್ಞಾಪಕ ಬಂದು ತಾನೇ ಪುಷ್ಪದಂತನೆಂದು ಹೇಳಿ, ಏಳು ಲಕ್ಷ ಗ್ರಂಥ ಪ್ರಮಾಣದ ಏಳು ದೊಡ್ಡ ಕಥೆಗಳನ್ನು ಹೇಳುತ್ತಾನೆ. ಅನಂತರ ಅವನು ಕಾಣಭೂತಿಗೆ “ಇನ್ನು ನಾನು ದೇಹ ಬಿಡುತ್ತೇನೆ. ಈಗ ಶಾಪ ವಿಮೋಚನೆ ಯಾಯಿತು. ನೀನು ಗುಣಾಢ್ಯನೆಂಬ ಬ್ರಾಹ್ಮಣನು ಬರುವವರೆಗೆ ಇಲ್ಲಿಯೇ ಇರು. ಅವನಿಗೆ ನೀನು ಈ ಮಹಾಕಥೆಯನ್ನು ಹೇಳಿದರೆ ನಿನ್ನ ಶಾಪ ವಿಮೋಚನೆಯಾಗುತ್ತದೆ” ಎಂದು ಹೇಳಿ ಅಲ್ಲಿ ದೇಹತ್ಯಾಗ ಮಾಡುತ್ತಾನೆ.

ಗುಣಾಢ್ಯನು ಪ್ರತಿಷ್ಠಾನದೇಶದ ಸುಪ್ರತಿಷ್ಠಿತ ಎಂಬ ನಗರದಲ್ಲಿ ಸೋಮಶರ್ಮ ಶ್ರುತಾರ್ಥೆಯರ ಮಗನಾಗಿ ಹುಟ್ಟಿ ದಕ್ಷಿಣಾಪಥದಲ್ಲಿ ವಿದ್ಯಾಭ್ಯಾಸವನ್ನು ಮಾಡಿ ಮಹಾಪಂಡಿತನಾಗಿ ಸ್ವದೇಶಕ್ಕೆ ಹಿಂದಿರುಗಿ ತನ್ನ ವಿದ್ಯಾಬಲದಿಂದ ಸಾತವಾಹನ ರಾಜನ ಬಳಿ ಮಂತ್ರಿಯಾಗಿ ಸೇರಿಕೊಳ್ಳುತ್ತಾನೆ. ಒಮ್ಮೆ ಸಾತವಾಹನನು ಜಲಕ್ರೀಡೆಯಲ್ಲಿ ರಾಣಿಯೊಬ್ಬಳಿಂದ ಅವಮಾನಿತನಾಗುತ್ತಾನೆ. ಅವನು ಅವಳ ಮೇಲೆ ನೀರೆರಚಿದಾಗ ಅವಳು ಮೋದಕೈಸ್ತಾಡಯ ಎನ್ನುತ್ತಾಳೆ. (ಮಾ+ಉದಕೈಃ+ತಾಡಯ= ನೀರಿನಿಂದ ಹೊಡೆಯಬೇಡ) ಅದನ್ನು ""ಮೋದಕೈಸ್ತಾಡಯ” ಎಂದರೆ ""ಕಡುಬುಗಳಿಂದ ಹೊಡೆ” ಎಂದು ಅರ್ಥ ಮಾಡಿಕೊಂಡು ಕಡುಬುಗಳಿಂದ ರಾಜನು ಹೊಡೆಯುತ್ತಾನೆ. ಅವನ ಈ ಅಜ್ಞಾನವನ್ನು ತೋರಿಸಿ ಅವಳು ಅವಮಾನ ಮಾಡಿದಾಗ, ಅವನು ಅರಮನೆಗೆ ಬಂದು ಅನ್ನಾಹಾರಗಳನ್ನು ತೊರೆದು ಕುಳಿತುಬಿಡುತ್ತಾನೆ. ಈ ವಿಷಯ ಗುಣಾಢ್ಯನಿಗೂ ಮತ್ತೊಬ್ಬ ಮಂತ್ರಿ ಶರ್ವವರ್ಮನಿಗೂ ತಿಳಿದು,

---

1. ಗುಣಾಢ್ಯನ ಕಾಲವನ್ನು ಪಾಶ್ಚಾತ್ಯ ಪಂಡಿತರು ಕ್ರಿ.ಶ. ೧ನೇ ಶತಮಾನದಿಂದ ೬ನೇ ಶತಮಾನದವರೆಗೆ ತೆಗೆದುಕೊಂಡು ಹೋಗುತ್ತಾರೆ. ಕೀತ್, ಡೇ ಮುಂತಾದವರು ಸ್ಟೇಯರ್ ಎಂಬ ವಿದ್ವಾಂಸರ ಅಭಿಪ್ರಾಯವನ್ನು ಅನುಸರಿಸಿ ಕ್ರಿ.ಶ.೫೦೦ ರಿಂದ ೬೦೦ರ ಒಳಗೆ ಅವನು ಇದ್ದಿರಬೇಕೆಂದು ನಂಬುತ್ತಾರೆ.

ರಾಜನನ್ನು ಕೇಳಿದಾಗ ಅವನು "ಪಾಂಡಿತ್ಯ ಸಂಪಾದಿಸಲು ಎಷ್ಟು ವರ್ಷಗಳು ಬೇಕಾಗುತ್ತವೆ" ಎಂದು ಕೇಳುತ್ತಾನೆ. ಅದಕ್ಕೆ ಗುಣಾಢ್ಯನು ಸರ್ವಶಾಸ್ತ್ರಗಳಿಗೂ ದ್ವಾರದಂತಿರುವ ವ್ಯಾಕರಣಶಾಸ್ತ್ರವನ್ನು ಕಲಿಯಲು ಹನ್ನೆರಡು ವರ್ಷಗಳು ಬೇಕು. ಅದನ್ನು ನಾನು ಆರೇ ವರ್ಷಗಳಲ್ಲಿ ಹೇಳಿಕೊಡುತ್ತೇನೆ ಎನ್ನುತ್ತಾನೆ. ಅದನ್ನು ಕೇಳಿ ಗುಣಾಢ್ಯನು "'ಇದು ಅಸಂಭವ. ಆರು ತಿಂಗಳಲ್ಲೇ ನೀನು ಕಲಿಸಿಕೊಟ್ಟರೆ ಮನುಷ್ಯರಲ್ಲಿ ಪ್ರಚಾರವಾಗಿರುವ ಸಂಸ್ಕೃತ, ಪ್ರಾಕೃತ, ದೇಶ್ಯ ಈ ಮೂರು ಭಾಷೆಗಳನ್ನೂ ಬಿಟ್ಟುಬಿಡುತ್ತೇನೆ" ಎಂದು ಪ್ರತಿಜ್ಞೆ ಮಾಡುತ್ತಾನೆ. ಆದರೆ ಶರ್ವವರ್ಮನು ಕುಮಾರಸ್ವಾಮಿಯನ್ನು ಆರಾಧಿಸಿ ಒಲಿಸಿಕೊಂಡು ಸಾತವಾಹನನು ಕ್ಷಣಮಾತ್ರದಲ್ಲಿ ವಿದ್ವಾಂಸನಾಗುವಂತೆ ಮಾಡಿಬಿಡುತ್ತಾನೆ.

ಗುಣಾಢ್ಯನು ಯಾವ ಭಾಷೆಯನ್ನೂ ಆಡಲಾರದೆ ಮೌನದಿಂದ ಊರನ್ನು ಬಿಟ್ಟು ವಿಂಧ್ಯವಾಸಿನಿಯ ದರ್ಶನಕ್ಕೆಂದು ಬರುತ್ತಾನೆ. ಆಗ ದೇವಿಯು ಕನಸಿನಲ್ಲಿ ಪ್ರತ್ಯಕ್ಷಳಾಗಿ ವಿಂಧ್ಯಾಟವಿಗೆ ಹೋಗಿ ಕಾಣಭೂತಿಯನ್ನು ಕಾಣಲು ಆಜ್ಞೆ ಮಾಡುತ್ತಾಳೆ. ಅವನು ಹಾಗೆಯೇ ಬಂದು ಪಿಶಾಚಭಾಷೆಯನ್ನು ಕಲಿತು ಕಾಣಭೂತಿಯನ್ನು ಕಂಡಾಗ, ಅವನ ಪೂರ್ವಜನ್ಮವೃತ್ತಾಂತವೆಲ್ಲಾ ನೆನಪಿಗೆ ಬರುತ್ತದೆ. ಆಗ ಕಾಣಭೂತಿಯು ಪಿಶಾಚಭಾಷೆಯಲ್ಲಿಯೇ ಏಳು ಕಥೆಗಳನ್ನು ಅವನಿಗೆ ಹೇಳುತ್ತಾನೆ. ಗುಣಾಢ್ಯನು ಪೈಶಾಚೀ ಭಾಷೆಯಲ್ಲಿಯೇ ತನ್ನ ರಕ್ತದಿಂದಲೇ ಏಳು ಲಕ್ಷ ಗ್ರಂಥದ ಪ್ರಮಾಣದಲ್ಲಿ ಆ ಕಥೆಗಳನ್ನು ಏಳು ವರ್ಷಗಳ ಕಾಲ ಬರೆಯುತ್ತಾನೆ. ಅದನ್ನು ನೋಡಿ ಕಾಣಭೂತಿಯು ಶಾಪಮುಕ್ತನಾಗುತ್ತಾನೆ.

ಈ ಪಿಶಾಚ ಭಾಷೆಯ ಮಹಾಗ್ರಂಥವನ್ನು ಸಾತವಾಹನನಿಗೆ ಅರ್ಪಿಸಲು ಅವನ ಶಿಷ್ಯರಿಬ್ಬರೂ ಹೋಗಿ ತೋರಿಸಿದಾಗ, ಅವನು ತಿರಸ್ಕಾರದಿಂದ "ಪ್ರಮಾಣಂ ಸಪ್ತಲಕ್ಷಾಣಿ ಪೈಶಾಚಂ ನೀರಸಂ ವಚಃ ಶೋಣಿತೇನಾಕ್ಷರನ್ಯಾಸೋ ಧಿಕ್ ಪಿಶಾಚಕಥಾಮಿಮಾಂ" ಅಂದರೆ ""ಏಳು ಲಕ್ಷಗ್ರಂಥ ! ನೀರಸವಾದ ಪೈಶಾಚ ಭಾಷೆ ! ಬರೆದಿರುವುದೋ ರಕ್ತದಲ್ಲಿ ! ಈ ಪಿಶಾಚ ಕಥೆಗೆ ಧಿಕ್ಕಾರ" ಎಂದುಬಿಟ್ಟನು.

ಶಿಷ್ಯರು ಈ ಮಹಾಕೃತಿಯನ್ನು ತಂದು ಗುಣಾಢ್ಯನಿಗೆ ಅರ್ಪಿಸಿದಾಗ ಅವನು ಖಿನ್ನನಾಗಿ ಹತ್ತಿರದಲ್ಲಿದ್ದ ಒಂದು ಬೆಟ್ಟಕ್ಕೆ ಹೋಗಿ ಒಂದು ಅಗ್ನಿಕುಂಡವನ್ನು ಸಿದ್ಧಮಾಡಿ ಪಶುಪಕ್ಷಿಗಳಿಗೆಲ್ಲಾ ಕೇಳಿಸುವಂತೆ ಒಂದೊಂದು ಹಾಳೆಯನ್ನು ಓದುತ್ತಾ ಅದನ್ನು ಅಗ್ನಿಗೆ ಅರ್ಪಿಸುತ್ತಾ ಬರುತ್ತಾನೆ. ಶಿಷ್ಯರ ಪ್ರಾರ್ಥನೆಯ ಮೇರೆಗೆ ನರವಾಹನದತ್ತನ ಚರಿತ್ರೆಯಿಂದ ಒಂದು ಲಕ್ಷ ಶ್ಲೋಕಗಳನ್ನು ಮಾತ್ರ ಉಳಿಸಿಕೊಳ್ಳುತ್ತಾನೆ.

ಏತನ್ಮಧ್ಯೆ ರಾಜನಿಗೆ ದೇಹಾಲಸ್ಯವಾಗಿ, ಅದು ಒಣಕಲು ಮಾಂಸವನ್ನು ತಿಂದುದರ ಪರಿಣಾಮವೆಂದು ವೈದ್ಯರು ಹೇಳಿದಾಗ, ಅಡಿಗೆಯವರನ್ನು ಅದರ ಬಗ್ಗೆ ವಿಚಾರಿಸಲಾಯಿತು. ಕಾಡಿನ ಪ್ರಾಣಿಗಳೆಲ್ಲಾ ಅನ್ನಾಹಾರಗಳನ್ನು ತೊರೆದು ಕಥೆ ಕೇಳುತ್ತ ನಿಂತಿರುವುದರಿಂದ ಅವುಗಳ ಮಾಂಸ ನಿಸ್ಸಾರವಾಗಿದೆ ಎಂಬುದನ್ನು ಅರಿತ ರಾಜನು ಆ ಸ್ಥಳಕ್ಕೆ ಹೋಗುತ್ತಾನೆ. ಅಲ್ಲಿ ಜಟಾಧಾರಿಯಾಗಿ ಹೋಮ ಮಾಡುತ್ತಿದ್ದ ಗುಣಾಢ್ಯನನ್ನು ನೋಡಿ, ಅವನು ಗಣಾವತಾರನೆಂದು ತಿಳಿದು, ಉಳಿದಿದ್ದ ಒಂದು ಲಕ್ಷ ಗ್ರಂಥಗಳಿದ್ದ ಕಥೆಯನ್ನು ತನಗೆ ಕೊಡಲು ಪ್ರಾರ್ಥಿಸುತ್ತಾನೆ. ಆಗ ಅದನ್ನು ಮನ್ನಿಸಿ

ಗುಣಾಢ್ಯನು ಉಳಿದಿದ್ದ ಕಥಾಭಾಗವನ್ನು ರಾಜನಿಗೆ ಅರ್ಪಿಸುತ್ತಾನೆ. ರಾಜನು ಆ ಕಥೆಯನ್ನು ತೆಗೆದುಕೊಂಡು ಬಂದು ಪಿಶಾಚೀ ಭಾಷೆಯಲ್ಲಿಯೇ ಒಂದು ಕಥಾಪೀಠವನ್ನು ಬರೆಯುತ್ತಾನೆ.

ಈ ಕಥೆಗಳ ಅಂತರಂಗವನ್ನು ನೋಡಿದಾಗ ಕಥೆಗಳ ಅತ್ಯಂತ ಪುರಾತನ ಸಂಗ್ರಹವಾದ ಗುಣಾಢ್ಯನ 'ಬೃಹತ್ಕಥೆ ' ಪೈಶಾಚೀ ಭಾಷೆಯಲ್ಲಿದ್ದುದರಿಂದ ಅವಜ್ಞೆಗೆ ಕಾರಣವಾಗಿದ್ದು, ಅನಂತರ ರಾಜನ ಮನ್ನಣೆಗೆ ಪಾತ್ರವಾಗಿ ಪ್ರಸಿದ್ಧವಾಯಿತು ಎಂಬ ಅಂಶ ಪ್ರತೀತವಾಗುತ್ತದೆ. ಗುಣಾಢ್ಯನು ವರರುಚಿಯ ಸಾಹಿತ್ಯದಿಂದ ತನ್ನ ಸಾಹಿತ್ಯವನ್ನು ಸಂಗ್ರಹಿಸಿಕೊಂಡು ಅದನ್ನು ಪೈಶಾಚೀ ಭಾಷೆಯಲ್ಲಿ ಬರೆದಿದ್ದಾನೆ. ಈ ಪೈಶಾಚೀ ಭಾಷೆಯು ಕಾಶ್ಮೀರದಲ್ಲಿ ಉಪಲಬ್ಧವಾಗಿದ್ದ ಹಾಗೂ ಅದರ ಸುತ್ತಿನ ಜನರಲ್ಲಿ ಬಳಕೆಯಲ್ಲಿದ್ದ ಒಂದು ಪ್ರಾಕೃತಭಾಷೆ ಎಂಬುದು ವಿದ್ವಾಂಸರ ಅಭಿಪ್ರಾಯ.[1]

ಆ ಕಾಲದಲ್ಲಿ ವಿದ್ವಾಂಸರಿಗೆ ಗ್ರಾಹ್ಯವಾಗಲು ಕೃತಿಗಳು ಸಂಸ್ಕೃತದಲ್ಲಿರಬೇಕಾದ ಆವಶ್ಯಕೆಯಿದ್ದದರಿಂದ, ಪ್ರಾಯಶಃ ಪೈಶಾಚೀ ಹಾಗೂ ಇತರ ದೇಶಭಾಷೆಗಳಲ್ಲಿ ಸಾಹಿತ್ಯ ಹುಟ್ಟದೇ ಇದ್ದುದರಿಂದ, ಗುಣಾಢ್ಯನ ಪಿಶಾಚೀ ಭಾಷೆಯ "ಬೃಹತ್ಕಥೆ 'ಯು ಅವಜ್ಞೆಗೆ ಒಳಗಾಗಿದ್ದಿರಬೇಕು. ಸುಮಾರು ಆರನೆಯ ಶತಮಾನದಲ್ಲಿದ್ದ ಗಂಗರಸ ದುರ್ವಿನೀತನು ಅದರ ಸಂಸ್ಕೃತ ರೂಪವನ್ನು ಸಿದ್ಧಗೊಳಿಸಿದನೆಂದು ಊಹಿಸಲಾಗಿದೆ. ಆದರೆ ಗ್ರಂಥದ ವಿಚಾರ ಲಭ್ಯವಿಲ್ಲ. ಇಂದು ನಮಗೆ ದೊರೆತಿರುವ ಈ "ಬೃಹತ್ಕಥೆ 'ಯ ಸಂಸ್ಕೃತ ರೂಪವೆಂದರೆ ಕ್ಷೇಮೇಂದ್ರನ "ಬೃಹತ್ಕಥಾಮಂಜರಿ' ಎಂಬ ಅವನ ಸಂಗ್ರಹ ಗ್ರಂಥ, ಬುಧಸ್ವಾಮಿಯ "ಬೃಹತ್ಕಥೆ 'ಯ "ಶ್ಲೋಕ ಸಂಗ್ರಹ' ಹಾಗೂ ಸೋಮದೇವನ "ಕಥಾಸರಿತ್ಸಾಗರ'. ಇದಲ್ಲದೆ ತಮಿಳಿನಲ್ಲಿ "ಪೆರುಂಗತೈ ' ಎಂಬ ಹೆಸರಿನ ಒಂದು ಗ್ರಂಥವೂ ಇದೆ.[2]

ಕಾಶ್ಮೀರದ ಕವಿ ಕ್ಷೇಮೇಂದ್ರನು ಸೋಮದೇವನಿಗಿಂತ ೨೫–೩೦ ವರ್ಷಗಳ ಮೊದಲು ಅನಂತರಾಜನ ಕಾಲದಲ್ಲಿ "ಬೃಹತ್ಕಥಾಮಂಜರಿ'ಯನ್ನು ಬರೆದನು. ಅದರಲ್ಲಿ ಸುಮಾರು ೭೫೦೦ ಶ್ಲೋಕಗಳು ಮಾತ್ರ ಇವೆ.

ಬುಧಸ್ವಾಮಿಯ ಕಾಲ ನಿರ್ಣಯ ಸ್ಪಷ್ಟವಾಗಿಲ್ಲ. ಸುಮಾರು ಎಂಟು ಅಥವಾ ಒಂಬತ್ತನೆಯ ಶತಮಾನದಲ್ಲಿದ್ದನೆಂಬುದು ಲಕೋತ್ ಅವರ ಅಭಿಪ್ರಾಯ. ಇದು ಮೂಲಗ್ರಂಥದ ಆಧಾರದ ಮೇಲೆ ಸ್ವತಂತ್ರವಾಗಿ ಬರೆದ ಗ್ರಂಥವಾಗಿಯೂ ಇರಬಹುದೆಂಬ ಅಭಿಪ್ರಾಯವೂ ಇದೆ.

## "ಕಥಾಸರಿತ್ಸಾಗರ 'ದ ಕಥಾವಸ್ತು

ಇದರಲ್ಲಿರುವ ಕಥೆಗಳೆಲ್ಲ ಇಹಕ್ಕೆ ಸಂಬಂಧಪಟ್ಟ ಜೀವನೋತ್ಸಾಹದ ಕತೆಗಳು. ಇದೊಂದು

---

1. ಬೃಹತ್ಕಥೆಯ ಭಾಷೆಯನ್ನು ದಂಡಿ ಮೊದಲಾದವರು ಭೂತಭಾಷೆ ಎಂದು ಕರೆದಿದ್ದಾರೆ. ಭೂತ, ಪಿಶಾಚಿ ಶಬ್ದಗಳ ಅರ್ಥಸಾಮ್ಯದಿಂದ ಆ ರೀತಿ ಅವರು ಬಳಸಿರಬಹುದು. ಪಾಶ್ಚಾತ್ಯ ವಿದ್ವಾಂಸ ಗ್ರಿಯರ್‌ಸನ್ ಅವರು ಕಾಶ್ಮೀರದ ಸುತ್ತಿನಲ್ಲಿ ಇಂದು ಜನರಾಡುವ ಭಾಷೆಯನ್ನು ಪೈಶಾಚ ಭಾಷೆಯೆಂದೇ ಕರೆದಿದ್ದಾರೆ.
2. ೬ನೇ ಶತಮಾನದಲ್ಲಿದ್ದ ಗಂಗರಾಜ ದುರ್ವಿನೀತನು ಬೃಹತ್ಕಥೆಯನ್ನು ಸಂಸ್ಕೃತಕ್ಕೆ ಪರಿವರ್ತಿಸಿದನೆಂದು ಪ್ರತೀತಿ. ಮತ್ತು ಅವನ ಸಂಸ್ಕೃತಗ್ರಂಥ "ಪೆರುಂಗತೈ'ಗೆ ಮೂಲವಾಗಿದ್ದಿರಬೇಕೆಂದು ನಂಬಲಾಗಿದೆ.

ಅರ್ಥಕಾಮದ ಪ್ರಪಂಚ. ಧರ್ಮವೂ ಆಗಾಗ ದಾರಿದೀಪವಾಗಿ, ಅಂತರ್ವಾಹಿನಿಯಾಗಿ ಹರಿಯುತ್ತಿರುತ್ತದೆ.

ಈ ಮಹಾಕಥೆಯು ಮುಖ್ಯವಾಗಿ ವತ್ಸರಾಜನಾದ ಉದಯನನ ಕಥೆಯಾಗಿ ಪ್ರಾರಂಭವಾಗಿ, ಅನಂತರ ಅವನ ಪುತ್ರನಾದ ನರರವಾಹನದತ್ತನ ಕಥೆಯಾಗಿ ಹೆಮ್ಮರವಾಗಿ ಬೆಳೆಯುತ್ತದೆ. ಇವುಗಳಲ್ಲಿ ನರವಾಹನದತ್ತನ ಪ್ರಣಯ, ಸಾಹಸಗಳು, ವಿದ್ಯಾಧರರ ಚಿತ್ರವಿಚಿತ್ರ ರೋಮಾಂಚಕರ ಅದ್ಭುತ ಶಕ್ತಿ ಪ್ರದರ್ಶನಗಳಲ್ಲದೆ ಅಂದಿನ ಲೋಕಜೀವನದಲ್ಲಿನ ವಿವಿಧಕ್ಷೇತ್ರಗಳ ಜನರ ವ್ಯವಹಾರವೂ ಕಾಣಸಿಗುತ್ತದೆ. ರಾಜರು, ರಾಣಿಯರು, ನಟರು, ವಿಟರು, ಸಮುದ್ರ ದಾಟಿದ ವರ್ತಕರು, ಅಂತರಿಕ್ಷದಲ್ಲಿ ಹಾರುವ ಯಂತ್ರಗಳು, ಕುಲಟೆಯರು, ಸತಿಯರು, ಧೂರ್ತರು, ಜ್ಞಾನಿಗಳು, ದೇವತೆಗಳು, ಭೂತಪ್ರೇತಗಳು, ಶಾಕಿನಿಡಾಕಿನಿಯರು, ಎಲ್ಲರೂ ಬರುತ್ತಾರೆ. ಕೇಳುಗರ, ಓದುಗರ ಮನಸ್ಸನ್ನು ಇವು ಯಾವುದೋ ಅತಿಮಾನುಷ ಲೋಕಕ್ಕೆ ಕೊಂಡೊಯ್ಯುತ್ತವೆ. ಇದೊಂದು ಅದ್ಭುತ ಮಾಯಾಲೋಕ; ಕಲ್ಪನೆಯ ಸಾಮ್ರಾಜ್ಯದ ಗಂಧರ್ವಲೋಕ; ಮನುಷ್ಯನು ಯಾವ ಯಾವ ಅದ್ಭುತಗಳನ್ನು ಕಲ್ಪಿಸಿಕೊಳ್ಳುತ್ತಾನೆಯೋ ಅಥವಾ ಆಸೆಪಡುತ್ತಾನೆಯೋ ಅವೆಲ್ಲವೂ ಇಲ್ಲಿವೆ. ನರವಾಹನದತ್ತನ ಪ್ರಣಯವೃತಾಂತಗಳು, ಅವನ ರೋಮಾಂಚಕರವಾದ ವೃತ್ತಾಂತಗಳು, ಉಪಕಥೆಗಳು, ಕೆಲವು ಸ್ವತಂತ್ರಕಥೆಗಳು ಇಲ್ಲಿ ವಾಹಿನಿಗಳಾಗಿ ಹರಿಯುತ್ತವೆ.

ಇದರಲ್ಲಿ ಹಾಸ್ಯವಿನೋದಗಳ ಕಥೆಗಳು, ಗಂಭೀರವಾದ ಕಥೆಗಳು, ಬುದ್ಧಿವಂತಿಕೆಯ ಕಥೆಗಳು ಎಲ್ಲವೂ ಇವೆ. ಮನುಷ್ಯನ ಬುದ್ಧಿಯು ಓದುವ ಅನೇಕ ಮಾರ್ಗಗಳನ್ನು ಚಿಂತನೆಯ ಧಾಟಿಗಳನ್ನು ಪ್ರತಿನಿಧಿಸುವ ಕಥೆಗಳು ಇಲ್ಲಿವೆ. ರಾಗದ್ವೇಷಾದಿಗಳು, ಕಾಮಕ್ರೋಧಾದಿಗಳು, ಎಲ್ಲವೂ ಕಥಾರೂಪದಲ್ಲಿ ವಿಜೃಂಭಿಸುತ್ತವೆ. ಇಲ್ಲಿ ವಿದ್ಯಾಧರರು ಹಾರುತ್ತಾರೆ. ಯಂತ್ರಮಾನವರಿಂದ ತುಂಬಿದ ನಗರವಿದೆ. ಅವು ಇಂದಿನ ಯುಗದ ರೋಬೋಗಳ ಆವಿಷ್ಕಾರವನ್ನು ನೆನಪಿಸುತ್ತವೆ. ಮೃಗಗಳು, ಬೇತಾಳಗಳು, ರಾಕ್ಷಸರು, ಪಿಶಾಚಗಳೂ ಇವೆ. ಹಾಗೇ ಧರ್ಮ, ನೀತಿ ವಾಕ್ಯಗಳು, ಎಲ್ಲವೂ ಸಾಗಿ ಒಂದು ಮಹಾಚಲನಚಿತ್ರವನ್ನು ನೋಡಿದ ಅನುಭವವನ್ನು ನೀಡುತ್ತವೆ. ಇದರ ಕಥೆಗಳು ಜಗತ್ತಿನ ಕಥೆಗಳಿಗೆಲ್ಲ ಪ್ರೇರಕವಾಗಿ ನಿಂತದ್ದು ಆಶ್ಚರ್ಯವೇನಲ್ಲ. ಈ ಸಾಗರದಿಂದ ಕವಿಗಳು, ನಾಟಕಕರ್ತೃಗಳು, ಕಥಾವಸ್ತುಗಳನ್ನು ಮೊಗೆಮೊಗೆದು ತೆಗೆದುಕೊಂಡು ಹೋಗಿದ್ದಾರೆ.

ಹಿರಿಯರ ತೊಡೆಯ ಮೇಲೆ ಮಲಗಿದಾಗ ಕೇಳಿದ ಕಥೆಗಳೆಲ್ಲವೂ ಭರತಖಂಡದ ಅಥವಾ ಜಗತ್ತಿನ ಕಥಾಸಾಹಿತ್ಯದಲ್ಲಿ ಕಂಡುಬರುವ ಕಥಾವೃತ್ತ ಬೀಜಗಳೆಲ್ಲವೂ ಇದರಲ್ಲಿ ಒಂದಲ್ಲ ಒಂದು ರೂಪದಲ್ಲಿ ಬಂದಿರುವುದನ್ನು ಕಾಣಬಹುದು.

ಈ ಕಥೆಗಳಲ್ಲಿ ಅರ್ಥಕಾಮಗಳ ವಿಜೃಂಭಣೆಯಲ್ಲದೆ, ಧರ್ಮವೂ ಇದೆ; ನೀತಿಯೂ ಇದೆ. ಆದರೆ 'ಕಥಾಸರಿತ್ಸಾಗರ'ವು ಧರ್ಮಗ್ರಂಥವಲ್ಲ, ಇತಿಹಾಸವಲ್ಲ. ಅದು ಧರ್ಮದರ್ಶನಗಳನ್ನು ಬೋಧಿಸುತ್ತೇನೆಂದಾಗಲಿ, ರಾಮಕೃಷ್ಣರಂತಹ ಉದಾತ್ತನಾಯಕನನ್ನು ಬಣ್ಣಿಸುತ್ತೇನೆಂದಾಗಲಿ ಹೊರಟಿದ್ದಲ್ಲ'.[1]

1. xlix. ಪೀಠಿಕೆ, ಕಥಾಮೃತ . ಎ.ಆರ್. ಕೃಷ್ಣಶಾಸ್ತ್ರೀ.

ಆದರೂ ನೀತಿವಾಕ್ಯಗಳೂ ನಡುನಡುವೆ ಮುತ್ತಿನ ಮಣಿಗಳಂತೆ ಬಂದು ಹೋಗುತ್ತವೆ. ಉದಾಹರಣೆಗಾಗಿ ಈ ಶ್ಲೋಕಗಳನ್ನು ನೋಡಬಹುದು:

**ಜಲಾಹತೌ ವಿಶೇಷೇಣ ವೈದ್ಯುತಾಗ್ನೇರಿವ ದ್ಯುತಿಃ ।**

**ಆಪದಿ ಸ್ಫುರತಿ ಪ್ರಜ್ಞಾಯಸ್ಯ ಧೀರಃ ಸ ಏವ ಹಿ ॥** **(ಲಂ. II. ತ.4. ಶ್ಲೋ.41)**

(ನೀರಿನ ಹೊಡೆತದಿಂದ ಮಿಂಚಿನ ಪ್ರಕಾಶ ಹೊಳೆಯುವಂತೆ ಯಾವನ ಪ್ರಜ್ಞೆಯು ಆಪತ್ತಿನಲ್ಲಿ ಬೆಳಗುತ್ತದೆಯೋ ಅವನೇ ಧೀರ.)

**ಭದ್ರಕೃತ್ ಪ್ರಾಪ್ನುಯಾತ್ ಭದ್ರಂ**

**ಅಭದ್ರಂ ಚಾಪ್ಯಭದ್ರಕೃತ್ ।**

**ಕಂದುಕೋ ಭಿತ್ತಿನಿಕ್ಷಿಪ್ತ**

**ಇವ ಪ್ರತಿಫಲನ್ಮುಹುಃ ॥** **III (6–212/13)**

(ಗೋಡೆಗೆ ಹೊಡೆದ ಚಂಡು ಪುಟಹೊಡೆದು ಹಿಂದಿರುಗಿ ಬರುವಂತೆ, ಒಳ್ಳೆಯದು ಮಾಡುವವನಿಗೆ ಒಳ್ಳೆಯದೇ ಬರುತ್ತದೆ; ಕೆಟ್ಟದ್ದನ್ನು ಮಾಡುವವನಿಗೆ ಕೆಟ್ಟದ್ದೇ ಬರುತ್ತದೆ.)

**ಖಡ್ಗಶೂರಾಚ್ಚ ನೃಪತೇಃ ಧರ್ಮಶೂರಃ ಪ್ರಶಸ್ಯತೇ**

**ಖಡ್ಗಶೂರಸಹಸ್ರಾಣಾಂ ಧರ್ಮಶೂರೋ ಭವೇತ್ಪತಿಃ** **(IX–2–115)**

(ಖಡ್ಗಶೂರನಾದ ರಾಜನಿಗಿಂತ ಧರ್ಮಶೂರನು ಶ್ರೇಷ್ಠ. ಸಾವಿರ ಖಡ್ಗಶೂರನಿಗೆ ಒಬ್ಬ ಧರ್ಮಶೂರ ಒಡೆಯನಾಗುತ್ತಾನೆ.)

**ವ್ಯಸನೇಷು ನಿರುದ್ವೇಗಾಃ ವಿಭವೇಷ್ವಪ್ಯಗರ್ವಿತಾಃ**

**ಕಾರ್ಯೇಷ್ವಕಾತರಾ ಯೇಚ ತೇ ಧೀರಾಸ್ತೈರ್ಜಿತಂ ಜಗತ್** **(IX–2–289)**

(ಯಾರು ಕಷ್ಟಪರಿಸ್ಥಿತಿಯಲ್ಲಿ ಉದ್ವೇಗವಿಲ್ಲದೆ ಇರುತ್ತಾರೋ, ಯಾರು ಐಶ್ವರ್ಯ ಬಂದಾಗಲೂ ಅಹಂಕಾರವಿಲ್ಲದೆ ಇರುತ್ತಾರೋ, ಕೆಲಸದಲ್ಲಿ ಯಾರು ಆತಂಕವಿಲ್ಲದೆ ಸ್ಥಿರವಾಗಿರುತ್ತಾರೋ ಅಂತಹ ಧೀರರು ಜಗತ್ತನ್ನೇ ಜಯಿಸುತ್ತಾರೆ.)

ಜೀವನದಲ್ಲಿ ಮನುಷ್ಯನಿಗಿರಬೇಕಾದ ಸರಿಯಾದ ದೃಷ್ಟಿ, ಯಶಸ್ಸಿನ ಸೂತ್ರಗಳು, ಧರ್ಮಾಧರ್ಮ ವಿವೇಕ ಮುಂತಾದುವುಗಳ ಬಗ್ಗೆ ಈ ಕೃತಿಯಲ್ಲಿ ಅಲ್ಲಲ್ಲಿ ವಿರಳವಾಗಿ ಅನುಭವದ ಸುಭಾಷಿತಗಳು ಬರುತ್ತವೆ. ಅವು ಅನೇಕ ಕಥೆಗಳ ಭರತವಾಕ್ಯವಾಗಿ ಅಥವಾ ಮಾರ್ಗದರ್ಶಕ ಸೂತ್ರಗಳಾಗಿ, ನಡುನಡುವೆ ಬರುವ ವಿಶ್ರಾಂತಿಯ ಆತ್ಮಾವಲೋಕನದ ಸ್ಥಾನಗಳಾಗಿ ಬರುತ್ತವೆ.

ಕಥೆ ಹೇಳುವ ಒಂದು ಶಕೆಯನ್ನು "ಕಥಾಸರಿತ್ಸಾಗರ' ಸೃಷ್ಟಿಸಿತು ಎನ್ನಬಹುದು. "ಬೃಹತ್ಕಥೆ 'ಯೇ ಈ ಶಕೆಯ ಅಡಿಪಾಯ. "ಬೃಹತ್ಕಥೆ ', "ಕಥಾಸರಿತ್ಸಾಗರ ' ಮುಂತಾದವು ಕಥೆಯನ್ನು ಹೇಳುವ ಕಥನವನ್ನು ಕಲೆಯಾಗಿಸಿ, ಅದನ್ನು ಸಾಹಿತ್ಯದ, ಕಾವ್ಯದ ಚೌಕಟ್ಟಿನಲ್ಲಿ ತಂದು ಕಥೆಗಳನ್ನು ಸ್ವಾರಸ್ಯಕರವಾಗುವಂತೆ ಮಾಡಿದುವು. ಕಥೆಯನ್ನು ಪದ್ಯಕಾವ್ಯಗಳಿಗೆ ತಂದು ಛಂದಸ್ಸಿನ ಸಹಾಯದಿಂದ ಕಥೆಗಳು ಬೆಳೆಯುವಂತೆ ಕಥಾಸಾಹಿತ್ಯ ಮಾಡಿತು. ವೇದಗಳ ಸಾಹಿತ್ಯವನ್ನು ಅವುಗಳ ಉದಾತ್ತ ಅನುದಾತ್ತ ಸ್ವರಿತಸ್ವರಗಳು ರಕ್ಷಿಸಿದಂತೆಯೇ ಛಂದಸ್ಸೂ ಸಾಹಿತ್ಯವನ್ನು ರಕ್ಷಿಸಿತು ಎನ್ನಬಹುದು.

ಛಂದೋಮಯಿಯಾದ ಸರಸ್ವತಿಗೆ ಒಂದು ಜನಪ್ರಿಯತೆ ಹಾಗೂ ಶಾಶ್ವತತೆ ಇದೆ. ಅಂತೂ ಹಲವು ಶತಮಾನಗಳ ಕಾಲ "ರಾಮಾಯಣ ', "ಮಹಾಭಾರತ 'ಗಳ ವಸ್ತು ಸಾಹಿತ್ಯವನ್ನು ವ್ಯಾಪಿಸಿಕೊಂಡಿದ್ದರೂ ಈ ಕಥೆಗಳು ಸಾಹಿತ್ಯಕ್ಕೆ ವಸ್ತುವನ್ನು ಒದಗಿಸಿ ಸಾಮಾನ್ಯ ಜನರನ್ನು ತಮ್ಮೆಡೆಗೆ ಸೆಳೆದುವು.

ಜನರ ಕುತೂಹಲವನ್ನು ಕೆರಳಿಸಿದ ಕತೆಗಳನ್ನು ಕಾವ್ಯದ ಚೌಕಟ್ಟಿನೊಳಗೆ ತಂದು ಅದನ್ನು ಸಾಹಿತ್ಯಸೃಷ್ಟಿಗೆ ಪ್ರೇರಕವಾಗಿ ಮಾಡಿದ "ಕಥಾಸರಿತ್ಸಾಗರ 'ಕ್ಕೆ ಸಾಹಿತ್ಯಕ್ಷೇತ್ರದಲ್ಲಿ ಕಥೆಯ ಒಂದು ಮನ್ವಂತರವನ್ನೇ ಆರಂಭಿಸಿದ ಕೀರ್ತಿಯ ಸ್ಥಾನವಿದೆ. "ಬೃಹತ್ಕಥೆ 'ಯು ಪೈಶಾಚೀಭಾಷೆಯಲ್ಲಿದ್ದುದರಿಂದ ಅದಕ್ಕೆ ಈ ಸ್ಥಾನ ಲಭಿಸಲಿಲ್ಲ. ವಾಸ್ತವವಾಗಿ "ಕಥಾಸರಿತ್ಸಾಗರ 'ವು ಒಂದು ಸ್ವತಂತ್ರ ಕೃತಿಯಾಗಿಯೂ "ಬೃಹತ್ಕಥೆ 'ಯ ಒಂದು ರೀತಿಯ ಭಾಷಾಂತರವೆನ್ನಬಹುದಾದ ಪುನಃಕಥನವಾಗಿಯೂ ಒಂದು ಮಹತ್ವದ ಸ್ಥಾನವನ್ನು ಪಡೆದುಕೊಂಡಿದೆ. ಇದರ ಕಥಾಪೀಠದಲ್ಲೇ ಈ ಕೃತಿಯು ಮೂಲವನ್ನೇ ಅನುಸರಿಸಿ ಸಂಗ್ರಹಿಸಿ ಬರೆದ ಕೃತಿಯೆಂದು ಘೋಷಿಸಲಾಗಿದೆ:

**ಯಥಾಮೂಲಂ ತಥೈವೈತನ್ನಮನಾಗಪ್ಯತಿಕ್ರಮಃ**
**ಗ್ರಂಥವಿಸ್ತರಸಂಕ್ಷೇಪಮಾತ್ರಂ ಭಾಷಾ ಚ ಭಿದ್ಯತೇ** **(I – 1 – 10)**

ಮೂಲಕ್ಕೆ ಸ್ವಲ್ಪವೂ ವ್ಯತ್ಯಾಸವಿಲ್ಲದೆ ಮೂಲದಂತೆಯೇ ಬರೆಯಲಾಗಿದೆ; ವಿಸ್ತಾರವಾದ ಗ್ರಂಥವನ್ನು ಮಾತ್ರ ಸಂಕ್ಷೇಪಿಸಲಾಗಿದೆ ಮತ್ತು ಭಾಷೆಯೂ ಬೇರೆಯಾಗಿದೆ. ಮುಂದೆ ಇದರ ಬಗ್ಗೆಯೇ ಹೇಳುತ್ತ ಕಥೆಯ ರಸಕ್ಕೆ ಬಾಧಕವಿಲ್ಲದಂತೆ ಕಾವ್ಯಾಂಶವನ್ನು ಸೇರಿಸಿಸಲಾಗಿದೆ ಎನ್ನಲಾಗಿದೆ. ಮತ್ತು ಇದನ್ನು ಬರೆದಿರುವುದು ತನ್ನ ಬುದ್ಧಿವಂತಿಕೆಯನ್ನು ಪ್ರದರ್ಶಿಸಿ ಕೀರ್ತಿಯನ್ನು ಸಂಪಾದಿಸಲು ಅಲ್ಲ; ನಾನಾ ಕತೆಗಳ ಈ ಜಾಲವನ್ನು ನೆನಪಿನಲ್ಲಿಡಲು ಸೌಕರ್ಯವಾಗಲೆಂಬ ಉದ್ದೇಶದಿಂದ ಮಾತ್ರ ಎಂಬ ಧ್ವನಿ ಇದರಲ್ಲಿದೆ.

## "ಕಥಾಸರಿತ್ಸಾಗರ'ದ ಭಾಷಾಂತರಗಳು

ಎ.ಆರ್. ಕೃಷ್ಣಶಾಸ್ತ್ರಿಗಳು "ಕಥಾಸರಿತ್ಸಾಗರ'ದ ಸಂಗ್ರಹವನ್ನು "ಕಥಾಮೃತ ' ಎಂಬ ಹೆಸರಿನಲ್ಲಿ ಹೊರತಂದಿದ್ದಾರೆ. ಕ್ಷೇಮೇಂದ್ರನ "ಬೃಹತ್ಕಥಾಮಂಜರಿ'ಯನ್ನೂ, "ಕಥಾಸರಿತ್ಸಾಗರ 'ವನ್ನೂ ಆಧಾರವಾಗಿಟ್ಟುಕೊಂಡು ಒಂದು ಹೊಸ ಸಂಗ್ರಹ ಗ್ರಂಥವನ್ನು ಬರೆಯಬೇಕೆಂಬ ಉದ್ದೇಶದಿಂದ ಅವರು "ಕಥಾಮೃತ 'ವನ್ನು ಬರೆದರು. ಒಟ್ಟಿನ ಮೇಲೆ, "ಕಥಾಮೃತ 'ವು "ಕಥಾಸರಿತ್ಸಾಗರ 'ದ ಸಂಗ್ರಹ. "ಬೃಹತ್ಕಥಾಮಂಜರಿ'ಯನ್ನು ಉಪಯೋಗಿಸಿಕೊಂಡೇ ಇಲ್ಲ ಎಂದು ಹೇಳಬಹುದು ಎಂದು ಅವರೇ ಹೇಳಿಕೊಂಡಿದ್ದಾರೆ. ಅದರಿಂದ ಇದು "ಕಥಾಸರಿತ್ಸಾಗರ 'ದ ಕನ್ನಡ ಅನುವಾದವೇ ಆಗುತ್ತದೆ. ಆದರೆ ಇದು ಮೂಲದ ಪ್ರತಿ ಶ್ಲೋಕದ ಅನುವಾದವಾಗಿರದೆ ಅದರ ಸಾರಸಂಗ್ರಹವಾಗಿದೆ. ಇದರಷ್ಟು ಅಚ್ಚುಕಟ್ಟಾದ, ಮೂಲದ ಕತೆಯನ್ನು ಮೂಲಕ್ಕೆ ಬಾಧಕವಿಲ್ಲದೆ ಯಥಾವತ್ತಾಗಿ ಹೇಳುವ ಅನುವಾದ ಗ್ರಂಥ ಬೇರೊಂದಿಲ್ಲ ಎಂದು ಹೇಳಬಹುದು.

ಕೃಷ್ಣಶಾಸ್ತ್ರಿಗಳು ತಮ್ಮ "ಕಥಾಮೃತ 'ದ ಪೀಠಿಕೆಯಲ್ಲಿ ಎರಡು ಕನ್ನಡ ಭಾಷಾಂತರಗಳನ್ನು ಉಲ್ಲೇಖಿಸುತ್ತಾರೆ. ಮೊದಲನೆಯ ಭಾಷಾಂತರ ಸಾಗರದ ಶ್ರೀಕಂಠಶರ್ಮರಿಂದ ರಚಿತವಾದದ್ದು,

ಇದರಲ್ಲಿ ಮೊದಲಿಂದ ೯ ಲಂಬಕಗಳಿವೆ. ಆದರೆ ಇದರಲ್ಲಿ ತರಂಗ ವಿಭಾಗಗಳು ಇಲ್ಲ. ಇದು ಹೆಚ್ಚು ಕಡಿಮೆ ಅಕ್ಷರಶಃ ಮಾಡಿದ ಭಾಷಾಂತರ ಎನ್ನಬಹುದಾದರೂ, ಸಂಗ್ರಹವೂ ಹೌದು.

ಎರಡನೆಯ ಭಾಷಾಂತರ ತರೀಕೆರೆಯ ಶ್ರೀ ಚಿದಂಬರ ಪಂಡಿತರದ್ದು. ಈ ಭಾಷಾಂತರವು ಮೊದಲಿನಿಂದ ಸೂರ್ಯಪ್ರಭಲಂಬಕದಲ್ಲಿನ ಮೂರು ತರಂಗಗಳವರೆಗೂ ಹೋಗುತ್ತದೆ. ಈ ಪುಸ್ತಕದ ಪ್ರತಿಗಳು ಈಗ ಲಭ್ಯವಿಲ್ಲ. ಇಲ್ಲಿ ಉಲ್ಲೇಖನೀಯವಾದ ಮತ್ತೊಂದು ಭಾಷಾಂತರವೆಂದರೆ ಟಾನಿಯವರ ಇಂಗ್ಲಿಷ್ ಭಾಷಾಂತರ. ಚಾರ್ಲ್ಸ್ ಹೆನ್ರಿ ಟಾನಿಯವರು ಕಲ್ಕತ್ತಾದ ಪ್ರೆಸಿಡೆನ್ಸಿ ಕಾಲೇಜಿನಲ್ಲಿ ಚರಿತ್ರೆಯ ಮತ್ತು ಇಂಗ್ಲಿಷ್ ಪ್ರಾಧ್ಯಾಪಕರಾಗಿದ್ದು ಅನಂತರ ಆ ಕಾಲೇಜಿನ ಅಧ್ಯಕ್ಷರಾದವರು. ಅವರು ವಿದ್ಯಾ ಇಲಾಖೆಯ ಮುಖ್ಯಾಧಿಕಾರಿಗಳೂ, ಕಲ್ಕತ್ತಾ ವಿಶ್ವವಿದ್ಯಾನಿಲಯದ ರಿಜಿಸ್ಟ್ರಾರ್‌ರವರೂ ಆಗಿದ್ದರು. "ಉತ್ತರರಾಮಚರಿತ', "ಮಾಲವಿಕಾಗ್ನಿಮಿತ್ರ'ಗಳನ್ನು ಗದ್ಯದಲ್ಲಿಯೂ, ಭರ್ತೃಹರಿಯ ಎರಡು ಶತಕಗಳನ್ನು ಪದ್ಯದಲ್ಲಿಯೂ ಇಂಗ್ಲಿಷ್‌ಗೆ ಪರಿವರ್ತಿಸಿದ ಅವರು "ಕಥಾಸರಿತ್ಸಾಗರ'ವನ್ನೂ ಇಂಗ್ಲಿಷ್‌ಗೆ ಭಾಷಾಂತರಿಸಿದರು. ಇದೊಂದು ದೊಡ್ಡ ಸಾಧನೆಯೇ ಸರಿ. ನಮ್ಮ ದೇಶದ ಸಂಸ್ಕಾರಗಳ ಅನುಭವವಿಲ್ಲದಿದ್ದರೂ ಆಳವಾದ ಅಧ್ಯಯನ ಮಾಡಿ, ಸಂಶೋಧನೆ ನಡೆಸಿ, ವಿಷಯಗಳನ್ನು ತಮ್ಮ ದೃಷ್ಟಿಯಿಂದ ಅಳೆಯುವ ಪಾಶ್ಚಾತ್ಯ ಪಂಡಿತರು ನಮ್ಮ ಸಾಹಿತ್ಯದ ವಿಚಾರಗಳಲ್ಲಿ ಮಾಡಿರುವ ದೊಡ್ಡ ಸಾಧನೆಗಳಲ್ಲಿ ಈ ಭಾಷಾಂತರವೂ ಒಂದು.

ವಿದ್ವಾಂಸರಾದ ವಿ. ರಾಘವನ್‌ರವರು ಈ ಭಾಷಾಂತರದ ಬಗ್ಗೆ ಈ ರೀತಿ ಹೇಳುತ್ತಾರೆ: "ಆಧುನಿಕ ಕಾಲದಲ್ಲಿಯೂ ಸೋಮದೇವನ ಕಥಾಸರಿತ್ಸಾಗರವು ಟಾನಿ, ಪೆಂಜರ್ ಇವರುಗಳು ಮಾಡಿರುವ ಇಂಗ್ಲಿಷ್ ಭಾಷಾಂತರದ ಮೂಲಕ ಜಗದ್ವಿಶಾಲ ಜನಾದರವನ್ನು ಪಡೆದಿದೆ. ಟಿಪ್ಪಣಿಗಳು, ನ್ಯಾಸಗಳು, ಕಥಾವೃತ್ತಿ ಬೀಜದ ಸೂಚಿಕೆಗಳು ಮೊದಲಾದವುಗಳಿಂದ ಕೂಡಿ ಈ ಇಂಗ್ಲಿಷ್ ಭಾಷಾಂತರವು ಈ ಮಹಾಗ್ರಂಥದ ಬಾಹುಳ್ಯ ಮತ್ತು ವಿಷಯಸಂಪನ್ನತೆಗೆ ತಕ್ಕ ಗೌರವವನ್ನು ತೋರಿಸಿದೆ. ಆದರೆ ಇದುವರೆಗೆ ಭರತಖಂಡದ ಭಾಷೆಗಳಲ್ಲಿ ಅಂಥ ಉತ್ತಮ ಗ್ರಂಥವೊಂದು ಇದುವರೆಗೆ ಬಂದಿಲ್ಲವೆಂಬುದು ಶೋಚನೀಯ."[1]

ಸಂಸ್ಕೃತ ವಿದ್ವಾಂಸರಾದ ಶ್ರೀ ವಿ. ರಾಘವನ್ ಅವರು "ಕಥಾಸರಿತ್ಸಾಗರ'ದ ಕೆಲವು ಕಥೆಗಳನ್ನು ಸಂಗ್ರಹಿಸಿದ್ದು, ಅವುಗಳನ್ನು ದೇವುಡುರವರು ಕನ್ನಡಕ್ಕೆ ಅನುವಾದ ಮಾಡಿದ್ದಾರೆ. ಇದು ೧೯೫೮ನೇ ಇಸವಿಯಲ್ಲಿ ದಕ್ಷಿಣ ಭಾಷಾ ಪುಸ್ತಕ ಸಂಸ್ಥೆಯವರ ಸೌಜನ್ಯದಿಂದ ಪ್ರಕಟಿತವಾಗಿದೆ.

ಆದರೆ ಇದು ಬಹಳ ಕಿರಿಯ ಸಂಗ್ರಹವಾಗಿದ್ದು, ಇದರಲ್ಲಿ ೭ ಸಣ್ಣಕತೆಗಳು ಮತ್ತು ೯ ದೊಡ್ಡ ಕತೆಗಳು ಮಾತ್ರ ಇವೆ.

"ಕನ್ನಡದಲ್ಲಿ ಕಥಾಸರಿತ್ಸಾಗರ'ದ ಸಂಪೂರ್ಣ ಭಾಷಾಂತರ ಇಲ್ಲದಿರುವ ಕೊರತೆಯನ್ನು ನೀಗಿಸಲು ಕರ್ನಾಟಕ ಅನುವಾದ ಸಾಹಿತ್ಯ ಅಕಾಡೆಮಿ ಪ್ರಯತ್ನವನ್ನು ಕೈಗೊಂಡು, ಈ ಕೆಲಸದ ಪರಿವೀಕ್ಷಣೆಯನ್ನು ನನಗೆ ವಹಿಸಿ ಈ ಕೆಳಕಂಡ ಸಂಸ್ಕೃತ ವಿದ್ವಾಂಸರನ್ನು ಅನುವಾದಕರಾಗಿ ನೇಮಿಸಿತು;

---

1. ಪೀಠಿಕೆ. ವಿ. ರಾಘವನ್‌ರವರ 'ಕಥಾಸರಿತ್ಸಾಗರ ಸಂಗ್ರಹ' ; ದೇವುಡುರವರ ಭಾಷಾಂತರ.

ಇವರೆಲ್ಲ ಸಂಸ್ಕೃತ ಕ್ಷೇತ್ರದಲ್ಲಿ ತಲಸ್ಪರ್ಶಿಯಾದ ಅಧ್ಯಯನವನ್ನು ಮಾಡಿದವರೂ, ಅಪಾರವಾದ ವೈದುಷ್ಯವನ್ನು ಗಳಿಸಿದವರೂ ಆಗಿದ್ದು ಅವರು ಈ ಕೆಲಸವನ್ನು ವಹಿಸಿಕೊಂಡದ್ದು ಬಹಳ ಸಂತೋಷದ ವಿಷಯ:

**೧ ಶ್ರೀ ಎಚ್.ವಿ. ನಾಗರಾಜರಾವ್**

**೨. ಡಾ. ಎಸ್.ಆರ್. ಲೀಲಾ**

**೩. ಡಾ. ಪಿ. ದೇವಕಿ**

**೪. ಶ್ರೀ ಶೇಷಾಚಲ ಶರ್ಮ**

**೫ ಡಾ. ರಾಮಭಟ್**

**೬ ಡಾ. ಬಿ.ಎಸ್. ರಾಮಕೃಷ್ಣರಾವ್**

**೭ ಶ್ರೀ ಕೆ.ಜಿ. ಕೃಷ್ಣಮೂರ್ತಿ**

**೮ ಪ್ರೊ. ಟಿ.ಎಸ್. ವೆಂಕಣ್ಣಯ್ಯ**

**೯. ಡಾ. ಬಿ.ಎನ್. ಸುಮಿತ್ರಾಬಾಯಿ**

**೧೦. ಶ್ರೀ ಟಿ.ವಿ. ಸತ್ಯನಾರಾಯಣ**

ಪ್ರತಿಯೊಬ್ಬ ಅನುವಾದಕರ ಶೈಲಿಯೂ ವಿಭಿನ್ನವಾಗಿರುವುದರಿಂದ ಇವುಗಳಲ್ಲಿ ಏಕರೂಪತೆಯನ್ನು ತರುವುದು ಮುಖ್ಯ ಸಂಪಾದಕನ ಕೆಲಸವಾಗುತ್ತದೆ ಮತ್ತು ಅನುವಾದವು ಯಥಾವತ್ತಾಗಿ ಇರುವುದಕ್ಕಿಂತ ಕನ್ನಡದ ಜಾಯಮಾನಕ್ಕೆ ಹೊಂದಿಕೊಳ್ಳುವಂತಹ ಅನುವಾದವಾಗಿರಬೇಕಾಗುತ್ತದೆ. ಈ ವಿಷಯವನ್ನು ಅನುವಾದ ಅಕಾಡೆಮಿಯ ಅಧ್ಯಕ್ಷರಾದ ಪ್ರೊಫೆಸರ್ ಪ್ರಧಾನ್ ಗುರುದತ್ತ ಅವರೊಡನೆ ವಿಸ್ತಾರವಾಗಿ ಚರ್ಚಿಸಿ ಕೆಲವು ವಿಧಾನಗಳನ್ನು ಗುರುತಿಸಿಕೊಳ್ಳಲಾಯಿತು.

ಅನುವಾದವು ಹೇಗಿರಬೇಕು ಎಂಬ ಪ್ರಶ್ನೆ ಎದ್ದಾಗ ಅನು ಎಂಬ ಪದ ಪ್ರಾಶಸ್ತ್ಯ ಪಡೆದುಕೊಳ್ಳುತ್ತದೆ. ಮೂಲವನ್ನು ಅನುಸರಿಸಿ ಮೂಲದ ವಿಷಯವನ್ನು ಹೇಳಬೇಕು "ಸಂಸ್ಕೃತದ ಮೂಲಕ್ಕೆ ಅಪೋಹ ಬರದಂತೆ ಕನ್ನಡ ನುಡಿಯ ಅಂದ ಅಚ್ಚುಗಳು ಕೆಡದಂತೆ"[1] ಭಾಷಾಂತರವನ್ನು ಸಿದ್ಧಪಡಿಸಬೇಕಾಗುತ್ತದೆ. ಅನೇಕ ಅನುವಾದಗಳನ್ನು ನೋಡಿದಾಗ ಕೆಲವು ನೇರವಾದ ಭಾಷಾಂತರವಾಗಿದ್ದರೆ, ಕೆಲವು ಪುನಃ ಕಥನವಾಗಿರುತ್ತವೆ, ಮತ್ತೆ ಕೆಲವು ಪುನಃ ಸೃಷ್ಟಿಗಳೇ ಆಗಿರುತ್ತವೆ. ಯಾವ ಭಾಷೆಗೆ ಅನುವಾದ ಮಾಡಲಾಗುತ್ತದೆಯೋ ಆ ಭಾಷೆಯಲ್ಲೇ ಆ ಕೃತಿಯನ್ನು ಬರೆದಂತೆ ಓದಿಸಿಕೊಂಡು ಹೋಗುವಂತಹ ಗುಣಧರ್ಮ ಆ ಭಾಷಾಂತರದಲ್ಲಿ ಇರಬೇಕಾಗುತ್ತದೆ.

ಸಂಸ್ಕೃತದಿಂದ ಒಂದು ಕೃತಿಯನ್ನು ಬೇರೆ ಭಾಷೆಗೆ ತರುವಾಗ ಆಗುವ ಮೊದಲ ಬಲಿಯೆಂದರೆ ಭಾಷಾಗತಸೌಂದರ್ಯ. ಇದು ಯಾವುದೇ ಭಾಷೆಗೆ ಅನ್ವಯಿಸುವಂತಹ ವಿಚಾರವಾದರೂ, ಸಂಸ್ಕೃತದಲ್ಲಿ ಸಾಹಿತ್ಯವು ಅರ್ಥವಾಗುವ ಮೊದಲೇ ಆ ಭಾಷೆಯೇ ಒಂದು ಅರ್ಥವನ್ನು ಕೊಡುವ ಶಕ್ತಿಯನ್ನು ಪಡೆದಿರುವುದರಿಂದ ಪದ್ಯಕಾವ್ಯದಲ್ಲಿರುವ ವಾಗ್ವೈಭವವನ್ನು ಬೇರೆ ಭಾಷೆಯ ಗದ್ಯಾನುವಾದದಲ್ಲಿ

1. ಪೀಠಿಕೆ. ವಿ. ರಾಘವನ್‌ರವರ 'ಕಥಾಸರಿತ್ಸಾಗರ ಸಂಗ್ರಹ' ; ದೇವುಡುರವರ ಭಾಷಾಂತರ.

ಸಾಧಿಸುವುದು ಬಹಳ ಕಷ್ಟ. ಭಾಷಾಂತರದಲ್ಲಿ ನಮಗೆ ಸಿಗುವುದು ಮೂಲದ ಅರ್ಥ ಮಾತ್ರವೇ ವಿನಾ ಮೂಲದ ಭಾಷೆಯು ಕೊಡುವ ಅರ್ಥಕ್ಕೆ ಅವ್ಯವಹಿತಪೂರ್ವವಾದ ಅರ್ಥವಲ್ಲ.

ಸಂಸ್ಕೃತ ಭಾಷೆಯ ವಿಶಿಷ್ಟತೆಯೂ ಅನುವಾದಕನಿಗೆ ಕ್ಲಿಷ್ಟವಾದ ಸವಾಲನ್ನು ಒಡ್ಡುತ್ತದೆ. ಅದರಲ್ಲಿರುವ ಸಮಾಸಭೂಯಿಷ್ಠವಾದ ನೀಳ ಪದಗುಂಫಗಳು ವಿಸ್ತಾರವಾದ ವಾಕ್ಯಗಳಲ್ಲಿ ಅನುವಾದವನ್ನು ಅಪೇಕ್ಷಿಸುತ್ತವೆ. ಇದಕ್ಕೆ ಮೊದಲು ಮೂಲವು ಛಂದೋರೂಪದಲ್ಲಿದ್ದು ಅನುವಾದವು ಗದ್ಯಾನುವಾದವಾಗಬೇಕಾದರೆ ಛಂದಸ್ಸಿನ ಲಯನಿಷ್ಠ ಸೌಂದರ್ಯವು ಬಲಿಯಾಗುತ್ತದೆ. ಮೂಲದ ಛಂದೋಮಯ ಕಾವ್ಯಾನುಭವವು ಗದ್ಯಾನುವಾದದಲ್ಲಿ ಸಿಗುವ ಸಾಧ್ಯತೆ ಬಹಳ ಕಡಿಮೆ. ಮೂಲಾನುಗುಣವಾದ ಕಾವ್ಯಸ್ವರೂಪದಲ್ಲೇ ಅನುವಾದವನ್ನು ಅದೇ ಮಟ್ಟದಲ್ಲಿ ತಂದಾಗ ಮೂಲದ ಸೌಂದರ್ಯದ ಅನುಭವವಾಗಬಹುದು. ಆದರೆ ಅದು ಮೂಲದಷ್ಟೇ ಓದುಗರಿಗೆ ಸ್ವಲ್ಪಮಟ್ಟಿಗೆ ದುರೂಹವೂ ಆಗಬಹುದು; ಅಥವಾ ಸ್ವತಂತ್ರವಾದ ಕೃತಿಯ ಅನುಭವವನ್ನೇ ಕೊಡಬಹುದು.

ಆದರೆ "ಕಥಾಸರಿತ್ಸಾಗರ'ದ ಅನುವಾದವು ಮೂಲದಲ್ಲಿರುವ ಕಥೆಗಳನ್ನು ಕನ್ನಡದ ಓದುಗರಿಗೆ ತಲುಪಿಸುವುದಾದ್ದರಿಂದ, ಇಲ್ಲಿ ಭಾಷಾಸೌಂದರ್ಯಕ್ಕಿಂತ ಅರ್ಥದ ಸ್ವಾರಸ್ಯದ ಸಂವಹನೇ ಮುಖ್ಯವಾಗುತ್ತದೆ. ಆದ್ದರಿಂದ ಈ ಕೃತಿಯ ಅನುವಾದದ ಪ್ರಕ್ರಿಯೆಯಲ್ಲಿ ಅಷ್ಟಾಗಿ ತೊಂದರೆಗಳಿರುವುದಿಲ್ಲ ಎನ್ನಬಹುದು. ಆದರೂ ಮೂಲದ ವರ್ಣನೆಗಳ ಹಾಗೂ ಇತರ ಕಾವ್ಯಾಂಶಗಳ ಸ್ವಾರಸ್ಯವನ್ನು ಬಿಡದೆ ಅನುವಾದ ಮಾಡಬೇಕಾದುದು ಅನುವಾದಕರ ಕರ್ತವ್ಯವಾಗುತ್ತದೆ.

ಈ ಕೃತಿಯ ಅನುವಾದವು ಮೇಲಿನ ಕಾರಣಗಳಿಂದ ಮಾಘಕವಿಯ "ಶಿಶುಪಾಲವಧ', ಭಾರವಿಯ 'ಕಿರಾತಾರ್ಜುನೀಯ' ಮುಂತಾದ ಮಹಾಕಾವ್ಯಗಳ ಗದ್ಯಾನುವಾದವು ಒಡ್ಡುವ ಅಥವಾ ಬಾಣಭಟ್ಟನ "ಕಾದಂಬರಿ'ಯು ಒಡ್ಡುವ ಸವಾಲುಗಳನ್ನು ಒಡ್ಡುವುದಿಲ್ಲ. ಶಬ್ದಾಲಂಕಾರಗಳ ಹಾಗೂ ಶ್ಲೇಷೆ ಮುಂತಾದ ಶಬ್ದಾವಲಂಬಿತ ಅಲಂಕಾರಗಳ ಪ್ರಾಬಲ್ಯ ಈ ಕೃತಿಯಲ್ಲಿಲ್ಲ. ಇದು ಕಾವ್ಯಸೌಂದರ್ಯವನ್ನು ತೋರಿಸಲೆಂದೇ ರಚಿತವಾದ ಸಾಹಿತ್ಯವೂ ಅಲ್ಲ. ಕಾವ್ಯಸೌಂದರ್ಯವು ಆಗಾಗ ಮಿಂಚಿನಂತೆ ಇದ್ದಕ್ಕಿದ್ದಂತೆ ಕಾಣಿಸಿಕೊಂಡು ಬೆಳಗಿ ಆ ಸನ್ನಿವೇಶವನ್ನು ಸ್ವಾರಸ್ಯಕರವಾಗಿಸುತ್ತದೆ. ಕಥೆಯ ಧಾರೆ ಮಾತ್ರ ನಿರಂತರ ಸುರಿದು ವಾಹಿನಿಯಾಗಿ ಹರಿಯುತ್ತದೆ. ಇನ್ನು ನಮಗೆದುರಾಗುವ ಮುಖ್ಯ ಸಮಸ್ಯೆಯೆಂದರೆ ತನ್ನದೇ ವಿಶಿಷ್ಟ ಶೈಲಿಯನ್ನು ಹೊಂದಿರುವ ಸಂಸ್ಕೃತದ ವಾಕ್ಯಗಳನ್ನು ಕನ್ನಡದ ಜಾಯಮಾನಕ್ಕೆ ಹೊಂದುವ ಶೈಲಿಗೆ ತರುವುದು. ಈ ಸವಾಲು ಕೆಲವು ನಿದರ್ಶನಗಳನ್ನು ತೆಗೆದುಕೊಂಡು ವಿಶ್ಲೇಷಿಸಿದಾಗ ಸ್ಪಷ್ಟವಾಗುತ್ತದೆ.

ಅಷ್ಟು ಕ್ಲಿಷ್ಟವಲ್ಲದ ಈ ಉದಾಹರಣೆ ಭಾಷೆಗಳ ಶೈಲಿಯಲ್ಲಿರುವ ವ್ಯತ್ಯಾಸವನ್ನು ತೋರಿಸುತ್ತದೆ:

**ಯಥಾರ್ಹವಿಹಿತಾತಿಥ್ಯೇ ತಸ್ಮಿನ್ ವತ್ಸೇಶ್ವರೇಽಥಸಃ**
**ರಾಜಾಲಂಕಾರಶೀಲಸ್ತಮುವಾಚ ಪ್ರಣಯಾನತಃ** **(9 – 1 – 215)**

ಇದನ್ನು "ಆ ವತ್ಸೇಶ್ವರನು ಯಥೋಚಿತವಾಗಿ ವಿರಚಿತವಾದ ಆತಿಥ್ಯವುಳ್ಳವನಾಗಿ ಆಗಲು ಅನಂತರ ರಾಜನಾದ ಆ ಅಲಂಕಾಶೀಲನು ಆ ವತ್ಸರಾಜನನ್ನು ಕುರಿತು ಪ್ರೀತಿಯಿಂದ

ನಮ್ರನಾಗಿ (ಈ ರೀತಿ) ಹೇಳಿದನು." ಈ ಅನುವಾದವು ಯಥಾವತ್ತಾಗಿ, ಮೂಲದ ಪದಗಳ ಅರ್ಥವನ್ನು ಅತ್ತಿತ್ತ ಕದಲಿಸದೆ ಹೇಳುವ ಅನುವಾದ. ಇದು ವಿದ್ಯಾರ್ಥಿಗಳಿಗೆ ಬಹಳ ಉಪಯುಕ್ತವಾದದ್ದು ಹಾಗೂ ಪಂಡಿತರೂ ಒಪ್ಪುವಂತಹುದು. ಆದರೆ ಕನ್ನಡದ ಓದುಗರಿಗೆ ಇದು ಅರ್ಥವನ್ನು ಸ್ಫುಟವಾಗಿ ಸರಳವಾಗಿ ಅನಾವರಣಗೊಳಿಸುವುದಿಲ್ಲ. ವಾಕ್ಯದ ಶೈಲಿ ಕ್ಲಿಷ್ಟವಾಗಿ, ಸುತ್ತು ತಿರುಗಿಸಿ ಹೇಳಿದಂತೆ ಕಾಣುತ್ತದೆ.

ಈ ಶ್ಲೋಕದಲ್ಲಿ ಕವಿಯು ತಿಳಿಯಲಿಚ್ಛಿಸುವ ವಿಷಯವು ಇಷ್ಟೇ. ವತ್ಸರಾಜನಿಗೆ ಯಥೋಚಿತವಾದ ಆತಿಥ್ಯವನ್ನು ಮಾಡಿದ ಅನಂತರ ರಾಜ ಅಲಂಕಾರಶೀಲನು ಪ್ರೀತಿಯಿಂದ ನಮ್ರನಾಗಿ ಅವನಿಗೆ ಈ ರೀತಿ ಹೇಳಿದನು. ಮಾಡಿದ ಆತಿಥ್ಯವುಳ್ಳವನಾಗಿ ಎಂಬುದು ಸಂಸ್ಕೃತದ ಶೈಲಿ; ವತ್ಸರಾಜನಿಗೆ ಆತಿಥ್ಯವನ್ನು ಮಾಡಿ ಎಂದು ಅದನ್ನು ಕನ್ನಡದ ಶೈಲಿಗೆ ತರಬೇಕು. ಆದರೆ ಸಂಸ್ಕೃತದಲ್ಲಿರುವ ಭಾವವು ಪೂರ್ಣವಾಗಿ ಇದರಲ್ಲಿ ಬರುವುದಿಲ್ಲವಾದರೂ ಹೇಳಬೇಕಾದ ಸನ್ನಿವೇಶವನ್ನು ಅದು ಪರ್ಯಾಪ್ತವಾಗಿ ಹೇಳುತ್ತವೆ.

ಇನ್ನೊಂದು ಉದಾಹರಣೆಯನ್ನಾಗಿ ಈ ಶ್ಲೋಕವನ್ನು ನೋಡಬಹುದು:

**ವ್ಯಾವೃತ್ತನೇತ್ರಭ್ರಮರಾ ವಿವರ್ಣವದನಾಂಬುಜಾ ।**
**ಹಂಸಮಂಜುಸ್ವನೋನ್ಮುಕ್ತಾ ಪದ್ಮಿನೀವ ಹಿಮಾಹತಾ ॥** **(9 – 2 – 152)**

ಇದರ ಯಥಾವತ್ತಾದ ಅನುವಾದ ಈ ರೀತಿ ಆಗುತ್ತದೆ. ""ಹಿಂದಕ್ಕೆ ತಿರುಗಿದ ಭ್ರಮರಗಳಂತಿರುವ ನೇತ್ರಗಳುಳ್ಳವಳೂ ಕಾಂತಿಹೀನವಾದ ವದನಕಮಲಗಳುಳ್ಳವಳೂ ಆಗಿ ಹಂಸಗಳ ಮನೋಹರವಾದ ಧ್ವನಿಗಳಿಂದ ತ್ಯಕ್ತವಾಗಿ ಹಿಮದ ಹೊಡೆತಕ್ಕೊಳಗಾದ ಪದ್ಮಿನಿಯಂತೆ ಗೋಚರಳಾದಳು."

ಇದು ವಿದ್ಯಾರ್ಥಿಗಳಿಗೂ, ಪ್ರತಿಪದಾರ್ಥವನ್ನು ತಿಳಿದುಕೊಳ್ಳುವ ಅಭ್ಯಾಸಿಗಳಿಗೂ, ಅತ್ಯಂತ ಅನುಕೂಲಕರವಾದ ಯಥಾವತ್ತಾದ ಅನುವಾದ. ಇದನ್ನೇ ಸರಳಗೊಳಿಸಿ ಕನ್ನಡಕ್ಕೆ ಹೊಂದುವಂತೆ ಈ ರೀತಿ ಹೇಳಬಹುದು:

""ದುಂಬಿಗಳಂತಿದ್ದ ಅವಳ ಕಣ್ಣುಗಳು ಹಿಂದಕ್ಕೆ ತಿರುಗಿದ್ದುವು. ಅವಳ ಮುಖಕಮಲವು ಕಳೆಗುಂದಿತ್ತು. ಇದರಿಂದ ಅವಳು ಹಂಸಗಳ ಮಧುರವಾದ ಧ್ವನಿಯಿಲ್ಲದ, ಹಿಮದ ಹೊಡೆತಕ್ಕೆ ಸಿಲುಕಿದ ಪದ್ಮಲತೆಯಂತೆ ಕಂಡಳು."

ಇದರಲ್ಲಿ ವರ್ಣನೆಯ ಭಾಗವಿದ್ದರೂ ವಾಕ್ಯಗಳನ್ನು ಒಡೆದು ಹೇಳಿರುವುದರಿಂದ ಅರ್ಥಗ್ರಹಣ ಸುಲಭ. ಇಲ್ಲಿ ಒಂದೊಂದು ಸಣ್ಣ ವಾಕ್ಯವೂ ಒಂದೊಂದು ಭಾವನೆ ಅಥವಾ ವರ್ಣನೆಯ ಭಾಗವನ್ನು ಹೇಳುವುದರಿಂದ ಮನಸ್ಸು ಅರ್ಥವನ್ನು ಗ್ರಹಿಸುತ್ತಾ ಮುಂದೆ ಸಾಗುತ್ತದೆ. ಒಟ್ಟು ವರ್ಣನೆ ಒಂದೇ ವಾಕ್ಯದಲ್ಲಿ ಬಂದಾಗ ಇದೇ ವರ್ಣನೆಯು ಸಂಕೀರ್ಣವಾಗಿ ಗೊಂದಲವಾಗುತ್ತದೆ. ಸಂಸ್ಕೃತದಲ್ಲಿ ಸಮಸ್ತಪದಗಳಾಗಿ ವರ್ಣನೆಗಳು ಬರುವುದರಿಂದ ಅವು ಒಂದಕ್ಕೊಂದು ಸಂಬಂಧವನ್ನು ಹಿಡಿದಿಡುತ್ತವೆ. ಮನಸ್ಸು ಒಟ್ಟು ಅರ್ಥವನ್ನು ಗ್ರಹಿಸುತ್ತದೆ. ಆದರೂ ಆ ಶೈಲಿ ಮನಸ್ಸಿಗೆ ವ್ಯಾಯಾಮವನ್ನು ಕೊಡದೆ ಇರುವುದಿಲ್ಲ.

ಈ ಕೃತಿಯಲ್ಲಿರುವ ಪ್ರತಿಯೊಂದು ಲಂಬಕದಲ್ಲೂ ಪ್ರಾರಂಭದಲ್ಲಿ ಒಂದು ಶ್ಲೋಕವಿದ್ದು ಅದು ಪುನರಾವರ್ತನೆಯಾಗುತ್ತದೆ. ಆ ಶ್ಲೋಕ ಈ ರೀತಿ ಇದೆ:

**ಇದಂ ಗುರುಗಿರೀಂದ್ರ ಪ್ರಣಯಮಂದರಾಂದೋಲನಾತ್**
**ಪುರಾಕಿಲ ಕಥಾಮೃತಂ ಹರಮುಖಾಂಬುಧೇರುದ್ಗತಂ ।**
**ಪ್ರಸಹ್ಯ ರಸಯಂತಿ ಯೇ ವಿಗತವಿಘ್ನಲಬ್ಧರ್ಧಯೋ**
**ಧುರಂ ದಧತಿ ವೈಬುಧೀಂ ಭುವಿಭವಪ್ರಸಾದೇನ ತೇ ॥**

ಇದರಲ್ಲಿ ಧುರಂ ದಧತಿ ವೈಬುಧೀಂ ಎಂಬುದನ್ನು ವಿವಿಧ ಅನುವಾದಕರು ವಿವಿಧ ರೀತಿಯಲ್ಲಿ ಅನುವಾದಿಸುವ ಸಾಧ್ಯತೆ ಇದೆ. ಎಲ್ಲವೂ ಸರಿಯಾದ ಅನುವಾದವೇ. ಇದರಲ್ಲಿ ವೈಬುಧೀಂ ಎಂಬುದು ವಿಬುಧ ಪದಕ್ಕೆ ವಿದ್ವಾಂಸ, ದೇವತೆ ಎಂಬ ಅರ್ಥಗಳಿರುವುದರಿಂದ ವಿವಿಧ ವ್ಯಾಖ್ಯೆಗಳಿಗೆ ಅವಕಾಶ ನೀಡುತ್ತದೆ. ಆದ್ದರಿಂದ ಅದಕ್ಕೆ ಭೂಲೋಕದಲ್ಲಿ ದೇವತೆಗಳ ಸಾಮರ್ಥ್ಯವನ್ನು ಹೊಂದುತ್ತಾರೆ ಎಂದೂ ವಿದ್ವಾಂಸರ ಭಾರವನ್ನು ಹೊರುತ್ತಾರೆ ಎಂದೂ ವಿವಿಧ ರೀತಿಯಲ್ಲಿ ಅರ್ಥಮಾಡಬಹುದಾಗಿದೆ. ಒಂದೊಂದು ರೀತಿಯೂ ಸರಿಯೇ ಎನ್ನಿಸಿದರೂ ಅವುಗಳಲ್ಲಿ ಏಕರೂಪತೆಯನ್ನು ತಂದು ಒಂದು ಅನುವಾದವನ್ನು ರೂಪಿಸಿ ಎಲ್ಲ ಲಂಬಕಗಳಲ್ಲೂ ಅದನ್ನೇ ಇಟ್ಟುಕೊಳ್ಳಬೇಕಾಗುತ್ತದೆ. ಆದ್ದರಿಂದ ಇದಕ್ಕೆ ಜ್ಞಾನಲೋಕದಲ್ಲಿ ಧುರಂಧುರರಾಗುತ್ತಾರೆ ಎಂದು ಸಮಯೋಚಿತವಾಗಿ ಅರ್ಥಮಾಡಿ ಆ ಅರ್ಥವನ್ನೇ ಇಟ್ಟುಕೊಳ್ಳಲಾಗಿದೆ. ಒಟ್ಟಿನಲ್ಲಿ ಕ್ಲಿಷ್ಟತೆಯನ್ನೂ ಸಂಕೀರ್ಣತೆಯನ್ನೂ ಎಳೆಯೆಳೆಯಾಗಿ ಬಿಡಿಸಿ ಮೂಲಾರ್ಥಕ್ಕೆ ಅಪಚಾರವಾಗದಂತೆ ಅನುವಾದ ಮಾಡುವ ಪ್ರಯತ್ನಮಾಡಲಾಗಿದೆ.

ಅನುವಾದದ ಅನನ್ಯತೆಯೆಂದರೆ ಅದು ಎಂದೂ ಅಪೂರ್ಣವೇ ಆಗಿರುವುದು. ಹತ್ತುವರ್ಷಕ್ಕೊಮ್ಮೆ ಭಾಷೆಯಲ್ಲಾಗಿರುವ ಬದಲಾವಣೆಗಳನ್ನು ಗಮನಿಸಿ ಹೊಸ ಅನುವಾದ ಮಾಡಬೇಕಾಗುತ್ತದೆ ಎಂದು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ. ಆದರೆ ನಾವು ಮಾಡಿದ ಅನುವಾದವನ್ನು ಪುನಃ ನಾವೇ ನೋಡಿದಾಗ ಅದರ ಅಪರ್ಯಾಪ್ತತೆಗಳು ಕಣ್ಣಿಗೆ ಬಿದ್ದು ಅದರಲ್ಲೂ ಬದಲಾವಣೆಗಳನ್ನು ಮಾಡಬೇಕೆಂದು ನಮಗೇ ಅನ್ನಿಸುತ್ತದೆ. ಈ ಅಪೂರ್ಣತೆಯ ಅನುಭವವು ಆಗುತ್ತಲೇ ಇರುತ್ತದೆ. ಅದಕ್ಕಾಗಿ ಹತ್ತುವರ್ಷಗಳ ಕಾಲ ಕಾಯಬೇಕಾಗಿಲ್ಲ. ಭಾಷೆಗಳ ಆಶಯ, ಶೈಲಿ ವಿಭಿನ್ನವಾಗಿರುವುದರಿಂದ ಹಾಗೂ ಒಂದು ಭಾಷೆಯ ಪದಗಳಿಗೆ ಸಂವಾದಿಯಾದ ಪದಗಳು ಬೇರೆ ಭಾಷೆಗಳಲ್ಲಿ ಕೆಲವು ವೇಳೆ ಸಿಗದಿರುವುದರಿಂದ ಅಥವಾ ಪದಗಳು ಅನೇಕ ಅರ್ಥಗಳನ್ನು ಕೊಡುವುದರಿಂದ ಹೊಸ ಹೊಸ ಸವಾಲುಗಳು ಎದುರಾಗುತ್ತವೆ.

ಶಬ್ದಾಲಂಕಾರದ ಮೇಲೆ ಅವಲಂಬಿತವಾದ ಶ್ಲೋಕಾರ್ಥಗಳು ಮತ್ತೊಂದು ಸಮಸ್ಯೆಯನ್ನು ಒಡ್ಡುವಂಥವುಗಳು. ಈ ಶ್ಲೋಕವನ್ನು ಇದಕ್ಕೆ ಉದಾಹರಣೆಯಾಗಿ ತೆಗೆದುಕೊಳ್ಳಬಹುದು:

**ಅವಾರಣೀಯಂ ರಿಪುಭಿಃ ವಾರಣೀಯಂ ಕರಂ ನು ಮಃ ।**
**ಹೇರಂಬಸ್ಯ ಸಸಿಂಧೂರಮಸಿಂದೂರಮಘಟ್ಟಿದಂ ॥** **(10 – 1 – 1)**

ಇದು ಗಣೇಶನ ಸ್ತುತಿ. ಶತ್ರುನಾಶಕವಾದ ಗಣೇಶನ ಸೊಂಡಿಲಿಗೆ ಭಕ್ತಿಯಿಂದ ನಮಸ್ಕರಿಸುತ್ತೇನೆ ಎಂದು ಹೇಳುವ ಕವಿಯು ಗಣೇಶನ ಕರವು (ಸೊಂಡಿಲು) ಅವಾರಣೀಯ ಹಾಗೂ ವಾರಣೀಯ

ಎರಡೂ ಆಗಿದೆ. ಅದು ಸಸಿಂದೂರಂ ಹಾಗೂ ಅಸಿಂದೂರಂ, ಅಘಟ್ಟಿದವಾದದ್ದು ಎಂದು ವರ್ಣಿಸಿದ್ದಾನೆ. ಹೀಗೆ ಪರಸ್ಪರ ವಿರುದ್ಧವಾದ ಎರಡು ಗುಣಗಳನ್ನು ಹೇಳುವಂತೆ ತೋರುವ ಈ ವರ್ಣನೆಯು ವಿವರಣೆಯನ್ನು ಅಪೇಕ್ಷಿಸುತ್ತದೆ. ಗಣಪತಿಯ ಸೊಂಡಲು ರಿಪುಭಿಃ ಎಂದರೆ ಶತ್ರುಗಳಿಂದ ಅವಾರಣೀಯಂ ಎಂದರೆ ತಡೆಯಲು ಅಸಾಧ್ಯವಾದುದು. ಅವಾರಣೀಯವಾದರೂ ಅದು ವಾರಣೀಯ ಕೂಡ. ಅಂದರೆ ವಾರಣಕ್ಕೆ ಅರ್ಥಾತ್ ಆನೆಗೆ ಸಂಬಂಧಪಟ್ಟಿದ್ದು. ಆನೆಯ ಸೊಂಡಿಲು ಎಂದು ಇದರ ಅರ್ಥ. ಅದು ಸಸಿಂದೂರ ಎಂದರೆ ಸಿಂದೂರವನ್ನು ಹೊಂದಿರುವುದು ಹಾಗೂ ಪಾಪವನ್ನು ದೂರಕ್ಕೆ ತಳ್ಳಿ ನಾಶಮಾಡುವ ಅಸಿ ಎಂದರೆ ಕತ್ತಿ, ಇಂತಹ ಅಸಿಂ–ಕತ್ತಿಯನ್ನು ನಮಸ್ಕರಿಸುತ್ತೇನೆ. ಹೀಗೆ ವಾರಣ ಎಂಬ ಪದದ ಎರಡು ಅರ್ಥಗಳನ್ನು ಬಳಸಿ ಸಿಂದೂರಕ್ಕೆ ಅಕಾರ ಸೇರಿಸಿ ಅಸಿಂ ದೂರಂ ಎಂಬ ಪದಗಳನ್ನು ಪ್ರಯೋಗಿಸಿ ಸ್ವಾರಸ್ಯವನ್ನು ಕವಿ ತೋರಿಸಿದ್ದಾನೆ. ಇಲ್ಲಿರುವ ಶಬ್ದಸ್ವಾರಸ್ಯವನ್ನು ಅನುವಾದದಿಂದ ಹೊರತರುವುದು ಕಷ್ಟ. ಇಂತಹ ಸಂದರ್ಭಗಳಲ್ಲಿ ಮೂಲದಲ್ಲಿರುವ ಅದೇ ಪದಗಳನ್ನು ಬಳಸಿ ಅದೇ ಪರಿಣಾಮವನ್ನು ಸ್ವಲ್ಪಮಟ್ಟಿಗೆ ತರಬಹುದಾದರೂ ಅದು ವಿವರಣೆಯಿಲ್ಲದೆ ಸ್ಪಷ್ಟವಾಗುವುದಿಲ್ಲ. ಅದು ಅನುವಾದವೆನಿಸುವುದೂ ಇಲ್ಲ. ಆದರೆ ಇಂತಹ ಸಂದರ್ಭಗಳು ಬಹಳ ವಿರಳವಾದುದರಿಂದ ಕಥೆಯ ಸರಳವಾದ ಓಟಕ್ಕೆ ಧಕ್ಕೆಯಾಗುವುದಿಲ್ಲ.

ಅಂತೂ ಒಂದು ಶ್ಲೋಕದ ಅರ್ಥವನ್ನು ಮನಸ್ಸಿನಲ್ಲಿ ಚಿಂತಿಸಿ ಮಥಿಸಿ ಅದನ್ನು ಕನ್ನಡದ ಶೈಲಿಯಲ್ಲಿ ಒಂದು ರೀತಿಯ ಪುನಃಸೃಷ್ಟಿಯ ರೂಪದಲ್ಲಿ ಬರೆಯಬೇಕಾಗುತ್ತದೆ. ಆಗಲೇ ಅನುವಾದವು ಸುಂದರವಾಗುವುದು. ವಿದ್ಯಾರ್ಥಿಗಳಿಗೆ ಪ್ರತಿಪದಾರ್ಥವನ್ನು ಯಥಾರ್ಥವಾಗಿ ಹೇಳುವ ಅನುವಾದ ಬೇರೆ. ಆದರೆ ಕನ್ನಡದ ಶೈಲಿಯಲ್ಲಿ ಮಾಡಬೇಕಾದ ಭಾಷಾಂತರವೇ ಬೇರೆ. ಮೂಲದ ಆಶಯ ಸ್ಪಷ್ಟವಾಗಬೇಕಷ್ಟೇ. ಆದರೆ ಪ್ರತಿಬಾರಿಯೂ ನಮಗೆ ಅಪೂರ್ಣತೆಯ ಅನುಭವವಾಗುವುದು ಒಂದು ಭಾಷೆಯ ಸೂಕ್ಷ್ಮತೆಗಳನ್ನು, ಅದರಲ್ಲಿರುವ ವಾಚ್ಯ, ಧ್ವನಿಗಳನ್ನು ಸಂಪೂರ್ಣವಾಗಿ ಬಯಲು ಮಾಡಲು ಸಾಧ್ಯವಾಗದಿರುವುದರಿಂದ. ಅದೃಷ್ಟವಶಾತ್ "ಕಥಾಸರಿತ್ಸಾಗರ'ವು ಕಥೆಯಾಗಿರುವುದರಿಂದ, ಇದರಲ್ಲಿ ಕಥನಕ್ಕೆ ಪ್ರಾಮುಖ್ಯವಿರುವುದರಿಂದ, ಕಾವ್ಯಾಲಂಕಾರಭಾಗ ಕಡಿಮೆಯಾಗಿರುವುದರಿಂದ ಇತರ ಕಾವ್ಯಗಳನ್ನು, ಮುಖ್ಯವಾಗಿ ಪದ್ಯಕಾವ್ಯಗಳನ್ನು ಅನುವಾದ ಮಾಡುವುದಕ್ಕಿಂತ ಇದರ ಅನುವಾದ ತೌಲನಿಕವಾಗಿ ಸುಲಭ.

ಈ ಅನುವಾದವನ್ನು ನಮ್ಮ ವಿದ್ವಾಂಸರು ಸಮರ್ಥವಾಗಿ ನಿರ್ವಹಿಸಿದ್ದಾರೆ ಎಂಬುದರಲ್ಲಿ ಸಂದೇಹವಿಲ್ಲ. ಸಂಸ್ಕೃತದ ಶೈಲಿಯೂ ಆಗಾಗ ಇಣಿಕಿ ನೋಡುತ್ತಿರುವುದು ಅನಿವಾರ್ಯವಾದ ಅನುವಾದಸ್ವಭಾವವಾಗಿದೆ. ಏಕರೂಪತೆಯನ್ನು ತರಲು ಎಷ್ಟೇ ಪ್ರಯತ್ನಿಸಿದರೂ ವಿವಿಧ ವಿದ್ವಾಂಸರು ಮಾಡಿರುವ ಅನುವಾದದ ಭಾಗಗಳು ಅವರವರ ಅನನ್ಯತೆಯನ್ನು ತೋರುತ್ತವೆ ಎಂಬುದೂ ಸುಳ್ಳಲ್ಲ. ಅದನ್ನು ನಾವು ಒಂದು ವಿಶಿಷ್ಟತೆ ಎಂದೇ ಗುರುತಿಸಿಕೊಳ್ಳುವುದು ತಪ್ಪಾಗುವುದಿಲ್ಲ. ಒಬ್ಬರೇ ಅನುವಾದ ಮಾಡಿದಾಗ ಬರುವ ಏಕರೂಪತೆ ಇಲ್ಲಿ ಕಾಣಸಿಗುವುದಿಲ್ಲ ಎಂಬುದು ಸತ್ಯವಾದರೂ, ಒಬ್ಬರೇ ಅನುವಾದ ಮಾಡಿದಾಗ ಬರುವ ಶೈಲಿಯ ಏಕತಾನತೆಯಾಗಲೀ, ಸೀಮಿತತೆಗಳಾಗಲೀ ಇಲ್ಲಿ ಕಾಣದೆ, ವಿವಿಧ

ಚಿಂತನೆಗಳ ಹೊಳಪುಗಳು ಇಲ್ಲಿ ಕಾಣಸಿಗುವ ಒಂದು ಸೌಲಭ್ಯವಿದೆ ಎಂಬುದನ್ನೂ ಒಪ್ಪಬೇಕು. ಅದು ಅಪೇಕ್ಷಣೀಯ ಕೂಡ.

ಇಂತಹ "ಕಥಾಸಾಗರ 'ವನ್ನು ಕನ್ನಡದಲ್ಲಿ ಅನುವಾದ ಮಾಡಿ ಪ್ರಕಟಿಸುವುದರಲ್ಲಿ ಪ್ರಮುಖ ಪಾತ್ರ ವಹಿಸಿದ ಕರ್ನಾಟಕ ಅನುವಾದ ಅಕಾಡೆಮಿಯ ಈ ಪ್ರಯತ್ನವು ಸಂಸ್ಕೃತ ಗ್ರಂಥಗಳ ಅನುವಾದದ ಸಾಹಸದಲ್ಲಿ ಒಂದು ಮೈಲಿಗಲ್ಲು ಎನ್ನಬಹುದು. ಅಕಾಡೆಮಿಯ ಅಧ್ಯಕ್ಷರಾದ ಶ್ರೀ ಪ್ರಧಾನ್ ಗುರುದತ್ ಅವರು ಸ್ವತಃ ಭಾಷಾಂತರ ಧುರೀಣರು. ಅನುವಾದವನ್ನು ಒಂದು ಕಲೆಯಾಗಿ ಹಾಗೂ ಶಾಸ್ತ್ರವಾಗಿ ಬೆಳೆಸುವುದರಲ್ಲಿ ಅವರ ಪಾತ್ರ ಹಿರಿದು. ಅವರಿಗೆ ನನ್ನ ಹೃತ್ಪೂರ್ವಕ ವಂದನೆಗಳು.

ನನ್ನೊಡನೆ ನನ್ನ ಬೆನ್ನೆಲುಬಾಗಿ ನಿಂತು ಸಹಕರಿಸಿದ ಹಾಗೂ ಸೋಮದೇವನು ""ಧುರಂ ಧಧತಿ ವೈಬುಧೀಂ" ಎಂದು ಹೇಳಿದಂತೆ, ಈ ಜ್ಞಾನಲೋಕದ ಭಾರವನ್ನು ಹೊತ್ತ ವಿದ್ವಾಂಸರುಗಳಿಗೂ ನನ್ನ ಕೃತಜ್ಞತಾಪೂರ್ವಕ ನಮನಗಳು. ಅಹರ್ನಿಶಿ ತಮ್ಮನ್ನು ಈ ಕೆಲಸದಲ್ಲಿ ತೊಡಗಿಸಿಕೊಂಡು ಯಾವುದೇ ವಿಳಂಬವಿಲ್ಲದೆ ಈ ಕಷ್ಟಕರವಾದ ಕೆಲಸವನ್ನು ಮುಗಿಸಿಕೊಟ್ಟ ವಿದ್ವಾಂಸರುಗಳಿಗೆ ಕೃತಜ್ಞತೆಗಳನ್ನು ಅರ್ಪಿಸಲು ಮಾತುಗಳು ಸಾಲವು.

ಇದರಲ್ಲಿ ಅಕಾರಾದಿಸೂಚಿಗಳನ್ನಾಗಲೀ, ಗ್ರಂಥಸೂಚಿಗಳನ್ನಾಗಲೀ ಸಿದ್ಧಗೊಳಿಸಿ ಸೇರಿಸಿಲ್ಲ. ಇದು ಸಂಶೋಧನಗ್ರಂಥವಲ್ಲದ್ದರಿಂದ ಪಾಠಾಂತರಗಳನ್ನು ಉಲ್ಲೇಖಿಸಿ ವಿಶ್ಲೇಷಿಸಿಲ್ಲ. ಕೇವಲ ಅನುವಾದ ಮಾತ್ರ ಉದ್ದಿಷ್ಟವಾದುದರಿಂದ ಒಂದು ನಿರ್ದಿಷ್ಟ ಪಾಠವನ್ನು ಅಂಗೀಕರಿಸಿ ಅದರ ಅನುವಾದವನ್ನು ಸಿದ್ಧಗೊಳಿಸಲಾಗಿದೆ. ಮುಂದೆ ಅಕಾರಾದಿ ಸೂಚಿಗಳು ಮುಂತಾದ ಪರಿಷ್ಕಾರಗಳನ್ನು ಹೊಂದಿಸಿ ಅನುವಾದ ಪಂಡಿತರು ಹೊಸ ಅನುವಾದಗಳನ್ನು ಮಾಡುವ ಅವಕಾಶವಿದ್ದೇ ಇದೆ. ಮೂಲಾರ್ಥವು ಜನಸಾಮಾನ್ಯರಿಗೂ ಗಮ್ಯವಾಗಲೆಂಬ ಏಕಮುಖವಾದ ಉದ್ದೇಶದಿಂದ ಈ ಪ್ರಸ್ತುತ ಅನುವಾದವನ್ನು ಮಾಡಲಾಗಿದ್ದು ಇದು ಸಂಶೋಧನ ಗ್ರಂಥವಲ್ಲದ್ದರಿಂದಲೇ ಕಾಲ ದೇಶ ನಿರ್ಣಯಾದಿಗಳ ವಿಸ್ತೃತವಾದ ಪೀಠಿಕೆಯನ್ನು ಸಹ ಕೊಡುವ ಸಾಹಸವನ್ನೂ ಮಾಡಿಲ್ಲ. ಈಗಾಗಲೇ ಇತರ ವಿದ್ವಾಂಸರುಗಳು "ಬೃಹತ್ಕಥೆ 'ಯ, ಹಾಗೂ "ಕಥಾಸರಿತ್ಸಾಗರ 'ದ ಉಗಮ, ಕಾಲ, ಅವುಗಳ ಸ್ಥಾನ ಮುಂತಾದುವುಗಳ ಬಗ್ಗೆ ವಿಸ್ತಾರವಾದ ವಿವೇಚನೆ ಮಾಡಿರುವುದರಿಂದ, ಅಂತಹ ವಿಸ್ತೃತ ಪೀಠಿಕೆಯು ಈ ಅನುವಾದದ ಗ್ರಂಥಮಾಲೆಗೆ ಕಿರೀಟಪ್ರಾಯವಾಗುವ ಬದಲು ಭಾರವಾಗಬಹುದೆಂಬ ಆತಂಕದಿಂದ ಕೂಡ ಅಂತಹ ಪೀಠಿಕೆಯ ಪ್ರಯತ್ನವನ್ನು ಕೈಬಿಡಲಾಗಿದೆ. ಸಂಕ್ಷಿಪ್ತವಾದ ಈ ಪರಿಚಯಾತ್ಮಕ ಮುನ್ನುಡಿಯ ಮಾತುಗಳು ಪರ್ಯಾಪ್ತವೆಂದು ಭಾವಿಸಲಾಗಿದೆ.

**ಪಿ. ಎಸ್. ರಾಮಾನುಜಂ**

# ಪರಿವಿಡಿ



## ಕಥಾಸರಿತ್ಸಾಗರ

# ಮಹಾಕವಿ ಶ್ರೀ ಸೋಮದೇವಭಟ್ಟನಿಂದ

ವಿರಚಿತವಾದ

# ಕಥಾಸರಿತ್ಸಾಗರ

## 'ಕಥಾಪೀಠ' ಎಂಬ ಮೊದಲನೆಯ ಲಂಬಕ

ಬಹಳ ಹಿಂದೆ ಶಿವನ ಮುಖಸಮುದ್ರದಿಂದ ಪರ್ವತರಾಜನ ಮಗಳ (ಪಾರ್ವತಿಯ) ಪ್ರೇಮವೆಂಬ ಮಂದರ ಪರ್ವತದ ಮಂಥನದಿಂದ ಈ ಕಥಾಮೃತವು ಹುಟ್ಟಿತು. ಇದನ್ನು ಪ್ರಯತ್ನಪೂರ್ವಕವಾಗಿ ಆಸ್ವಾದಿಸುವವರು ಯಾವುದೇ ವಿಘ್ನವಿಲ್ಲದೆ ಸಮೃದ್ಧಿಯನ್ನು ಪಡೆದು ಪರಮೇಶ್ವರನ ಪ್ರಸಾದದಿಂದ ಜ್ಞಾನಲೋಕದಲ್ಲಿ ಧುರಂಧರರಾಗುತ್ತಾರೆ.

## ಮೊದಲನೆಯ ತರಂಗ

೧ ಶಿವನ ಮಡಿಲಿನಲ್ಲಿ ಕುಳಿತಿರುವ ಪಾರ್ವತಿಯ ದೃಷ್ಟಿಗಳೆಂಬ ಹಗ್ಗಗಳಿಂದ ಮನ್ಮಥನು ಶಿವನ ಕೊರಳನ್ನು ಸುತ್ತಿರುವುದರಿಂದಲೋ ಎಂಬಂತೆ ಕಪ್ಪಗೆ ಕಾಣಿಸುವ ಶಿವನ ಕಂಠವು ನಮಗೂ ನಿಮಗೂ ಸಂಪತ್ತನ್ನು ನೀಡಲಿ.

---

**ಮಹಾಕವಿ ಶ್ರೀ ಸೋಮದೇವಭಟ್ಟ ವಿರಚಿತ :**

**ಕಥಾಸರಿತ್ಸಾಗರ:**

**ಕಥಾಪೀಠಂ ನಾಮ ಪ್ರಥಮೋ ಲಂಬಕಃ**

ಇದಂ ಗುರುಗಿರೀಂದ್ರಜಾಪ್ರಣಯಮಂದರಾಂದೋಲನಾತ್
ಪುರಾ ಕಿಲ ಕಥಾಮೃತಂ ಹರಮುಖಾಂಬುಧೇರುದ್ಗತಮ್ ।
ಪ್ರಸಹ್ಯ ರಸಯಂತಿ ಯೇ ವಿಗತವಿಘ್ನಲಬ್ಧರ್ದ್ಧಯೋ
ಧುರಂ ದಧತಿ ವೈಬುಧೀಂ ಭುವಿ ಭವಪ್ರಸಾದೇನ ತೇ ॥

## ಪ್ರಥಮಸ್ತರಂಗಃ

ಶ್ರಿಯಂ ದಿಶತು ವಃ ಶಂಭೋಃ ಶ್ಯಾಮಃ ಕಂಠೋ ಮನೋಭುವಾ ।
ಅಂಕಸ್ಥಪಾರ್ವತೀದೃಷ್ಟಿಪಾಶೈರಿವ ವಿವೇಷ್ಟಿತಃ ॥ ೧

೧. ಸಂಜೆ ನಡೆಯುವ ನೃತ್ಯೋತ್ಸವದಲ್ಲಿ ನಕ್ಷತ್ರಗಳನ್ನೆಲ್ಲ ಸೊಂಡಿಲಿನಿಂದ ಆಚೆಗೆ ನೂಕಿ ಸೀತ್ಕಾರದ ನೀರಿನ ಹನಿಗಳಿಂದ ಬೇರೆ ನಕ್ಷತ್ರಗಳನ್ನು ಸೃಷ್ಟಿಸುತ್ತಿರುವಂತೆ ಕಾಣಿಸುವ ಗಣಪತಿ ನಿಮ್ಮನ್ನು ಕಾಪಾಡಲಿ.

೨. ಎಲ್ಲ ವಸ್ತುಗಳನ್ನೂ ಬೆಳಗಿಸುವುದರಲ್ಲಿ ದೀವಿಗೆಯಾದ ಸರಸ್ವತಿಗೆ ವಂದಿಸಿ ಬೃಹತ್ಕಥೆಯ ಸಾರಸಂಗ್ರಹವನ್ನು ನಾನು ರಚಿಸುತ್ತೇನೆ.

೩. ಇದರಲ್ಲಿ ಒಂದನೆಯ ಲಂಬಕ ಕಥಾಪೀಠ. ಎರಡನೆಯದು ಕಥಾಮುಖಲಂಬಕ. ಮೂರನೆಯದು ಲಾವಾಣಕಲಂಬಕ.

೪. ಅಲ್ಲಿಂದ ಮುಂದಿನ ಲಂಬಕವು ನರವಾಹನದತ್ತಜನನ. ಐದನೆಯದು ಚತುರ್ದಾರಿಕಾಲಂಬಕ. ಅದರ ಮುಂದಿನ ಲಂಬಕದ ಹೆಸರು ಮದನಮಂಚುಕಾ.

೬. ಏಳನೆಯದು ರತ್ನಪ್ರಭಾಲಂಬಕ. ಮುಂದೆ ಎಂಟನೆಯದು ಸೂರ್ಯಪ್ರಭಲಂಬಕ.

೭. ಮುಂದಿನ ಲಂಬಕದ ಹೆಸರು ಅಲಂಕಾರವತೀ. ಅದಾದ ಮೇಲೆ ಶಕ್ತಿಯಶೋಲಂಬಕ ಅನಂತರ ಹನ್ನೊಂದನೆಯದು ವೇಲಾಲಂಬಕ.

೮. ಅದಾದಮೇಲೆ ಶಶಾಂಕವತೀ, ಮದಿರಾವತೀ, ಮಹಾಭಿಷೇಕ ಮತ್ತು ಪಂಚ ಎಂಬ ಹೆಸರಿನ ಲಂಬಕಗಳು.

---

ಸಂಧ್ಯಾನೃತ್ತೋತ್ಸವೇ ತಾರಾಃ ಕರೇಣೋದ್ಧೂಯ ವಿಘ್ನಜಿತ್ ।
ಸೀತ್ಕಾರಸೀಕರೈರನ್ಯಾಃ ಕಲ್ಪಯನ್ನಿವ ಪಾತು ವಃ ॥ ೧
ಪ್ರಣಮ್ಯ ವಾಚಂ ನಿಃಶೇಷಪದಾರ್ಥೋದ್ದ್ಯೋತದೀಪಿಕಾಮ್ ।
ಬೃಹತ್ಕಥಾಯಾಃ ಸಾರಸ್ಯ ಸಂಗ್ರಹಂ ರಚಯಾಮ್ಯಹಮ್ ॥ ೨
ಆದ್ಯಮತ್ರ ಕಥಾಪೀಠಂ ಕಥಾಮುಖಮತಃ ಪರಮ್ ।
ತತೋ ಲಾವಾಣಕೋ ನಾಮ ತೃತೀಯೋ ಲಂಬಕೋ ಭವೇತ್ ॥ ೩
ನರವಾಹನದತ್ತಸ್ಯ ಜನನಂ ಚ ತತಃ ಪರಮ್ ।
ಸ್ಯಾಚ್ಚತುರ್ದಾರಿಕಾಖ್ಯಶ್ಚ ತತೋ ಮದನಮಂಚುಕಾ ॥ ೪
ತತೋ ರತ್ನಪ್ರಭಾ ನಾಮ ಲಂಬಕಃ ಸಪ್ತಮೋ ಭವೇತ್ ।
ಸೂರ್ಯಪ್ರಭಾಭಿಧಾನಶ್ಚ ಲಂಬಕಃ ಸ್ಯಾದಥಾಷ್ಟಮಃ ॥ ೬
ಅಲಂಕಾರವತೀ ಚಾಥ ತತಃ ಶಕ್ತಿಯಶಾ ಭವೇತ್ ।
ವೇಲಾಲಂಬಕಸಂಜ್ಞಶ್ಚ ಭವೇದೇಕಾದಶಸ್ತತಃ ॥ ೭
ಶಶಾಂಕವತ್ಯಪಿ ತಥಾ ತತಃ ಸ್ಯಾನ್ಮದಿರಾವತೀ ।
ಮಹಾಭಿಷೇಕಾನುಗತಃ ತತಃಸ್ಯಾತ್ ಪಂಚಲಂಬಕಃ ॥ ೮

೯. ಅನಂತರ ಬರುವುದು ಸುರತಮಂಜರೀ, ಪದ್ಮಾವತೀಲಂಬಕಗಳು ಕೊನೆಯದಾಗಿ ವಿಷಮಶೀಲಾ ಎಂಬುದು ಹದಿನೆಂಟನೆಯ ಲಂಬಕವಾಗುತ್ತದೆ.

೧೦. ಮೂಲವಿರುವಂತೆಯೇ ಈ ಗ್ರಂಥವೂ ಇದೆ. ಸ್ವಲ್ಪವೂ ವ್ಯತ್ಯಾಸವಿಲ್ಲ. ಗ್ರಂಥದ ವಿಸ್ತಾರ ಮಾತ್ರ ಕಡಿಮೆಯಾಗಿದೆ, ಹಾಗೂ ಭಾಷೆ ಬೇರೆಯಾಗಿದೆ ಅಷ್ಟೆ.

೧೧. ಔಚಿತ್ಯವನ್ನು ಕೈಲಾದಷ್ಟು ಉಳಿಸಿಕೊಂಡು ಕಥೆಯ ರಸಕ್ಕೆ ಭಂಗವಾಗದಂತೆ ಕಾವ್ಯಾಂಶವನ್ನು ಇಲ್ಲಿ ಸೇರಿಸಲಾಗಿದೆ.

೧೨. ಪಂಡಿತನೆಂಬ ಕೀರ್ತಿಯನ್ನು ಪಡೆಯಬೇಕೆಂಬ ಲೋಭದಿಂದ ಈ ಕೆಲಸವನ್ನು ನಾನು ಕೈಗೆತ್ತಿಕೊಂಡಿಲ್ಲ. ನಾನಾಕಥೆಗಳ ಜಾಲದ ನೆನಪು ಓದುಗರಿಗೆ ಸುಲಭವಾಗಿ ಆಗಲಿ ಎಂಬುದಕ್ಕಾಗಿ ಮಾತ್ರ ಈ ನನ್ನ ಪ್ರಯತ್ನ.

೧೩. ಕಿನ್ನರರಿಗೂ ಗಂಧರ್ವರಿಗೂ ವಿದ್ಯಾಧರರಿಗೂ ಆಶ್ರಯವಾಗಿ 'ಹಿಮವಾನ್' ಎಂದು ಪ್ರಸಿದ್ಧನಾಗಿರುವ ಪರ್ವತಗಳ ಚಕ್ರವರ್ತಿಯು ಇರುವನು.

೧೪. ಪರ್ವತಗಳಲ್ಲೆಲ್ಲಾ ಆ ಹಿಮವಂತನ ಮಹಿಮೆ ಎಷ್ಟು ಹೆಚ್ಚಾಯಿತೆಂದರೆ ಮೂರು ಲೋಕಗಳ ತಾಯಿ ಭವಾನಿಯೇ ಅವನ ಮಗಳಾಗಿ ಹುಟ್ಟಿದಳು.

೧೫. ಆ ಹಿಮವಂತನ ಉತ್ತರಶಿಖರವೆನಿಸಿದ ಕೈಲಾಸವೆಂಬ ಮಹಾಗಿರಿಯು ಅನೇಕ ಸಹಸ್ರ ಯೋಜನಗಳನ್ನು ವ್ಯಾಪಿಸಿ ನಿಂತುಕೊಂಡಿದೆ.

---

ತತಃ ಸುರತಮಂಜರ್ಯಥ ಪದ್ಮಾವತೀ ಭವೇತ್ ।
ತತೋ ವಿಷಮಶೀಲಾಖ್ಯೋ ಲಂಬಕೋಽಷ್ಟಾದಶೋ ಭವೇತ್॥ ೯
ಯಥಾ ಮೂಲಂ ತಥೈವೈತನ್ ನ ಮನಾಗಪ್ಯತಿಕ್ರಮಃ ।
ಗ್ರಂಥವಿಸ್ತರಸಂಕ್ಷೇಪಮಾತ್ರಂ ಭಾಷಾ ಚ ಭಿದ್ಯತೇ ॥ ೧೦
ಔಚಿತ್ಯಾನ್ವಯರಕ್ಷಾ ಚ ಯಥಾಶಕ್ತಿ ವಿಧೀಯತೇ ।
ಕಥಾರಸಾವಿಘಾತೇನ ಕಾವ್ಯಾಂಶಸ್ಯ ಚ ಯೋಜನಾ ॥ ೧೧
ವೈದಗ್ಧ್ಯಖ್ಯಾತಿಲೋಭಾಯ ಮಮ ನೈವಾಯಮುದ್ಯಮಃ ।
ಕಿಂತು ನಾನಾಕಥಾಜಾಲಸ್ಮೃತಿಸೌಕರ್ಯಸಿದ್ಧಯೇ ॥ ೧೨
ಅಸ್ತಿ ಕಿನ್ನರಗಂಧರ್ವವಿದ್ಯಾಧರನಿಷೇವಿತಃ ।
ಚಕ್ರವರ್ತೀ ಗಿರೀಂದ್ರಾಣಾಂ ಹಿಮವಾನಿತಿ ವಿಶ್ರುತಃ ॥ ೧೩
ಮಾಹಾತ್ಮ್ಯಮಿಯತೀಂ ಭೂಮಿಮಾರೂಢಂ ಯಸ್ಯ ಭೂಭೃತಾಮ್ ।
ಯದ್ ಭವಾನೀ ಸುತಾಭಾವಂ ತ್ರಿಜಗಜ್ಜನನೀ ಗತಾ ॥ ೧೪
ಉತ್ತರಂ ತಸ್ಯ ಶಿಖರಂ ಕೈಲಾಸಾಖ್ಯೋ ಮಹಾಗಿರಿಃ ।
ಯೋಜನಾನಾಂ ಸಹಸ್ರಾಣಿ ಬಹೂನ್ಯಾಕ್ರಮ್ಯ ತಿಷ್ಠತಿ ॥ ೧೫

೧೬. ಮಂದರಪರ್ವತವು ಕ್ಷೀರಸಾಗರವನ್ನು ಕಡೆದರೂ ಅದರಲ್ಲಿ ಹುಟ್ಟಿದ ಅಮೃತದಂತೆ ಬಿಳುಪಾಗಲಿಲ್ಲ. ಆದರೆ ನಾನು ಪ್ರಯತ್ನ ಮಾಡದೆಯೇ ಬೆಳ್ಳಗಾಗಿದ್ದೇನೆ ಎಂದು ಆ ಹಿಮವಂತನು ತನ್ನ ಕಾಂತಿಗಳಿಂದ ನಗುತ್ತಿರುವಂತಿದೆ.

೧೭. ಚರ–ಅಚರಗಳಿಗೆಲ್ಲ ಒಡೆಯನೂ, ಗಣಗಳಿಂದಲೂ ವಿದ್ಯಾಧರರಿಂದಲೂ ಸಿದ್ಧರಿಂದಲೂ ಸೇವೆಯನ್ನು ಸ್ವೀಕರಿಸುವವನೂ ಆದ ಪಾರ್ವತೀಸಖ ಮಹೇಶ್ವರನು ಆ ಕೈಲಾಸದಲ್ಲಿ ವಾಸಿಸುತ್ತಿದ್ದಾನೆ.

೧೮. ಆ ಶಿವನ ಉನ್ನತವಾದ ಹೊಂಬಣ್ಣದ ಜಟಾಜೂಟದಲ್ಲಿ ಶೋಭಿಸುವ ಬಾಲಚಂದ್ರನು ಸಂಧ್ಯಾಕಾಲದಲ್ಲಿ ಚಿನ್ನದ ಬಣ್ಣವನ್ನು ತಾಳಿರುವ ಮೂಡಣಬೆಟ್ಟದ ಶಿಖರದ ಸಂಬಂಧದ ಸುಖವನ್ನು ಅನುಭವಿಸುತ್ತಾನೆ.

೧೯. ಒಬ್ಬ ಅಂಧಕಾಸುರನ ಎದೆಗೆ ಶೂಲವನ್ನು ಚುಚ್ಚಿದುದರ ಮೂಲಕ ಶಿವನು ಮೂರು ಲೋಕಗಳ ಜನರೆಲ್ಲರ ಹೃದಯಗಳ ಶೂಲವನ್ನು ಕಿತ್ತೆಸೆದನಲ್ಲವೇ ? ಇದೊಂದು ಅದ್ಭುತ.

೨೦. ದೇವತೆಗಳೂ ರಾಕ್ಷಸರೂ ಶಿವನಿಗೆ ನಮಿಸುವಾಗ ಅವನ ಕಾಲುಗುರುಗಳಲ್ಲಿ ಅವರ ಪ್ರತಿಬಿಂಬಗಳು ಕಾಣುವುದರಿಂದ ಶಿವನ ಅನುಗ್ರಹಸೂಚಕವಾಗಿ ಅವರಿಗೆಲ್ಲ ಅರ್ಧಚಂದ್ರರು ಸಿಕ್ಕಿದರೋ ಎನ್ನುವಂತೆ ಭಾಸವಾಗುತ್ತದೆ.

೨೧. ಒಂದಾನೊಂದು ಸಲ ಮಹೇಶ್ವರನ ಪ್ರೀತಿಯ ಮಡದಿ ಭವಾನಿ ಏಕಾಂತದಲ್ಲಿ ಸಲುಗೆಯಿಂದ ಆತನನ್ನು ಸ್ತೋತ್ರಗಳಿಂದ ಸಂತೋಷಪಡಿಸಿದಳು.

---

ಮಂದರೋ ಮಥಿತೇಽಪ್ಯಬ್ಧೌ ನ ಸುಧಾಸಿತತಾಂ ಗತಃ ।
ಅಹಂ ತ್ವಯತ್ನಾದಿತಿ ಯೋ ಹಸತೀವ ಸ್ವಕಾಂತಿಭಿಃ ॥ ೧೬
ಚರಾಚರಗುರುಸ್ತತ್ರ ನಿವಸತ್ಯಂಬಿಕಾಸಖಃ ।
ಗಣೈರ್ವಿದ್ಯಾಧರೈಃ ಸಿದ್ಧೈಃ ಸೇವ್ಯಮಾನೋ ಮಹೇಶ್ವರಃ ॥ ೧೭
ಪಿಂಗೋತ್ತುಂಗಜಟಾಜೂಟಗತೋ ಯಸ್ಯಾಶ್ನುತೇ ನವಃ ।
ಸಂಧ್ಯಾಪಿಶಂಗಪೂರ್ವಾದ್ರಿಶೃಂಗಸಂಗಸುಖಂ ಶಶೀ ॥ ೧೮
ಯೇನಾಂಧಕಾಸುರಪತೇರೇಕಸ್ಯಾರ್ಪಯತಾ ಹೃದಿ ।
ಶೂಲಂ ತ್ರಿಜಗತೋಽಪ್ಯಸ್ಯ ಹೃದಯಾಚ್ಚಿತ್ರಮುದ್ಧೃತಮ್ ॥ ೧೯
ಚೂಡಾಮಣಿಷು ಯತ್ಪಾದನಖಾಗ್ರಪ್ರತಿಮಾಂಕಿತಾಃ ।
ಪ್ರಸಾದಪ್ರಾಪ್ತಚಂದ್ರಾರ್ಧಾ ಇವ ಭಾಂತಿ ಸುರಾಸುರಾಃ ॥ ೨೦
ತಂ ಕದಾಚಿತ್ ಸಮುತ್ಪನ್ನವಿಸ್ರಂಭಾ ರಹಸಿ ಪ್ರಿಯಾ ।
ಸ್ತುತಿಭಿಸ್ತೋಷಯಾಮಾಸ ಭವಾನೀ ಪತಿಮೀಶ್ವರಮ್ ॥ ೨೧

೨೨. ಅವಳ ಸ್ತುತಿಗಳಿಂದ ಸಂತುಷ್ಟನಾದ ಶಿವನು ಅವಳನ್ನು ಮಡಿಲಲ್ಲಿ ಕೂಡಿಸಿಕೊಂಡು 'ನಿನ್ನ ಯಾವ ಇಷ್ಟವನ್ನು ಈಡೇರಿಸಲಿ ?' ಎಂದು ಕೇಳಿದನು.

೨೩. ಆಗ ಗಿರಿಜೆ ಹೀಗೆಂದಳು— "ಪ್ರಭು, ಈಗ ನೀನು ಪ್ರಸನ್ನನಾಗಿದ್ದರೆ ನನಗೆ ಯಾವುದಾದರೊಂದು ರಮಣೀಯವಾದ ಹೊಸ ಕಥೆಯನ್ನು ಹೇಳು."

೨೪. "ಪ್ರಿಯೆ, ಜಗತ್ತಿನಲ್ಲಿ ನಿನಗೆ ತಿಳಿಯದುದು ಭೂತ–ವರ್ತಮಾನ–ಭವಿಷ್ಯತ್ತಿನಲ್ಲಿ ಯಾವುದಿದೆ ?" ಎಂದು ಆಕೆಗೆ ಶಿವನು ಹೇಳಿದನು.

೨೫. ಆಗ ಶಿವವಲ್ಲಭೆ ಪಾರ್ವತಿಯು ಹೊಸ ಕಥೆಯೊಂದನ್ನು ಹೇಳಲೇಬೇಕೆಂದು ಒತ್ತಾಯಿಸಿದಳು. ಅಭಿಮಾನವತಿಯರಾದ ಹೆಂಗಸರ ಮನಸ್ಸಿಗೆ ಪ್ರಿಯನ ಪ್ರೀತಿಯನ್ನು ಪರೀಕ್ಷಿಸುವುದೇ ಒಂದು ಆಟವಲ್ಲವೇ ?

೨೬. ಆದ್ದರಿಂದ ಪಾರ್ವತಿಯ ಮನಸ್ಸನ್ನು ಮುದಗೊಳಿಸುವ ಉದ್ದೇಶದಿಂದ ಅವಳ ಪ್ರಭಾವವನ್ನೇ ಮೆರೆಸುವ ಒಂದು ಸಣ್ಣಕಥೆಯನ್ನು ಶಿವನು ಅವಳಿಗೆ ಹೀಗೆ ಹೇಳಿದನು.

೨೭. "ಹಿಂದೆ ಬ್ರಹ್ಮನೂ ನಾರಾಯಣನೂ ನನ್ನನ್ನು ನೋಡುವುದಕ್ಕಾಗಿ ಭೂಲೋಕದಲ್ಲಿ ಅಲೆಯುತ್ತಾ ಹಿಮಾಲಯಪರ್ವತದ ತಪ್ಪಲಿಗೆ ಬಂದರು.

೨೮. ಅಲ್ಲಿ ಅವರು ತಮ್ಮ ಎದುರಿನಲ್ಲಿ ದೊಡ್ಡದೊಂದು ಜ್ವಾಲಾಲಿಂಗವನ್ನು ಕಂಡರು. ಅದರ ತುದಿಯನ್ನು ಕಾಣಬೇಕೆಂದು ಅವರಲ್ಲೊಬ್ಬನು ಮೇಲಕ್ಕೂ ಇನ್ನೊಬ್ಬನು ಕೆಳಕ್ಕೂ ಹೊರಟರು.

---

ತಸ್ಯಾಃ ಸ್ತುತಿವಚೋಹೃಷ್ಟಸ್ತಾಮಂಕಮಧಿರೋಪ್ಯ ಸಃ ।
ಕಿಂ ತೇ ಪ್ರಿಯಂ ಕರೋಮೀತಿ ಬಭಾಷೇ ಶಶಿಶೇಖರಃ ॥ ೨೨
ತತಃ ಪ್ರೋವಾಚ ಗಿರಿಜಾ ಪ್ರಸನ್ನೋಽಸಿ ಯದಿ ಪ್ರಭೋ ।
ರಮ್ಯಾಂ ಕಾಂಚಿತ್ ಕಥಾಂ ಬ್ರೂಹಿ ದೇವಾದ್ಯ ಮಮ ನೂತನಾಮ್ ॥ ೨೩
ಭೂತಂ ಭವದ್ ಭವಿಷ್ಯದ್ವಾ ಕಿಂ ತತ್‌ಸ್ಯಾಜ್ಜಗತಿ ಪ್ರಿಯೇ ।
ಭವತೀ ಯನ್ನ ಜಾನೀಯಾದಿತಿ ಶರ್ವೋಽಪ್ಯುವಾಚ ತಾಮ್ ॥ ೨೪
ತತಃಸಾ ವಲ್ಲಭಾ ತಸ್ಯ ನಿರ್ಬಂಧಮಕರೋತ್ ಪ್ರಭೋಃ ।
ಪ್ರಿಯಪ್ರಣಯಹೇವಾಕಿ ಯತೋ ಮಾನವತೀಮನಃ ॥ ೨೫
ತತಸ್ತಚ್ಚಾಟುಬುದ್ಧ್ಯೈವ ತತ್ಪ್ರಭಾವನಿಬಂಧನಾಮ್ ।
ತಸ್ಯಾಃ ಸ್ವಲ್ಪಾಂ ಕಥಾಮೇವಂ ಶಿವಃ ಸಂಪ್ರತ್ಯವರ್ಣಯತ್ ॥ ೨೬
ಅಸ್ತಿ ಮಾಮೀಕ್ಷಿತುಂ ಪೂರ್ವಂ ಬ್ರಹ್ಮಾ ನಾರಾಯಣಸ್ತಥಾ ।
ಮಹೀಂ ಭ್ರಮಂತೌ ಹಿಮವತ್‌ಪಾದಮೂಲಮವಾಪತುಃ ॥ ೨೭
ತತೋ ದದೃಶತುಸ್ತತ್ರ ಜ್ವಾಲಾಲಿಂಗಂ ಮಹತ್ ಪುರಃ ।
ತಸ್ಯಾಂತಮೀಕ್ಷಿತುಂ ಪ್ರಾಯಾದೇಕ ಊರ್ಧ್ವಮಧೋಽಪರಃ ॥ ೨೮

೨೯. ಅದರ ಕೊನೆಯನ್ನು ಕಾಣದ ಅವರಿಬ್ಬರೂ ತಪಸ್ಸಿನಿಂದ ನನ್ನನ್ನು ಸಂತೋಷಪಡಿಸಿದರು. ಆಗ ಅವರಿಗೆ ಪ್ರತ್ಯಕ್ಷವಾದ ನಾನು 'ನಿಮಗೆ ಬೇಕಾದ ವರವನ್ನು ಕೇಳಿರಿ' ಎಂದು ಹೇಳಿದೆನು.

೩೦. ಆ ಮಾತನ್ನು ಕೇಳಿದ ಕೂಡಲೇ ಬ್ರಹ್ಮನು 'ನೀನು ನನ್ನ ಮಗನಾಗಿ ಹುಟ್ಟಬೇಕು' ಎಂದನು. ಇದರಿಂದ ಇದು ಅತಿಯಾದ ಅಹಂಕಾರವಾಯಿತೆಂಬ ನಿಂದೆಗೆ ಪಾತ್ರನಾಗಿ ಬ್ರಹ್ಮನು ಪೂಜೆಗೆ ಅನರ್ಹನಾಗಿಬಿಟ್ಟನು.

೩೧. ಅನಂತರ ನಾರಾಯಣನು 'ಭಗವನ್, ನಾನು ಯಾವಾಗಲೂ ನಿನ್ನ ಸೇವಾತತ್ಪರನಾಗಿರುವಂತೆ ಮಾಡು' ಎಂದು ವರವನ್ನು ಬೇಡಿದನು.

೩೨. ಅದರಿಂದ ನಾರಾಯಣನು ನನ್ನ ಶರೀರವೇ ಆಗಿಬಿಟ್ಟನು. ಆ ನಾರಾಯಣನೇ ನೀನು. ಶಕ್ತಿಮಂತನಾದ ನನ್ನ ಶಕ್ತಿಯೇ ನೀನು.

೩೩. ಮತ್ತೆ ನೀನು ನನ್ನ ಹಿಂದಿನ ಹೆಂಡತಿ" ಎಂದು ಶಂಕರನು ಹೇಳಿದಾಗ 'ನಾನು ನಿನ್ನ ಹಿಂದಿನ ಹೆಂಡತಿ ಆಗಿದ್ದು ಹೇಗೆ ?' ಎಂದು ಪಾರ್ವತಿ ಕೇಳಿದಳು.

೩೪. ಆಗ ಶಿವನಿಂತೆಂದನು. "ದೇವಿ, ಹಿಂದೆ ನೀನೂ ಇತರ ಅನೇಕರೂ ದಕ್ಷಪ್ರಜಾಪತಿಯ ಮಕ್ಕಳಾಗಿ ಹುಟ್ಟಿದ್ದಿರಿ.

---

ಅಲಬ್ಧಾಂತೌ ತಪೋಭಿರ್ಮಾಂ ತೋಷಯಾಮಾಸತುಶ್ಚ ತೌ ।
ಆವಿರ್ಭೂಯ ಮಯಾ ಚೋಕ್ತೌ ವರಃ ಕೋಽಪ್ಯರ್ಥ್ಯತಾಮಿತಿ ॥ ೨೯
ತಚ್ಛ್ರುತ್ವೈವಾಬ್ರವೀದ್ ಬ್ರಹ್ಮಾ ಪುತ್ರೋ ಮೇಽಸ್ತು ಭವಾನಿತಿ ।
ಅಪೂಜ್ಯಸ್ತೇನ ಜಾತೋಽಸಾವತ್ಯಾರೋಹೇಣ ನಿಂದಿತಃ ॥ ೩೦
ತತೋ ನಾರಾಯಣೋ ದೇವಃ ಸ ವರಂ ಮಾಮಯಾಚತ ।
ಭೂಯಾಸಂ ತವ ಶುಶ್ರೂಷಾಪರೋಽಹಂ ಭಗವನ್ನಿತಿ ॥ ೩೧
ಅತಃ ಶರೀರಭೂತೋಽಸೌ ಮಮ ಜಾತಸ್ತದಾತ್ಮನಾ ।
ಯೋ ಹಿ ನಾರಾಯಣಃ ಸಾ ತ್ವಂ ಶಕ್ತಿಃ ಶಕ್ತಿಮತೋ ಮಮ ॥ ೩೨
ಕಿಂ ಚ ಮೇ ಪೂರ್ವಜಾಯಾ ತ್ವಮಿತ್ಯುಕ್ತವತಿ ಶಂಕರೇ ।
ಕಥಂ ತೇ ಪೂರ್ವಜಾಯಾಹಮಿತಿ ವಕ್ತಿ ಸ್ಮ ಪಾರ್ವತೀ ॥ ೩೩
ಪ್ರತ್ಯುವಾಚ ತತೋ ಭರ್ಗಃ ಪುರಾ ದಕ್ಷಪ್ರಜಾಪತೇಃ ।
ದೇವಿ ತ್ವಂ ಚ ತಥಾನ್ಯಾಶ್ಚ ಬಹ್ವ್ಯೋಽಜಾಯಂತ ಕನ್ಯಕಾಃ ॥ ೩೪

೩೫. ದಕ್ಷನು ನನಗೆ ನಿನ್ನನ್ನೂ, ಧರ್ಮಾದಿದೇವತೆಗಳಿಗೆ ಇತರ ಮಕ್ಕಳನ್ನೂ ಮದುವೆ ಮಾಡಿ ಕೊಟ್ಟನು. ಅನಂತರ ಒಂದು ಸಲ ಅವನು ಯಜ್ಞ ಮಾಡಿದಾಗ ಅಳಿಯಂದಿರೆಲ್ಲರನ್ನೂ ಆಹ್ವಾನಿಸಿದನು.

೩೬. ಆದರೆ ನನ್ನೊಬ್ಬನನ್ನು ಮಾತ್ರ ಅವನು ಯಜ್ಞಕ್ಕೆ ಕರೆಯದೆ ಬಿಟ್ಟನು. ಆಗ ನೀನು 'ಅಪ್ಪ ನನ್ನ ಗಂಡನನ್ನು ನೀನೇಕೆ ಕರೆಯಲಿಲ್ಲ, ಹೇಳು,' ಎಂದು ಅವನನ್ನು ಕೇಳಿದೆ.

೩೭. 'ನಿನ್ನ ಗಂಡ ತಲೆಬುರುಡೆಗಳ ಹಾರವನ್ನು ಧರಿಸಿದ್ದಾನೆ. ಅವನನ್ನು ಯಜ್ಞಕ್ಕೆ ಕರೆಯುವುದು ಹೇಗೆ ?' ಎಂದು ನಿನ್ನ ಕಿವಿಗೆ ವಿಷದ ಸೂಜಿಯಂತಿದ್ದ ಮಾತನ್ನು ದಕ್ಷನು ಉತ್ತರವಾಗಿ ಹೇಳಿದನು.

೩೮. ಇವನೊಬ್ಬ ಪಾಪಿ. ಇವನಿಂದ ಹುಟ್ಟಿದ ಈ ಶರೀರದಿಂದ ಏನು ಪ್ರಯೋಜನ ಎಂದು ಕೋಪದಿಂದ ಆ ಶರೀರವನ್ನು ನೀನು ತ್ಯಜಿಸಿದೆ.

೩೯. ಪ್ರಿಯೆ, ಕೋಪಗೊಂಡ ನಾನು ಆ ದಕ್ಷನ ಯಜ್ಞವನ್ನು ನಾಶಗೊಳಿಸಿದೆನು. ತರುವಾಯ ನೀನು ಸಮುದ್ರದಿಂದ ಚಂದ್ರಕಲೆ ಹುಟ್ಟಿದಂತೆ ಹಿಮವಂತನಿಂದ ಹುಟ್ಟಿದೆ.

೪೦. ನೆನಪಿಸಿಕೋ, ಅನಂತರ ನಾನು ಹಿಮಾಲಯಕ್ಕೆ ತಪಸ್ಸನ್ನು ಆಚರಿಸುವುದಕ್ಕಾಗಿ ಬಂದೆನು. ಅತಿಥಿಯಾಗಿದ್ದ ನನ್ನ ಸೇವೆಗಾಗಿ ನಿನ್ನ ತಂದೆ ನಿನ್ನನ್ನು ನೇಮಿಸಿದನು.

---

ಸ ಮಹ್ಯಂ ಭವತೀಂ ಪ್ರಾದಾದ್ ಧರ್ಮಾದಿಭ್ಯೋಽಪರಾಶ್ಚ ತಾಃ ।
ಯಜ್ಞೇ ಕದಾಚಿದಾಹೂತಾಸ್ತೇನ ಜಾಮಾತರೋಽಖಿಲಾಃ ॥ ೩೫
ವರ್ಜಿತಸ್ತ್ವಹಮೇವೈಕಸ್ತತೋಽಪೃಚ್ಛ್ಯತ ಸ ತ್ವಯಾ ।
ಕಿಂ ನ ಭರ್ತಾ ಮಮಾಹೂತಸ್ತ್ವಯಾ ತಾತೋಚ್ಯತಾಮಿತಿ ॥ ೩೬
ಕಪಾಲಮಾಲೀ ಭರ್ತಾ ತೇ ಕಥಮಾಹೂಯತಾಂ ಮಖೇ ।
ಇತ್ಯುವಾಚ ಗಿರಂ ಸೋಽಥ ತ್ವತ್ಕರ್ಣವಿಷಸೂಚಿಕಾಮ್ ॥ ೩೭
ಪಾಪೋಽಯಮಸ್ಮಾಜ್ಜಾತೇನ ಕಿಂ ದೇಹೇನ ಮಮಾಮುನಾ ।
ಇತಿ ಕೋಪಾತ್ ಪರಿತ್ಯಕ್ತಂ ಶರೀರಂ ತತ್ ಪ್ರಿಯೇ ತ್ವಯಾ ॥ ೩೮
ಸ ಚ ದಕ್ಷಮಖಸ್ತೇನ ಮನ್ಯುನಾ ನಾಶಿತೋ ಮಯಾ ।
ತತೋ ಜಾತಾ ಹಿಮಾದ್ರೇಸ್ತ್ವಮ್ ಅಬ್ಧೇಶ್ಚಂದ್ರಕಲಾ ಯಥಾ ॥ ೩೯
ಅಥ ಸ್ಮರ ತುಷಾರಾದ್ರಿಂ ತಪೋರ್ಥಮಹಮಾಗತಃ ।
ಪಿತಾ ತ್ವಾಂ ಚ ನಿಯುಂಕ್ತೇ ಸ್ಮ ಶುಶ್ರೂಷಾಯೈ ಮಮಾತಿಥೇಃ ॥ ೪೦

೪೧ ತಾರಕಾಸುರನನ್ನು ಕೊಲ್ಲಬಲ್ಲ ಮಗನು ನನಗೆ ಹುಟ್ಟಲಿ ಎಂಬ ಉದ್ದೇಶದಿಂದ ದೇವತೆಗಳು ಮನ್ಮಥನನ್ನು ಅಲ್ಲಿಗೆ ಕಳುಹಿಸಿದರು. ಅವಕಾಶ ಸಿಕ್ಕಿದಾಗ ನನಗೆ ಬಾಣವನ್ನು ಹೊಡೆದ ಮನ್ಮಥನು ಅಲ್ಲೇ ಸುಟ್ಟು ಹೋದನು.

೪೨. ಆಮೇಲೆ ಧೀರೆಯಾದ ನೀನು ತಪಸ್ಸಿನಿಂದ ನನ್ನನ್ನು ಗೆದ್ದುಕೊಂಡೆ. ಆ ತಪಸ್ಸು ವೃದ್ಧಿಗೊಳ್ಳಲೆಂದೇ ನಾನು ಅದನ್ನು ತಾಳಿಕೊಂಡೆನು.

೪೩. ಹೀಗೆ ನೀನು ನನ್ನ ಹಿಂದಿನ ಹೆಂಡತಿಯೂ ಹೌದು. ಇನ್ನು ನಿನಗೆ ನಾನೇನು ಹೇಳಲಿ ?" ಇಷ್ಟು ಹೇಳಿ ಶಿವನು ಸುಮ್ಮನಾಗಲು ದೇವಿ ಪಾರ್ವತಿಯು ಸಿಟ್ಟಾಗಿ

೪೪. "ನೀನು ಮೋಸಗಾರ. ನಾನು ಕೇಳಿಕೊಂಡರೂ ಒಳ್ಳೆಯ ಕಥೆಯನ್ನು ಹೇಳುವುದಿಲ್ಲ. ನೀನು ಗಂಗೆಯನ್ನು ತಲೆಯಮೇಲೆ ಹೊತ್ತಿದ್ದರೂ ಸಂಧ್ಯೆಗೆ ನಮಸ್ಕರಿಸುವೆ. ನನಗೆ ನಿನ್ನ ಗುಟ್ಟು ತಿಳಿಯದೆ ?" ಎಂದು ಹೇಳಿದಳು.

೪೫ ಹೀಗೆ ಪಾರ್ವತಿಯು ಶಿವನನ್ನು ಅನುನಯಿಸಿದಾಗ ಅವಳ ಮಾತನ್ನು ಕೇಳಿ ಶಿವನು ದಿವ್ಯವಾದ ಕಥೆಯನ್ನು ಹೇಳಲು ಒಪ್ಪಿಕೊಂಡನು. ಆಗ ಪಾರ್ವತಿ ಕೋಪವನ್ನು ಬಿಟ್ಟಳು.

೪೬ 'ಇಲ್ಲಿ ಯಾರೂ ಪ್ರವೇಶಿಸಕೂಡದು' ಎಂದು ಪಾರ್ವತಿಯು ನಂದಿಗೆ ಆಜ್ಞಾಪಿಸಿದಳು. ಅದರಂತೆ ನಂದಿಯು ಬಾಗಿಲುಗಳನ್ನು ಮುಚ್ಚಿದನು. ಶಿವನು ಕಥೆಯನ್ನು ಹೇಳಲಾರಂಭಿಸಿದನು.

---

ತಾರಕಾಂತಕಮತ್ಪುತ್ರಪ್ರಾಪ್ತಯೇ ಪ್ರಹಿತಃ ಸುರೈಃ ।
ಲಬ್ಧಾವಕಾಶೋಽವಿಧ್ಯನ್ಮಾಂ ತತ್ರ ದಗ್ಧೋ ಮನೋಭವಃ ॥ ೪೧
ತತಸ್ತೀವ್ರೇಣ ತಪಸಾ ಕ್ರೀತೋಽಹಂ ಧೀರಯಾ ತ್ವಯಾ ।
ತಚ್ಚ ತತ್ಸಂಚಯಾಯೈವ ಮಯಾ ಸೋಢಂ ತವ ಪ್ರಿಯೇ ॥ ೪೨
ಇತ್ಥಂ ಮೇ ಪೂರ್ವಜಾಯಾ ತ್ವಂ ಕಿಮನ್ಯತ್ ಕಥ್ಯತೇ ತವ ।
ಇತ್ಯುಕ್ತ್ವಾ ವಿರತೇ ಶಂಭೌ ದೇವೀ ಕೋಪಾಕುಲಾಬ್ರವೀತ್ ॥ ೪೩
ಧೂರ್ತಸ್ತ್ವಂ ನ ಕಥಾಂ ಹೃದ್ಯಾಂ ಕಥಯಸ್ಯರ್ಥಿತೋಽಪಿ ಸನ್ ।
ಗಂಗಾಂ ವಹನ್ ನಮನ್ ಸಂಧ್ಯಾಂ ವಿದಿತೋಽಸಿ ನ ಕಿಂ ಮಮ ॥ ೪೪
ತಚ್ಛ್ರುತ್ವಾ ಪ್ರತಿಪೇದೇಽಸ್ಯಾ ವಿಹಿತಾನುನಯೋ ಹರಃ ।
ಕಥಾಂ ಕಥಯಿತುಂ ದಿವ್ಯಾಂ ತತಃ ಕೋಪಂ ಮುಮೋಚ ಸಾ ॥ ೪೫
ನೇಹ ಕೈಶ್ಚಿತ್ ಪ್ರವೇಷ್ಟವ್ಯಮಿತ್ಯುಕ್ತೇನ ತಯಾ ಸ್ವಯಮ್ ।
ನಿರುದ್ಧೇ ನಂದಿನಾ ದ್ವಾರೇ ಹರೋ ವಕ್ತುಂ ಪ್ರಚಕ್ರಮೇ ॥ ೪೬

೪೭. "ದೇವತೆಗಳಿಗೆ ಯಾವಾಗಲೂ ಸುಖ. ಮನುಷ್ಯರಿಗೆ ಯಾವಾಗಲೂ ದುಃಖ. ದೇವತೆಗಳ ಹಾಗೂ ಮನುಷ್ಯರ ಚರಿತೆ ಅಷ್ಟು ಆಕರ್ಷಕವಾಗಿರುವುದಿಲ್ಲ.

೪೮ – ೪೯ ಆದ್ದರಿಂದ ನಾನು ನಿನಗೆ ವಿದ್ಯಾಧರರ ಚರಿತೆಯನ್ನು ಹೇಳುತ್ತೇನೆ." ಎಂದು ಪಾರ್ವತಿಗೆ ಹರನು ಹೇಳುತ್ತಿರುವಷ್ಟರಲ್ಲಿ ಶಿವನ ಅನುಗ್ರಹಕ್ಕೆ ಪಾತ್ರನಾಗಿದ್ದ ಪುಷ್ಪದಂತನೆಂಬ ಗಣೋತ್ತಮನು ಅಲ್ಲಿಗೆ ಬಂದನು. ಬಾಗಿಲಲ್ಲೇ ನಿಂತಿದ್ದ ನಂದಿಯು ಅವನು ಒಳಗೆ ಬರದಂತೆ ತಡೆದನು.

೫೦. 'ನಂದಿಯು ಇಂದು ನಿಷ್ಕಾರಣವಾಗಿ ನನ್ನನ್ನೂ ತಡೆಯುತ್ತಿದ್ದಾನೆ, ಏನಿರಬಹುದು ?' ಎಂದು ಕುತೂಹಲದಿಂದ ಯಾರಿಗೂ ಕಾಣದಂತೆ ಪುಷ್ಪದಂತನು ಯೋಗಶಕ್ತಿಯಿಂದ ಆ ಕ್ಷಣದಲ್ಲೇ ಒಳಗೆ ಪ್ರವೇಶಿಸಿದನು.

೫೧. ಹಾಗೆ ಒಳಗೆ ಹೋದ ಪುಷ್ಪದಂತನು ಶಿವನು ವರ್ಣಿಸಿದ ಏಳು ಜನ ವಿದ್ಯಾಧರರ ಅಪೂರ್ವವಾದ ಅದ್ಭುತ ಚರಿತವನ್ನು ಕೇಳಿಸಿಕೊಂಡನು.

೫೨. ತಾನು ಕೇಳಿಸಿಕೊಂಡ ಕಥೆಗಳನ್ನು ಅವನು ತನ್ನ ಪತ್ನಿ ಜಯಾ ಎಂಬವಳಿಗೆ ಹೇಳಿದನು. ಹಣವನ್ನೂ ರಹಸ್ಯವನ್ನೂ ಹೆಂಗಸರಿಂದ ಮುಚ್ಚಿಡಲು ಯಾರಿಗೆ ತಾನೆ ಸಾಧ್ಯ ?

---

ಏಕಾಂತಸುಖಿನೋ ದೇವಾ ಮನುಷ್ಯಾ ನಿತ್ಯದುಃಖಿತಾಃ ।
ದಿವ್ಯಮಾನುಷಚೇಷ್ಟಾ ತು ಪರಭಾಗೇ ನ ಹಾರಿಣೀ ॥ ೪೭
ವಿದ್ಯಾಧರಾಣಾಂ ಚರಿತಮತಸ್ತೇ ವರ್ಣಯಾಮ್ಯಹಮ್ ।
ಇತಿ ದೇವ್ಯಾ ಹರೋ ಯಾವದ್ ವಕ್ತಿ ತಾವದುಪಾಗಮತ್ ॥ ೪೮
ಪ್ರಸಾದವಿತ್ತಃ ಶಂಭೋಃ ಪುಷ್ಪದಂತೋ ಗಣೋತ್ತಮಃ ।
ನ್ಯಷೇಧಿ ಚ ಪ್ರವೇಶೋಽಸ್ಯ ನಂದಿನಾ ದ್ವಾರಿ ತಿಷ್ಠತಾ ॥ ೪೯
ನಿಷ್ಕಾರಣಂ ನಿಷೇಧೋಽದ್ಯ ಮಮಾಪೀತಿ ಕುತೂಹಲಾತ್ ।
ಅಲಕ್ಷಿತೋ ಯೋಗವಶಾತ್ ಪ್ರವಿವೇಶ ಸ ತತ್ಕ್ಷಣಾತ್ ॥ ೫೦
ಪ್ರವಿಷ್ಟಃ ಶ್ರುತವಾನ್ ಸರ್ವಂ ವರ್ಣ್ಯಮಾನಂ ಪಿನಾಕಿನಾ ।
ವಿದ್ಯಾಧರಾಣಾಂ ಸಪ್ತಾನಾಮಪೂರ್ವಂ ಚರಿತಾದ್ಭುತಮ್ ॥ ೫೧
ಶ್ರುತ್ವಾಥ ಗತ್ವಾ ಭಾರ್ಯಾಯೈ ಜಯಾಯೈ ಸೋಽಪ್ಯವರ್ಣಯತ್ ।
ಕೋ ಹಿ ವಿತ್ತಂ ರಹಸ್ಯಂ ವಾ ಸ್ತ್ರೀಷು ಶಕ್ನೋತಿ ಗೂಹಿತುಮ್ ॥ ೫೨

೫೩. ಆ ಕಥೆಗಳಿಂದ ಆಶ್ಚರ್ಯಗೊಂಡ ದ್ವಾರಪಾಲಿಕೆಯಾದ ಜಯಾ ಪಾರ್ವತಿಯ ಬಳಿಗೇ ಹೋಗಿ ಆ ಕಥೆಗಳನ್ನು ಬಣ್ಣಿಸಿದಳು. ಹೆಂಗಸರಲ್ಲಿ ವಾಕ್ಸಂಯಮ ಎಲ್ಲಿಯದು ?

೫೪. ಆಗ ಗಿರಿಜೆಗೆ ಶಿವನ ಮೇಲೆ ಸಿಟ್ಟು ಬಂದಿತು. ಅವಳು ಶಿವನಿಗೆ "ನೀನು ಹೇಳಿದ್ದೇನೂ ಹೊಸ ಕಥೆ ಅಲ್ಲ. ಜಯೆಗೂ ಈ ಕಥೆ ಗೊತ್ತು ' ಎಂದು ಹೇಳಿದಳು.

೫೫. ಆಗ ಧ್ಯಾನದಿಂದ ಏನು ನಡೆಯಿತೆಂಬುದನ್ನು ತಿಳಿದುಕೊಂಡ ಶಿವನು 'ಪುಷ್ಪದಂತನು ಯೋಗಶಕ್ತಿಯಿಂದ ಮನೆಯೊಳಗೆ ಪ್ರವೇಶಿಸಿ ಈ ಕಥೆಗಳನ್ನು ಕೇಳಿಬಿಟ್ಟಿದ್ದಾನೆ' ಎಂದು ಹೇಳಿದನು.

೫೬. "ಜಯೆಗೆ ಅವನೇ ಬಣ್ಣಿಸಿದ್ದಾನೆ. ಅವನಲ್ಲದೆ ಬೇರೆ ಯಾರಿಗೆ ಈ ಕಥೆ ತಿಳಿದಿದೆ ?' ಎಂದು ಶಿವನು ಹೇಳಿದುದನ್ನು ಕೇಳಿ ಅತ್ಯಂತ ಕ್ರುದ್ಧಳಾದ ಪಾರ್ವತಿಯು ಪುಷ್ಪದಂತನನ್ನು ಅಲ್ಲಿಗೆ ಕರೆಸಿದಳು.

೫೭. ಕಂಗೆಟ್ಟ ಪುಷ್ಪದಂತನಿಗೆ 'ಅವಿನೀತನೇ, ಮನುಷ್ಯನಾಗಿ ಹುಟ್ಟು' ಎಂದು ಶಾಪವನ್ನು ಕೊಟ್ಟಳು. ಅವನ ಪರವಾಗಿ ಪ್ರಾರ್ಥಿಸಿಕೊಂಡ ಮಾಲ್ಯವಂತನೆಂಬ ಗಣನಿಗೂ ಅದೇ ಶಾಪ ಸಿಕ್ಕಿತು.

೫೮. ಅವರಿಬ್ಬರೂ ಜಯೆಯೊಡನೆ ಪಾರ್ವತಿಯ ಕಾಲಿಗೆ ಬಿದ್ದರು. ಅವರೆಲ್ಲರೂ ಬೇಡಿಕೊಂಡಾಗ ಪಾರ್ವತಿಯು ಶಾಪವಿಮೋಚನೆಯನ್ನು ಕುರಿತು ನಿಧಾನವಾಗಿ ಹೀಗೆಂದಳು.

---

ಸಾಪಿ ತದ್ವಿಸ್ಮಯಾವಿಷ್ಟಾ ಗತ್ವಾ ಗಿರಿಸುತಾಗ್ರತಃ ।
ಜಗೌ ಜಯಾ ಪ್ರತೀಹಾರೀ ಸ್ತ್ರೀಷು ವಾಕ್ಸಂಯಮಃ ಕುತಃ ॥ ೫೩
ತತಶ್ಚುಕೋಪ ಗಿರಿಜಾ ನಾಪೂರ್ವಂ ವರ್ಣಿತಂ ತ್ವಯಾ ।
ಜಾನಾತಿ ಹಿ ಜಯಾಪ್ಯೇತದಿತಿ ಚೇಶ್ವರಮಭ್ಯಧಾತ್ ॥ ೫೪
ಪ್ರಣಿಧಾನಾದಥ ಜ್ಞಾತ್ವಾ ಜಗಾದೈವಮುಮಾಪತಿಃ ।
ಯೋಗೀ ಭೂತ್ವಾ ಪ್ರವಿಶ್ಯೇದಂ ಪುಷ್ಪದಂತಸ್ತದಾಶೃಣೋತ್ ॥ ೫೫
ಜಯಾಯೈ ವರ್ಣಿತಂ ತೇನ ಕೋಽನ್ಯೋ ಜಾನಾತಿ ಹಿ ಪ್ರಿಯೇ ।
ಶ್ರುತ್ವೇತ್ಯಾನಾಯಯದ್ ದೇವೀ ಪುಷ್ಪದಂತಮತಿಕ್ರುಧಾ ॥ ೫೬
ಮರ್ತ್ಯೋ ಭವಾವಿನೀತೇತಿ ವಿಹ್ವಲಂ ತಂ ಶಶಾಪ ಸಾ ।
ಮಾಲ್ಯವಂತಂ ಚ ವಿಜ್ಞಪ್ತಿಂ ಕುರ್ವಾಣಂ ತತ್ಕೃತೇ ಗಣಮ್ ॥ ೫೭
ನಿಪತ್ಯ ಪಾದಯೋಸ್ತಾಭ್ಯಾಂ ಜಯಯಾ ಸಹ ಬೋಧಿತಾ ।
ಶಾಪಾಂತಂ ಪ್ರತಿ ಶರ್ವಾಣೀ ಶನೈರ್ವಚನಮಬ್ರವೀತ್ ॥ ೫೮

೫೯. "ಸುಪ್ರತೀಕ ಎಂಬ ಯಕ್ಷನು ಕುಬೇರನ ಶಾಪದಿಂದ ವಿಂಧ್ಯಾರಣ್ಯದಲ್ಲಿ ಕಾಣಭೂತಿಯೆಂಬ ಪಿಶಾಚುವಾಗಿದ್ದಾನೆ

೬೦. ಅವನನ್ನು ನೋಡಿದಾಗ ನೀನು ಪೂರ್ವಜನ್ಮಸ್ಮರಣೆಯನ್ನು ಪಡೆದು ಅವನಿಗೆ ಈ ಕಥೆಯನ್ನು ಹೇಳಿದಾಗ ಶಾಪದಿಂದ ಮುಕ್ತನಾಗುವೆ."

೬೧. "ಕಾಣಭೂತಿಯಿಂದ ಈ ಕಥೆಯನ್ನು ಮಾಲ್ಯವಂತನು ಕೇಳಿದಾಗ ಕಾಣಭೂತಿಗೆ ಶಾಪವಿಮೋಚನೆಯಾಗುವುದು. ಈ ಕಥೆಯನ್ನು ಲೋಕದಲ್ಲಿ ಪ್ರಸಾರಮಾಡಿದ ಮೇಲೆ ಮಾಲ್ಯವಂತನೂ ಶಾಪದಿಂದ ಮುಕ್ತನಾಗುವನು."

೬೨. ಇಷ್ಟು ಹೇಳಿ ಪಾರ್ವತಿ ಸುಮ್ಮನಾದಾಗ, ಪುಷ್ಪದಂತ ಮಾಲ್ಯವಂತರಿಬ್ಬರೂ ಆ ಕ್ಷಣದಲ್ಲೇ ಮಿಂಚಿನರಾಶಿಗಳಂತೆ ನೋಡುತ್ತಿದ್ದಂತೆಯೇ ಮಾಯವಾದರು.

೬೩. ಸ್ವಲ್ಪ ಕಾಲವು ಕಳೆದುಹೋದ ಮೇಲೆ ದಯಾರ್ದ್ರಳಾದ ಗೌರಿಯು ಶಂಕರನನ್ನು ಕೇಳಿದಳು "ದೇವ, ಪ್ರಮಥರಿಬ್ಬರಿಗೆ ನಾನು ಶಾಪವನ್ನಿತ್ತಿದ್ದೆನಲ್ಲ, ಅವರು ಈಗ ಭೂಮಿಯಲ್ಲಿ ಎಲ್ಲಿ ಹುಟ್ಟಿದ್ದಾರೆ ?"

೬೪. ಚಂದ್ರಮೌಳಿಯಾದ ಶಂಕರನು ಹೇಳಿದನು "ಪ್ರಿಯೆ, ಕೌಶಾಂಬಿಯೆಂಬ ಮಹಾನಗರಿಯಲ್ಲಿ ಪುಷ್ಪದಂತನು 'ವರರುಚಿ' ಎಂಬ ಹೆಸರಿನಿಂದ ಹುಟ್ಟಿದ್ದಾನೆ.

೬೫. ಮಾಲ್ಯವಂತನೂ ಸುಪ್ರತಿಷ್ಠಿತ ಎಂಬ ಶ್ರೇಷ್ಠನಗರದಲ್ಲಿ ಗುಣಾಢ್ಯನೆಂಬ ಹೆಸರಿನಿಂದ ಜನಿಸಿದ್ದಾನೆ. ಅವರಿಬ್ಬರ ವೃತ್ತಾಂತವಿಷ್ಟು."

---

ವಿಂಧ್ಯಾಟವ್ಯಾಂ ಕುಬೇರಸ್ಯ ಶಾಪಾತ್ ಪ್ರಾಪ್ತ ಪಿಶಾಚತಾಮ್ ।
ಸುಪ್ರತೀಕಾಭಿಧೋ ಯಕ್ಷಃ ಕಾಣಭೂತ್ಯಾಖ್ಯಯಾ ಸ್ಥಿತಃ ॥ ೫೯
ತಂ ದೃಷ್ಟ್ವಾ ಸಂಸ್ಮರನ್ ಜಾತಿಂ ಯದಾ ತಸ್ಮೈ ಕಥಾಮಿಮಾಮ್ ।
ಪುಷ್ಪದಂತ ಪ್ರವಕ್ತಾಸಿ ತದಾ ಶಾಪಾದ್ ವಿಮೋಕ್ಷ್ಯಸೇ ॥ ೬೦
ಕಾಣಭೂತೇಃ ಕಥಾಂ ತಾಂ ತು ಯದಾ ಶ್ರೋಷ್ಯತಿ ಮಾಲ್ಯವಾನ್ ।
ಕಾಣಭೂತೌ ತದಾ ಮುಕ್ತೇ ಕಥಾಂ ಪ್ರಖ್ಯಾಪ್ಯ ಮೋಕ್ಷ್ಯತೇ ॥ ೬೧
ಇತ್ಯುಕ್ತ್ವಾ ಶೈಲತನಯಾ ವ್ಯರಮತ್ ತೌ ಚ ತತ್ಕ್ಷಣಾತ್ ।
ವಿದ್ಯುತ್ಪುಂಜಾವಿವ ಗಣೌ ದೃಷ್ಟನಷ್ಟೌ ಬಭೂವತುಃ ॥ ೬೨
ಅಥ ಜಾತು ಯಾತಿ ಕಾಲೇ ಗೌರೀ ಪಪ್ರಚ್ಛ ಶಂಕರಂ ಸದಯಾ ।
ದೇವ ಮಯಾ ತೌ ಶಪ್ತೌ ಪ್ರಮಥವರೌ ಕುತ್ರ ಭುವಿ ಜಾತೌ ॥ ೬೩
ಅವದಚ್ಚ ಚಂದ್ರಮೌಲಿಃ ಕೌಶಾಂಬೀತ್ಯಸ್ತಿ ಯಾ ಮಹಾನಗರೀ ।
ತಸ್ಯಾಂ ಸ ಪುಷ್ಪದಂತೋ ವರರುಚಿನಾಮಾ ಪ್ರಿಯೇ ಜಾತಃ ॥ ೬೪
ಅನ್ಯಚ್ಚ ಮಾಲ್ಯವಾನಪಿ ನಗರವರೇ ಸುಪ್ರತಿಷ್ಠಿತಾಖ್ಯೇ ಸಃ ।
ಜಾತೋ ಗುಣಾಢ್ಯನಾಮಾ ದೇವಿ ತಯೋರೇಷ ವೃತ್ತಾಂತಃ ॥ ೬೫

೬೬ ಇಷ್ಟು ಹೇಳಿ, ಸತತವಾಗಿ ಸೇವೆಯನ್ನು ಮಾಡಿದ್ದ ಭೃತ್ಯರಿಗೆ ತಾನು ಅವಮಾನ ಮಾಡಿದೆನೆಂಬ ಚಿಂತೆಯಿಂದ ನೊಂದಿದ್ದ ಮಡದಿಯನ್ನು ಕೈಲಾಸಶೈಲದ ತಪ್ಪಲಿನಲ್ಲಿ ನಿರ್ಮಿಸಿದ್ದ ಕಲ್ಪಲತೆಗಳಿಂದ ಆವೃತವಾಗಿದ್ದ ಕ್ರೀಡಾಗೃಹಗಳಲ್ಲಿ ತಿರುಗಾಡಿಸಿ ಭಗವಾನ್ ಶಂಕರನು ಆನಂದಪಡಿಸಿದನು.

ಮಹಾಕವಿ ಸೋಮದೇವಭಟ್ಟನು ರಚಿಸಿದ
ಕಥಾಸರಿತ್ಸಾಗರದಲ್ಲಿ ಕಥಾಪೀಠಲಂಬಕದ
ಮೊದಲನೆಯ ತರಂಗವು ಮುಗಿಯಿತು.

---

ಏವಂ ನಿವೇದ್ಯ ಸ ವಿಭುಃ ಸತತಾನುವೃತ್ತ —
ಭೃತ್ಯಾವಮಾನವಿಭಾವನಸಾನುತಾಪಾಮ್ ।
ಕೈಲಾಸಶೈಲತಟಕಲ್ಪಿತಕಲ್ಪವಲ್ಲೀ —
ಲೀಲಾಗೃಹೇಷು ದಯಿತಾಂ ರಮಯನ್ನುವಾಸ ॥ ೬೬

ಇತಿ ಮಹಾಕವಿ ಶ್ರೀ ಸೋಮದೇವಭಟ್ಟವಿರಚಿತೇ
ಕಥಾಸರಿತ್ಸಾಗರೇ
ಕಥಾಪೀಠಲಂಬಕೇ ಪ್ರಥಮಸ್ತರಂಗಃ

# ಎರಡನೆಯ ತರಂಗ

೧ ಪುಷ್ಪದಂತನು ಮಾನವಶರೀರವನ್ನು ಹೊಂದಿ ವರರುಚಿ, ಕಾತ್ಯಾಯನ ಎಂಬ ಹೆಸರುಗಳಿಂದ ಖ್ಯಾತನಾಗಿ ಸಂಚರಿಸುತ್ತಿದ್ದನು.

೨ ಎಲ್ಲ ವಿದ್ಯೆಗಳಲ್ಲೂ ಪಾರಂಗತನಾಗಿ, ನಂದನೆಂಬ ರಾಜನ ಮಂತ್ರಿಯಾಗಿದ್ದ ಅವನು ಲೌಕಿಕ ವ್ಯವಹಾರಗಳಲ್ಲಿ ಬೇಸರಗೊಂಡು ಒಮ್ಮೆ ವಿಂಧ್ಯವಾಸಿನೀ ಎಂಬ ದೇವತೆಯನ್ನು ದರ್ಶಿಸಲೆಂದು ಹೊರಟನು.

೩ ತಪಸ್ಸಿನಿಂದ ಪ್ರಸನ್ನಳಾದ ವಿಂಧ್ಯವಾಸಿನಿಯು ಕನಸಿನಲ್ಲಿ ಕಾಣಿಸಿಕೊಂಡು ವಿಂಧ್ಯಾಟವಿಗೆ ಹೋಗಿ ಕಾಣಭೂತಿಯನ್ನು ಕಾಣಲು ಆದೇಶವನ್ನಿತ್ತಳು.

೪ ಹುಲಿ, ಕೋತಿ ಮುಂತಾದ ಜಂತುಗಳಿಂದ ಕೂಡಿದ್ದ, ನೀರಿಲ್ಲದ ಕಾರಣ ಒರಟಾಗಿ ಬೆಳೆದಿದ್ದ ಮರಗಳಿದ್ದ ಆ ವಿಂಧ್ಯಾಟವಿಯನ್ನು ವರರುಚಿಯು ಕಾಣಭೂತಿಯ ದರ್ಶನಕ್ಕಾಗಿ ಹೊಕ್ಕನು. ಅಲ್ಲಿ ಅಲೆದಾಡುತ್ತಿದ್ದಾಗ ಎತ್ತರವಾಗಿದ್ದ ಒಂದು ಆಲದ ಮರ ಅವನಿಗೆ ಕಂಡಿತು.

೫ ಅದರ ಸಮೀಪದಲ್ಲಿ ಸಾಲವೃಕ್ಷದಂತೆ ದೊಡ್ಡ ದೇಹವನ್ನು ಹೊಂದಿದ್ದ ಕಾಣಭೂತಿಯನ್ನು ಕಂಡನು. ಅವನನ್ನು ನೂರಾರು ಪಿಶಾಚಿಗಳು ಸುತ್ತುವರಿದಿದ್ದುವು.

---

# ದ್ವಿತೀಯಸ್ತರಂಗಃ

ತತಃ ಸ ಮರ್ತ್ಯವಪುಷಾ ಪುಷ್ಪದಂತಃ ಪರಿಭ್ರಮನ್ ।
ನಾಮ್ನಾ ವರರುಚಿಃ ಕಿಂಚ ಕಾತ್ಯಾಯನ ಇತಿ ಶ್ರುತಃ ॥ ೧
ಪಾರಂ ಸಂಪ್ರಾಪ್ಯ ವಿದ್ಯಾನಾಂ ಕೃತ್ವಾ ನಂದಸ್ಯ ಮಂತ್ರಿತಾಮ್ ।
ಖಿನ್ನಃ ಸಮಾಯಯೌ ದ್ರಷ್ಟುಂ ಕದಾಚಿದ್ ವಿಂಧ್ಯವಾಸಿನೀಮ್ ॥ ೨
ತಪಸಾರಾಧಿತಾ ದೇವೀ ಸ್ವಪ್ನಾದೇಶೇನ ಸಾ ಚ ತಮ್ ।
ಪ್ರಾಹಿಣೋದ್ ವಿಂಧ್ಯಕಾಂತಾರಂ ಕಾಣಭೂತಿಮವೇಕ್ಷಿತುಮ್ ॥ ೩
ವ್ಯಾಘ್ರವಾನರಸಂಕೀರ್ಣೇ ನಿಸ್ತೋಯಪರುಷದ್ರುಮೇ ।
ಭ್ರಮಂಸ್ತತ್ರ ಚ ಸ ಪ್ರಾಂಶುಂ ನ್ಯಗ್ರೋಧತರುಮೈಕ್ಷತ ॥ ೪
ದದರ್ಶ ಚ ಸಮೀಪೇಽಸ್ಯ ಪಿಶಾಚಾನಾಂ ಶತೈರ್ವೃತಮ್ ।
ಕಾಣಭೂತಿಂ ಪಿಶಾಚಂ ತಂ ವರ್ಷ್ಮಣಾ ಸಾಲಸನ್ನಿಭಮ್ ॥ ೫

೬ ವರರುಚಿಯನ್ನು ನೋಡುತ್ತಲೇ ಕಾಣಭೂತಿಯು ಅವನ ಪಾದಗಳನ್ನು ಮುಟ್ಟಿ ನಮಸ್ಕರಿಸಿದನು. ವರರುಚಿಯು ಕುಳಿತುಕೊಂಡು ಕಾಣಭೂತಿಗೆ ಹೀಗೆ ಹೇಳಿದನು.

೭ "ಒಳ್ಳೆಯ ನಡವಳಿಕೆಯುಳ್ಳ ನಿನಗೆ ಈ ಗತಿ ಏಕೆ ಬಂದಿತು ?" ಆ ಮಾತನ್ನು ಕೇಳಿ ಸ್ನೇಹಪೂರ್ವಕವಾಗಿ ಕಾಣಭೂತಿಯು ಹೇಳಿದನು.

೮ "ನನಗೆ ಈ ಬಗೆಗೆ ಸ್ವತಃ ಏನೂ ತಿಳಿಯದು. ಆದರೆ ಉಜ್ಜಯಿನಿಯ ಶ್ಮಶಾನದಲ್ಲಿ ಶಿವನಿಂದ ನಾನೇನು ಕೇಳಿದ್ದೆನೋ ಅದನ್ನು ಹೇಳುವೆನು, ಕೇಳು.

೯. 'ದೇವ, ಶ್ಮಶಾನಗಳಲ್ಲೂ ಮನುಷ್ಯರ ತಲೆಬುರುಡೆಗಳಲ್ಲೂ ನಿನಗೇಕೆ ಆಸಕ್ತಿ ?' ಎಂದು ಪಾರ್ವತಿಯು ಕೇಳಿದಾಗ ಶಿವನಿಂತೆಂದನು.

೧೦. ಹಿಂದೆ ಪ್ರಳಯವುಂಟಾದಾಗ ಜಗತ್ತೆಲ್ಲ ನೀರಿನಿಂದ ತುಂಬಿತ್ತು. ಆಗ ನಾನು ನನ್ನ ತೊಡೆಯನ್ನು ಸೀಳಿ ರಕ್ತದ ಹನಿಯೊಂದನ್ನು ಅದರಲ್ಲಿ ಬೀಳಿಸಿದೆ.

೧೧. ನೀರಿನಲ್ಲಿ ಬಿದ್ದ ಆ ಹನಿಯು ಮೊಟ್ಟೆಯಾಯಿತು. ಅದನ್ನು ಎರಡು ಭಾಗವಾಗಿ ಒಡೆದಾಗ ಪುರುಷನು ಉದಯಿಸಿದನು. ಸೃಷ್ಟಿಯು ನಡೆಯಲಿ ಎಂದು ನಾನು ಪ್ರಕೃತಿಯನ್ನು ಸೃಷ್ಟಿಸಿದೆನು.

೧೨. ಅವರಿಬ್ಬರೂ ಬೇರೆ ಪ್ರಜಾಪತಿಗಳನ್ನು ಸೃಷ್ಟಿಸಿದರು. ಆ ಪ್ರಜಾಪತಿಗಳು ಪ್ರಜೆಗಳನ್ನು ಸೃಷ್ಟಿಸಿದರು. ಆದ್ದರಿಂದ ಆ ಪುರುಷನು ಲೋಕದಲ್ಲಿ ಪಿತಾಮಹನೆಂದು ಪ್ರಸಿದ್ಧನಾದನು.

---

ಸ ಕಾಣಭೂತಿನಾ ದೃಷ್ಟ್ವಾ ಕೃತಪಾದೋಪಸಂಗ್ರಹಃ ।
ಕಾತ್ಯಾಯನೋ ಜಗಾದೈನಮ್ ಉಪವಿಷ್ಟಃ ಕ್ಷಣಾಂತರೇ ॥ ೬
ಸದಾಚಾರೋ ಭವಾನೇವಂ ಕಥಮೇತಾಂ ಗತಿಂ ಗತಃ ।
ಇತ್ಯುಕ್ತ್ವಾ ಕೃತಸೌಹಾರ್ದಂ ಕಾಣಭೂತಿಸ್ತಮಬ್ರವೀತ್ ॥ ೭
ಸ್ವತೋ ಮೇ ನಾಸ್ತಿ ವಿಜ್ಞಾನಂ ಕಿಂತು ಶರ್ವಾನ್ಮಯಾ ಶ್ರುತಮ್ ।
ಉಜ್ಜಯಿನ್ಯಾಂ ಶ್ಮಶಾನೇ ಯತ್ ಶೃಣು ತತ್ ಕಥಯಾಮಿ ತೇ ॥ ೮
ಕಪಾಲೇಷು ಶ್ಮಶಾನೇಷು ಕಸ್ಮಾದ್ ದೇವ ರತಿಸ್ತವ ।
ಇತಿ ಪೃಷ್ಟಸ್ತತೋ ದೇವ್ಯಾ ಭಗವಾನಿದಮಬ್ರವೀತ್ ॥ ೯
ಪುರಾ ಕಲ್ಪಕ್ಷಯೇ ವೃತ್ತೇ ಜಾತಂ ಜಲಮಯಂ ಜಗತ್ ।
ಮಯಾ ತತೋ ವಿಭಿದ್ಯೋರುಂ ರಕ್ತಬಿಂದುರ್ನಿಪಾತಿತಃ ॥ ೧೦
ಜಲಾಂತಸ್ತದಭೂದಂಡಂ ತಸ್ಮಾದ್ ದ್ವೇಧಾಕೃತಾತ್ ಪುಮಾನ್ ।
ನಿರಗಚ್ಛತ್ ತತಃ ಸೃಷ್ಟಾ ಸರ್ಗಾಯ ಪ್ರಕೃತಿರ್ಮಯಾ ॥ ೧೧
ತೌ ಚ ಪ್ರಜಾಪತೀನನ್ಯಾನ್ ಸೃಷ್ಟವಂತೌ ಪ್ರಜಾಶ್ಚ ತೇ ।
ಅತಃ ಪಿತಾಮಹಃ ಪ್ರೋಕ್ತಃ ಸ ಪುಮಾನ್ ಜಗತಿ ಪ್ರಿಯೇ ॥ ೧೨

೧೩. ಹೀಗೆ ಚರಾಚರ ರೂಪವಾದ ವಿಶ್ವವನ್ನು ಸೃಷ್ಟಿಸಿದ ಅವನಿಗೆ ಗರ್ವವುಂಟಾಯಿತು. ಆಗ ನಾನು ಆ ಪುರುಷನ ತಲೆಯನ್ನು ಕತ್ತರಿಸಿಹಾಕಿದೆನು.

೧೪. ಆಮೇಲೆ ನನಗೆ ಅನುತಾಪವುಂಟಾಗಿ ನಾನು ಮಹಾವ್ರತವನ್ನು ಸ್ವೀಕರಿಸಿದೆನು. ಪ್ರಿಯೆ, ಈ ಕಾರಣದಿಂದ ನನ್ನ ಕೈಯಲ್ಲಿ ಕಪಾಲವಿದೆ ಮತ್ತು ಶ್ಮಶಾನವಾಸ ನನಗೆ ಇಷ್ಟವಾಗಿದೆ

೧೫. ದೇವಿ, ಅಷ್ಟೇ ಅಲ್ಲದೆ ಈ ಕಪಾಲದ ರೂಪದಲ್ಲಿ ಜಗತ್ತೇ ನನ್ನ ಕೈಯಲ್ಲಿದೆ. ಹಿಂದೆ ನಾನು ಹೇಳಿದ ಮೊಟ್ಟೆಯ ಎರಡು ಭಾಗಗಳೇ ಭೂಮಿ–ಆಕಾಶಗಳಾಗಿವೆ.”

೧೬. ಶಿವನು ಇಷ್ಟು ಹೇಳಿದಾಗ ಅವರಿಬ್ಬರ ಮಾತುಗಳನ್ನು ಮತ್ತೂ ಕೇಳುವ ಕುತೂಹಲದಿಂದ ನಾನು ಅಲ್ಲೇ ಇದ್ದೆನು. ಆಗ ಮತ್ತೆ ಪಾರ್ವತಿಯು ಗಂಡನನ್ನು ಹೀಗೆ ಕೇಳಿದಳು.

೧೭. “ಆ ಪುಷ್ಪದಂತನು ಇನ್ನೆಷ್ಟು ಕಾಲದಲ್ಲಿ ಮತ್ತೆ ನಮ್ಮನ್ನು ಸೇರಿಕೊಳ್ಳುವನು ?” ಈ ಪ್ರಶ್ನೆಯನ್ನು ಕೇಳಿ ಮಹೇಶ್ವರನು ದೇವಿಗೆ ನನ್ನ ಬಗ್ಗೆ ಹೀಗೆಂದನು.

೧೮. ""ಇಲ್ಲಿ ಕಾಣಿಸುವ ಪಿಶಾಚನೇ ಕುಬೇರನ ಸೇವಕನಾಗಿದ್ದ ಯಕ್ಷನು. ಅವನಿಗೆ ಸ್ಥೂಲಶಿರಸ್ ಎಂಬ ರಾಕ್ಷಸನು ಗೆಳೆಯನಾಗಿದ್ದನು.

೧೯. ಆ ಪಾಪಿ ರಾಕ್ಷಸನೊಡನೆ ಅವನ ಗೆಳೆತನವನ್ನು ನೋಡಿದ ಕುಬೇರನು ‘ವಿಂಧ್ಯಾಟವಿಯಲ್ಲಿ ಪಿಶಾಚನಾಗು’ ಎಂದು ಆದೇಶವನ್ನಿತ್ತನು.

---

ಏವಂ ಚರಾಚರಂ ಸೃಷ್ಟ್ವಾ ವಿಶ್ವಂ ದರ್ಪಮಗಾದಸೌ ।
ಪುರುಷಸ್ತೇನ ಮೂರ್ಧಾನಮುತ್ಕೃತ್ತಸ್ಯಾಹಮಚ್ಛಿದಮ್ ॥ ೧೩
ತತೋಽನುತಾಪೇನ ಮಯಾ ಮಹಾವ್ರತಮಗೃಹ್ಯತ ।
ಅತಃ ಕಪಾಲಪಾಣಿತ್ವಂ ಶ್ಮಶಾನಪ್ರಿಯತಾ ಚ ಮೇ ॥ ೧೪
ಕಿಂ ಚೈತನ್ಮೇ ಕಪಾಲಾತ್ಮ ಜಗದ್ ದೇವಿ ಕರೇ ಸ್ಥಿತಮ್ ।
ಪೂರ್ವೋಕ್ತಾಂಡಕಪಾಲೇ ದ್ವೇ ರೋದಸೀ ಕೀರ್ತಿತೇ ಯತಃ ॥ ೧೫
ಇತ್ಯುಕ್ತೇ ಶಂಭುನಾ ತತ್ರ ಶ್ರೋಷ್ಯಾಮೀತಿ ಸಕೌತುಕೇ ।
ಸ್ಥಿತೇ ಮಯಿ ತತೋ ಭೂಯಃ ಪಾರ್ವತೀ ಪತಿಮಭ್ಯಧಾತ್ ॥ ೧೬
ಸ ಪುಷ್ಪದಂತಃ ಕಿಯತಾ ಕಾಲೇನಾಸ್ಮಾನುಪೈಷ್ಯತಿ ।
ತದಾಕರ್ಣ್ಯಾಬ್ರವೀದ್ ದೇವೀಂ ಮಾಮುದ್ದಿಶ್ಯ ಮಹೇಶ್ವರಃ ॥ ೧೭
ಪಿಶಾಚೋ ದೃಶ್ಯತೇ ಯೋಽಯಮೇಷ ವೈಶ್ರವಣಾನುಗಃ ।
ಯಕ್ಷೋ ಮಿತ್ರಮಭೂಚ್ಚಾಸ್ಯ ರಕ್ಷಃ ಸ್ಥೂಲಶಿರಾ ಇತಿ ॥ ೧೮
ಸಂಗತಂ ತೇನ ಪಾಪೇನ ನಿರೀಕ್ಷ್ಯೈನಂ ಧನಾಧಿಪಃ ।
ವಿಂಧ್ಯಾಟವ್ಯಾಂ ಪಿಶಾಚತ್ವಮಾದಿಶದ್ ಧನದೇಶ್ವರಃ ॥ ೧೯

೨೦. ಯಕ್ಷನು ತಮ್ಮ ದೀರ್ಘಜಂಘನು ಕುಬೇರನ ಕಾಲಿಗೆ ಬಿದ್ದು ಶಾಪವಿಮೋಚನೆಗಾಗಿ ಬೇಡಿಕೊಂಡಾಗ ಧನಾಧಿಪನೆನಿಸಿದ ಕುಬೇರನಿಂತೆಂದನು.

೨೧. "ಶಾಪದಿಂದ ಭೂಲೋಕಕ್ಕೆ ಇಳಿದಿರುವ ಪುಷ್ಪದಂತನಿಂದ ಇವನು ಬೃಹತ್ಕಥೆಯನ್ನು ಕೇಳಬೇಕು. ಶಾಪದಿಂದ ಮನುಷ್ಯರೂಪವನ್ನು ಪಡೆದಿರುವ ಮಾಲ್ಯವಂತನಿಗೆ ಆ ಕಥೆಯನ್ನು ಹೇಳಬೇಕು.

೨೨. ಅನಂತರ ಆ ಗಣರೀರ್ವರೊಡನೆ ಇವನು ಶಾಪವಿಮುಕ್ತನಾಗುವನು'— ಹೀಗೆ ಕುಬೇರನಿಂದ ಇವನ ಶಾಪವಿಮೋಚನೆ ಹೇಳಲ್ಪಟ್ಟಿತು.

೨೩. ಪ್ರಿಯೆ, ನೀನೂ ಪುಷ್ಪದಂತನಿಗೆ ಅದೇ ಶಾಪವಿಮುಕ್ತಿಯನ್ನು ಕೊಟ್ಟಿರುವೆಯೆಂಬುದನ್ನು ನೆನಪಿಸಿಕೋ." ಹೀಗೆ ಹೇಳಿದ ಶಿವನ ಮಾತನ್ನು ಕೇಳಿ ಹರ್ಷದಿಂದ ನಾನಿಲ್ಲಿಗೆ ಬಂದೆನು.

೨೪. ಹೀಗೆ ನನ್ನ ಈ ಶಾಪರೂಪದ ದೋಷವು ಪುಷ್ಪದಂತನ ಬರುವಿಕೆಯಿಂದ ಕೊನೆಗೊಳ್ಳಲಿದೆ ಎಂದು ಹೇಳಿ ಕಾಣಭೂತಿ ಸುಮ್ಮನಾದನು.

೨೫. ಕೂಡಲೇ ವರರುಚಿಗೆ ತನ್ನ ಪೂರ್ವಜನ್ಮದ ಸ್ಮರಣೆ ಬಂದಿತು. ನಿದ್ದೆಯಿಂದ ಎಚ್ಚೆತ್ತುಗೊಂಡವನಂತೆ ಅವನೆಂದನು. 'ನಾನೇ ಆ ಪುಷ್ಪದಂತ. ನನ್ನಿಂದ ಆ ಕಥೆಯನ್ನು ಕೇಳು.'

೨೬. ಹೀಗೆಂದು ಏಳು ಲಕ್ಷ ಶ್ಲೋಕಗಳನ್ನುಳ್ಳ ಏಳು ಮಹಾಕಥೆಗಳನ್ನು ವರರುಚಿ ಕಾತ್ಯಾಯನನು ಹೇಳಿದನು. ಅವುಗಳನ್ನು ಕೇಳಿದ ಕಾಣಭೂತಿ ಹೀಗೆಂದನು.

---

ಭ್ರಾತ್ರಾಸ್ಯ ದೀರ್ಘಜಂಘೇನ ಪತಿತ್ವಾ ಪಾದಯೋಸ್ತತಃ ।
ಶಾಪಾಂತಂ ಪ್ರತಿ ವಿಜ್ಞಪ್ತೋ ವದತಿ ಸ್ಮ ಧನಾಧಿಪಃ ॥ ೨೦
ಶಾಪಾವತೀರ್ಣಾದಾಕರ್ಣ್ಯ ಪುಷ್ಪದಂತಾನ್ಮಹಾಕಥಾಮ್ ।
ಉಕ್ತ್ವಾ ಮಾಲ್ಯವತೇ ತಾಂ ಚ ಶಾಪಾತ್ ಪ್ರಾಪ್ತಾಯ ಮರ್ತ್ಯತಾಮ್ ॥ ೨೧
ತಾಭ್ಯಾಂ ಗಣಾಭ್ಯಾಂ ಸಹಿತಃ ಶಾಪಮೇನಂ ತರಿಷ್ಯತಿ ।
ಇತೀಹ ಧನದೇನಾಸ್ಯ ಶಾಪಾಂತೋ ವಿಹಿತಸ್ತದಾ ॥ ೨೨
ತ್ವಯಾ ಚ ಪುಷ್ಪದಂತಸ್ಯ ಸ ಏವೇತಿ ಸ್ಮರ ಪ್ರಿಯೇ ।
ಏತಚ್ಛ್ರುತ್ವಾ ವಚಃ ಶಂಭೋಃ ಸಹರ್ಷೋಽಹಮಿಹಾಗತಃ ॥ ೨೩
ಇತ್ಥಂ ಮೇ ಶಾಪದೋಷೋಽಯಂ ಪುಷ್ಪದಂತಾಗಮಾವಧಿಃ ।
ಇತ್ಯುಕ್ತ್ವಾ ವಿರತೇ ತಸ್ಮಿನ್ ಕಾಣಭೂತೌ ಚ ತತ್ಕ್ಷಣಮ್ ॥ ೨೪
ಸ್ಮೃತ್ವಾ ವರರುಚಿರ್ಜಾತಿಂ ಸುಪ್ತೋತ್ಥಿತ ಇವಾವದತ್ ।
ಸ ಏವ ಪುಷ್ಪದಂತೋಽಹಂ ಮತ್ತಸ್ತಾಂ ಚ ಕಥಾಂ ಶೃಣು ॥ ೨೫
ಇತ್ಯುಕ್ತ್ವಾ ಗ್ರಂಥಲಕ್ಷಾಣಿ ಸಪ್ತ ಸಪ್ತ ಮಹಾಕಥಾಃ ।
ಕಾತ್ಯಾಯನೇನ ಕಥಿತಾಃ ಕಾಣಭೂತಿಸ್ತತೋಽಬ್ರವೀತ್ ॥ ೨೬

೨೭. "ದೇವ, ನೀನು ರುದ್ರನ ಅವತಾರ. ಬೇರೆ ಯಾರು ಈ ಕಥೆಯನ್ನು ತಿಳಿದಿರಲು ಸಾಧ್ಯ ? ನಿನ್ನ ಅನುಗ್ರಹದಿಂದ ಶಾಪವು ನನ್ನ ಶರೀರದಿಂದ ಬಹುಮಟ್ಟಿಗೆ ಹೊರಟುಹೋದಂತಾಗಿದೆ.

೨೮. ಪ್ರಭು, ನಿನ್ನ ವೃತ್ತಾಂತವನ್ನು ಜನ್ಮದಿಂದ ಆರಂಭಿಸಿ ಹೇಳು. ನನ್ನಂಥವನಿಂದ ಮುಚ್ಚಿಡಲ್ಪಡಬೇಕಾದುದಲ್ಲದ ಪಕ್ಷದಲ್ಲಿ ಅದನ್ನು ಹೇಳಿ ನನ್ನನ್ನು ಪಾವನಗೊಳಿಸು."

೨೯. ಹಾಗೆ ನಮಸ್ಕರಿಸುತ್ತಾ ಹೇಳಿದ ಕಾಣಭೂತಿಯ ಪ್ರಾರ್ಥನೆಗೆ ಅನುಗುಣವಾಗಿ ವರರುಚಿಯು ಜನ್ಮದಿಂದ ಆರಂಭಿಸಿ ತನ್ನ ವೃತ್ತಾಂತವನ್ನು ಸವಿಸ್ತರವಾಗಿ ಹೇಳತೊಡಗಿದನು.

## ವರರುಚಿಯ ಕಥೆ

೩೦. ಕೌಶಾಂಬಿಯಲ್ಲಿ ಒಬ್ಬ ಬ್ರಾಹ್ಮಣನಿದ್ದನು. ಅವನಿಗೆ ಸೋಮದತ್ತ ಅಗ್ನಿಶಿಖ ಎಂಬ ಹೆಸರುಗಳಿದ್ದುವು. ವಸುದತ್ತಾ ಎಂಬಾಕೆ ಆತನ ಭಾರ್ಯೆ.

೩೧. ಮುನಿಕನ್ಯೆಯಾಗಿದ್ದ ಆಕೆ ಶಾಪದಿಂದ ಆ ಜಾತಿಯಲ್ಲಿ ಹುಟ್ಟಿದ್ದಳು. ಶಾಪದ ಕಾರಣದಿಂದಲೇ ನಾನೂ ಆಕೆಯಲ್ಲಿ ಆ ಬ್ರಾಹ್ಮಣಶ್ರೇಷ್ಠನ ಮಗನಾಗಿ ಹುಟ್ಟಿದೆನು.

೩೨. ನಾನಿನ್ನೂ ಚಿಕ್ಕ ಹುಡುಗನಿರುವಾಗಲೇ ನನ್ನ ತಂದೆ ಸತ್ತುಹೋದನು. ಕಷ್ಟದ ಕೆಲಸಗಳನ್ನು ಮಾಡುತ್ತಲೇ ನನ್ನ ತಾಯಿ ನನ್ನನ್ನು ಬೆಳೆಸಿದಳು.

---

ದೇವ ರುದ್ರಾವತಾರಸ್ತ್ವಂ ಕೋಽನ್ಯೋ ವೇತ್ತಿ ಕಥಾಮಿಮಾಮ್ ।
ತ್ವತ್ಪ್ರಸಾದಾದ್ ಗತಪ್ರಾಯಃ ಸ ಶಾಪೋ ಮೇ ಶರೀರತಃ ॥ ೨೭
ತದ್ ಬ್ರೂಹಿ ನಿಜವೃತ್ತಾಂತಂ ಜನ್ಮನಃ ಪ್ರಭೃತಿ ಪ್ರಭೋ ।
ಮಾಂ ಪವಿತ್ರಯ ಭೂಯೋಽಪಿ ನ ಗೋಪ್ಯಂ ಯದಿ ಮಾದೃಶೇ ॥ ೨೮
ತತೋ ವರರುಚಿಸ್ತಸ್ಯ ಪ್ರಣತಸ್ಯಾನುರೋಧತಃ ।
ಸರ್ವಮಾಜನ್ಮವೃತ್ತಾಂತಂ ವಿಸ್ತರಾದಿದಮಬ್ರವೀತ್ ॥ ೨೯
ಕೌಶಾಂಬ್ಯಾಂ ಸೋಮದತ್ತಾಖ್ಯೋ ನಾಮ್ನಾಗ್ನಿಶಿಖ ಇತ್ಯಪಿ ।
ದ್ವಿಜೋಽಭೂತ್ತಸ್ಯ ಭಾರ್ಯಾ ಚ ವಸುದತ್ತಾಭಿಧಾಭವತ್ ॥ ೩೦
ಮುನಿಕನ್ಯಾ ಚ ಸಾ ಶಾಪಾತ್ ತಸ್ಯಾಂ ಜಾತಾವಜಾತರತ್ ।
ತಸ್ಯಾಂ ತಸ್ಮಾದ್ ದ್ವಿಜವರಾತ್ ಏಷ ಜಾತೋಽಸ್ಮಿ ಶಾಪತಃ ॥ ೩೧
ತತೋ ಮಮಾತಿಬಾಲಸ್ಯ ಪಿತಾ ಪಂಚತ್ವಮಾಗತಃ ।
ಅತಿಷ್ಠದ್ ವರ್ಧಯಂತೀ ತು ಮಾತಾ ಮಾಂ ಕೃಚ್ಛ್ರಕರ್ಮಭಿಃ ॥ ೩೨

೩೩. ಒಮ್ಮೆ ಇಬ್ಬರು ಬ್ರಾಹ್ಮಣರು ನಮ್ಮ ಮನೆಗೆ ಬಂದರು. ದೂರಪ್ರಯಾಣದಿಂದ ಅವರ ಶರೀರವೆಲ್ಲ ಧೂಳಿನಿಂದ ತುಂಬಿಕೊಂಡಿತ್ತು. ಒಂದು ರಾತ್ರಿ ಮಾತ್ರ ಉಳಿದುಕೊಳ್ಳಲು ಅವರು ಬಂದಿದ್ದರು.

೩೪. ಅವರಿಬ್ಬರೂ ನಮ್ಮ ಮನೆಯಲ್ಲಿದ್ದಾಗ ಮೃದಂಗದ ಧ್ವನಿ ಕೇಳಿ ಬಂದಿತು. ಆಗ ತನ್ನ ಪತಿಯನ್ನು ನೆನೆದುಕೊಂಡು ನನ್ನ ತಾಯಿ ಗದ್ಗದ ಸ್ವರದಿಂದ ನನಗೆ ಹೇಳಿದಳು.

೩೫. "ಮಗನೆ, ನಿನ್ನ ತಂದೆಯ ಮಿತ್ರನಾಗಿದ್ದ ನಂದನೆಂಬ ನಟನು ನರ್ತಿಸುತ್ತಿದ್ದಾನೆ." "ಅಮ್ಮ, ನಾನು ಆ ನರ್ತನವನ್ನು ನೋಡಲು ಹೋಗುತ್ತೇನೆ.

೩೬. ಆಮೇಲೆ ಬಂದು ನಿನಗೆ ಆ ನರ್ತನವನ್ನು ಸಾಹಿತ್ಯಸಹಿತವಾಗಿ ತೋರಿಸುತ್ತೇನೆ" ಎಂದು ನಾನು ಹೇಳಿದೆನು. ನನ್ನ ಮಾತನ್ನು ಕೇಳಿ ಬ್ರಾಹ್ಮಣರಿಬ್ಬರಿಗೂ ಆಶ್ಚರ್ಯವಾಯಿತು.

೩೭. ಅವರಿಬ್ಬರನ್ನೂ ಉದ್ದೇಶಿಸಿ ಆಗ ನನ್ನ ತಾಯಿ ಹೇಳಿದಳು. "ಮಕ್ಕಳೇ, ಇದರಲ್ಲೇನೂ ಸಂಶಯವಿಲ್ಲ. ಈ ಹುಡುಗನು ಒಮ್ಮೆ ಕೇಳಿದರೆ ಸಾಕು, ಅದನ್ನೆಲ್ಲ ಮನಸ್ಸಿನಲ್ಲಿ ಧರಿಸಬಲ್ಲನು."

೩೮. ಇದನ್ನು ದೃಢಪಡಿಸಿಕೊಳ್ಳಲು ಆ ಬ್ರಾಹ್ಮಣರು ಪ್ರಾತಿಶಾಖ್ಯವನ್ನು ನನ್ನೆದುರಿಗೆ ಒಮ್ಮೆ ಪಠಿಸಿದರು. ಅವರು ನೋಡುತ್ತಿರುವಂತೆಯೇ ನಾನು ಅದೆಲ್ಲವನ್ನೂ ಹಾಗೆಯೇ ಮತ್ತೆ ಹೇಳಿದೆನು.

---

ಅಥಾಭ್ಯಾಗಚ್ಛತಾಂ ವಿಪ್ರೌ ದ್ವಾವಸ್ಮದ್ಗೃಹಮೇಕದಾ ।
ಏಕರಾತ್ರಿನಿವಾಸಾರ್ಥಂ ದೂರಾಧ್ವಪರಿಧೂಸರೌ ॥ ೩೩
ತಿಷ್ಠತೋಸ್ತತ್ರ ಚ ತಯೋರುದಭೂನ್ಮುರಜಧ್ವನಿಃ ।
ತೇನ ಮಾಮಬ್ರವೀನ್ಮಾತಾ ಭರ್ತುಃ ಸ್ಮೃತ್ವಾ ಸಗದ್ಗದಮ್ ॥ ೩೪
ನೃತ್ಯತ್ಯೇಷ ಪಿತುರ್ಮಿತ್ರಂ ತವ ನಂದೋ ನಟಃ ಸುತ ।
ಅಹಮಪ್ಯವದಂ ಮಾತಃ ದ್ರಷ್ಟುಮೇತದ್ವ್ರಜಾಮ್ಯಹಮ್ ॥ ೩೫
ತವಾಪಿ ದರ್ಶಯಿಷ್ಯಾಮಿ ಸಪಾಠಂ ಸರ್ವಮೇವ ತತ್ ।
ಏತನ್ಮದ್ವಚನಂ ಶ್ರುತ್ವಾ ವಿಪ್ರೌ ತೌ ವಿಸ್ಮಯಂ ಗತೌ ॥ ೩೬
ಅವೋಚತ್ ತೌ ಚ ಮನ್ಮಾತಾ ಹೇ ಪುತ್ರೌ ನಾತ್ರ ಸಂಶಯಃ ।
ಸಕೃಚ್ಛ್ರುತಮಯಂ ಬಾಲಃ ಸರ್ವಂ ವೈ ಧಾರಯೇದ್ಧೃದಿ ॥ ೩೭
ಜಿಜ್ಞಾಸಾರ್ಥಮಥಾಭ್ಯಾಂ ಮೇ ಪ್ರಾತಿಶಾಖ್ಯಮಪಠ್ಯತ ।
ತಥೈವ ತನ್ಮಯಾ ಸರ್ವಂ ಪಠಿತಂ ಪಶ್ಯತೋಸ್ತಯೋಃ ॥ ೩೮

೩೯. ಅನಂತರ ನಾನು ಅವರಿಬ್ಬರೊಡನೆ ನಾಟ್ಯವನ್ನು ನೋಡಲು ಹೋದೆನು. ನೋಡಿದ ಮೇಲೆ ಮನೆಗೆ ಬಂದು ತಾಯಿಯ ಎದುರಿನಲ್ಲಿ ನಾಟ್ಯವೆಲ್ಲವನ್ನೂ ಮಾಡಿ ತೋರಿಸಿದೆನು.

೪೦. ಆ ಬ್ರಾಹ್ಮಣರಿಬ್ಬರಲ್ಲಿ ಒಬ್ಬನು ವ್ಯಾಡಿ. ಆತನು ನನ್ನನ್ನು ಏಕಶ್ರುತಧರ (ಒಮ್ಮೆ ಕೇಳಿದುದನ್ನು ಧರಿಸಬಲ್ಲವನು) ಎಂದು ನಿಶ್ಚಯಿಸಿ ನನ್ನ ತಾಯಿಗೆ ನಮಸ್ಕರಿಸಿ ಹೀಗೆ ಹೇಳಿದನು.

## ವ್ಯಾಡಿ - ಇಂದ್ರದತ್ತರ ಕಥೆ

೪೧. "ತಾಯಿ, ವೇತಸವೆಂಬ ಪುರದಲ್ಲಿ ದೇವಸ್ವಾಮಿ, ಕರಂಭಕ ಎಂಬ ಬ್ರಾಹ್ಮಣ ಸೋದರರಿದ್ದರು. ಅವರಲ್ಲಿ ಪರಸ್ಪರ ತುಂಬ ಪ್ರೀತಿಯಿತ್ತು.

೪೨. ಅವರಲ್ಲೊಬ್ಬನ ಮಗನಾದ ಇವನು ಇಂದ್ರದತ್ತ ಇನ್ನೊಬ್ಬನ ಮಗನಾದ ನಾನು ವ್ಯಾಡಿ. ನಾನು ಹುಟ್ಟಿದಾಗಲೇ ನನ್ನ ತಂದೆ ಮೃತನಾದನು.

೪೩. ಆ ಶೋಕದಿಂದ ಇಂದ್ರದತ್ತನ ತಂದೆಯೂ ಪರಲೋಕದ ಹಾದಿಯನ್ನು ಹಿಡಿದನು. ಅದರಿಂದ ನಮ್ಮಿಬ್ಬರ ತಾಯಂದಿರ ಎದೆಗಳೂ ದುಃಖದಿಂದ ಬಿರಿದುಹೋದುವು.

೪೪. ಈ ಕಾರಣದಿಂದ ಹಣವಿದ್ದರೂ ಅನಾಥರಾದ ನಾವಿಬ್ಬರೂ ವಿದ್ಯೆಯನ್ನು ಗಳಿಸಬೇಕೆಂದು ಹೊರಟು ಕುಮಾರಸ್ವಾಮಿಯನ್ನು ತಪಸ್ಸಿನಿಂದ ಆರಾಧಿಸಿದೆವು.

---

ತತಸ್ತಾಭ್ಯಾಂ ಸಮಂ ಗತ್ವಾ ದೃಷ್ಟ್ವಾ ನಾಟ್ಯಂ ತಥೈವ ತತ್ ।
ಗೃಹಮೇತ್ಯಾಗ್ರತೋ ಮಾತುಃ ಸಮಗ್ರಂ ದರ್ಶಿತಂ ಮಯಾ ॥ ೩೯
ಏಕಶ್ರುತಧರತ್ವೇನ ಮಾಂ ನಿಶ್ಚಿತ್ಯ ಕಥಾಮಿಮಾಮ್ ।
ವ್ಯಾಡಿನಾಮಾ ತಯೋರೇಕೋ ಮನ್ಮಾತುಃ ಪ್ರಣತೋಽಬ್ರವೀತ್ ॥ ೪೦
ವೇತಸಾಖ್ಯೇ ಪುರೇ ಮಾತರ್ದೇವಸ್ವಾಮಿಕರಂಭಕೌ ।
ಅಭೂತಾಂ ಭ್ರಾತರೌ ವಿಪ್ರಾವತಿಪ್ರೀತೌ ಪರಸ್ಪರಮ್ ॥ ೪೧
ತಯೋರೇಕಸ್ಯ ಪುತ್ರೋಽಯಮಿಂದ್ರದತ್ತೋಽ ಪರಸ್ಯ ಚ ।
ಅಹಂ ವ್ಯಾಡಿಃ ಸಮುತ್ಪನ್ನೋ ಮತ್ಪಿತಾಸ್ತಂ ಗತಸ್ತತಃ ॥ ೪೨
ತಚ್ಛೋಕಾದಿಂದ್ರದತ್ತಸ್ಯ ಪಿತಾ ಯಾತೋ ಮಹಾಪಥಮ್ ।
ಅಸ್ಮಜ್ಜನನ್ಯೋಶ್ಚ ತತಃ ಸ್ಫುಟಿತಂ ಹೃದಯಂ ತತಃ ॥ ೪೩
ತೇನಾನಾಥೌ ಸತಿ ಧನೇಽಪ್ಯಾವಾಂ ವಿದ್ಯಾಭಿಕಾಂಕ್ಷಿಣೌ ।
ಗತೌ ಪ್ರಾರ್ಥಯಿತುಂ ಸ್ವಾಮಿಕುಮಾರಂ ತಪಸಾ ತತಃ ॥ ೪೪

೪೫ ತಪಸ್ಸು ಮಾಡುತ್ತಿದ್ದ ನಮಗೆ ಆ ಪ್ರಭು ಸ್ವಪ್ನದಲ್ಲಿ ಕಾಣಿಸಿಕೊಂಡು ಹೀಗೆ ಆದೇಶಿಸಿದನು– "ನಂದ ಮಹಾರಾಜನಿಗೆ ಸೇರಿದ ಪಾಟಲಿಕ ಎಂಬ ನಗರವಿದೆ.

೪೬ ಅಲ್ಲಿ ವರ್ಷನೆಂಬ ವಿಪ್ರನಿದ್ದಾನೆ. ಅವನಿಂದ ನೀವು ಪೂರ್ಣ ವಿದ್ಯೆಯನ್ನು ಪಡೆಯಬಹುದು. ಆದ್ದರಿಂದ ಅಲ್ಲಿಗೆ ಹೋಗಿರಿ."

೪೭ ಅದರಂತೆ ನಾವು ಆ ನಗರಕ್ಕೆ ಹೋದೆವು. ಆ ವಿಪ್ರನ ಬಗೆಗೆ ನಾವು ವಿಚಾರಿಸಿದಾಗ "ವರ್ಷನೆಂಬ ಹೆಸರಿನ ಮೂರ್ಖವಿಪ್ರನೊಬ್ಬನು ಇಲ್ಲಿದ್ದಾನೆ" ಎಂದು ಜನರು ಹೇಳಿದರು.

೪೮ ಆಗ ನಮ್ಮ ಮನಸ್ಸು ಡೋಲಾಯಮಾನವಾಯಿತು. ಅನಂತರ ಹೀನಸ್ಥಿತಿಯಲ್ಲಿದ್ದ ವರ್ಷನ ಮನೆಯನ್ನು ನಾವಿಬ್ಬರೂ ತಲುಪಿದೆವು.

೪೯. ಆ ಮನೆ ಇಲಿಗಳ ಬಿಲಗಳಿಂದ ಕೂಡಿದ್ದು ಗೆದ್ದಲಿನಿಂದ ಆವೃತವಾಗಿತ್ತು. ಗೋಡೆಗಳಲ್ಲಿ ಬಿರುಕುಗಳಿದ್ದು ಶಿಥಿಲವಾಗಿತ್ತು. ಅಲ್ಲಲ್ಲಿ ಸೂರು ಹಾರಿಹೋಗಿದ್ದ ಕಾರಣ ನೆರಳೇ ಇರಲಿಲ್ಲ. ಅದು ವಿಪತ್ತುಗಳ ತವರುಮನೆಯಂತಿತ್ತು.

೫೦. ಆ ಮನೆಯೊಳಗೆ ವರ್ಷನೆಂಬ ವಿಪ್ರನು ಧ್ಯಾನಮಗ್ನನಾಗಿದ್ದುದನ್ನು ನೋಡಿ ನಾವು ಆತನ ಪತ್ನಿಯ ಬಳಿಗೆ ಹೋದೆವು. ಆಕೆ ನಮಗೆ ಅತಿಥಿಸತ್ಕಾರವನ್ನು ಮಾಡಿದಳು.

---

ತಪಃಸ್ಥಿತೌ ಚ ತತ್ರಾವಾಂ ಸ ಸ್ವಪ್ನೇ ಪ್ರಭುರಾದಿಶತ್ ।
ಅಸ್ತಿ ಪಾಟಲಿಕಂ ನಾಮ ಪುರಂ ನಂದಸ್ಯ ಭೂಪತೇಃ ॥ ೪೫
ತತ್ರಾಸ್ತಿ ಚೈಕೋ ವರ್ಷಾಖ್ಯೋ ವಿಪ್ರಸ್ತಸ್ಮಾದವಾಪ್ಸ್ಯಥಃ ।
ಕೃತ್ಸ್ನಾಂ ವಿದ್ಯಾಮತಸ್ತತ್ರ ಯುವಾಭ್ಯಾಂ ಗಮ್ಯತಾಮಿತಿ ॥ ೪೬
ಅಥಾವಾಂ ತತ್ಪುರಂ ಯಾತೌ ಪೃಚ್ಛತೋಸ್ತತ್ರ ಚಾವಯೋಃ ।
ಅಸ್ತೀಹ ಮೂರ್ಖೋ ವರ್ಷಾಖ್ಯೋ ವಿಪ್ರ ಇತ್ಯವದಜ್ಜನಃ ॥ ೪೭
ತತೋ ದೋಲಾಧಿರೂಢೇನ ಗತ್ವಾ ಚಿತ್ತೇನ ತತ್ಕ್ಷಣಮ್ ।
ಗೃಹಮಾವಾಮಪಶ್ಯಾವ ವರ್ಷಸ್ಯ ವಿಧುರಸ್ಥಿತಿ ॥ ೪೮
ಮೂಷಕೈಃ ಕೃತವಲ್ಮೀಕಂ ಭಿತ್ತಿವಿಶ್ಲೇಷಜರ್ಜರಮ್ ।
ವಿಚ್ಛಾಯಂ ಛದಿಷಾ ಹೀನಂ ಜನ್ಮಕ್ಷೇತ್ರಮಿವಾಪದಾಮ್ ॥ ೪೯
ತತ್ರ ಧ್ಯಾನಸ್ಥಿತಂ ವರ್ಷಮಾಲೋಕ್ಯಾಭ್ಯಂತರೇ ತದಾ ।
ಉಪಾಗತೌ ಸ್ತಸ್ತತ್ಪತ್ನೀಂ ವಿಹಿತಾತಿಥ್ಯಸತ್ಕ್ರಿಯಾಮ್ ॥ ೫೦

೫೧. ಆಕೆಯ ಶರೀರವು ಕೃಶವಾಗಿತ್ತು. ಧೂಳಿನಿಂದ ಮುಚ್ಚಿತ್ತು. ಆಕೆಯ ಬಟ್ಟೆ ಹರಿದು ಹೋಗಿದ್ದುದಲ್ಲದೆ ಕೊಳೆಯಾಗಿತ್ತು. ವರ್ಷವಿಪ್ರನ ಗುಣಗಳನ್ನು ಮೆಚ್ಚಿ ಅವನನ್ನೇ ಆಶ್ರಯಿಸಲು ಶರೀರವನ್ನು ಧರಿಸಿ ಬಂದ ದುರ್ಗತಿಯಂತೆ ಆಕೆ ಕಾಣಿಸಿದಳು.

೫೨. ಆಕೆಗೆ ನಮಸ್ಕರಿಸಿ ನಾವು ನಮ್ಮ ವೃತ್ತಾಂತವೆಲ್ಲವನ್ನೂ ಹೇಳಿದೆವು. ಆಕೆಯ ಪತಿಯ ಮೂರ್ಖತ್ವದ ಬಗೆಗೆ ನಾವು ಕೇಳಿದ್ದ ವಾರ್ತೆಯನ್ನೂ ನಿವೇದಿಸಿದೆವು.

೫೩. "ನೀವಿಬ್ಬರೂ ನನ್ನ ಮಕ್ಕಳಂತೆ. ನಾಚಿಕೆಗೆ ಕಾರಣವೇನಿದೆ ? ಹೇಳುತ್ತೇನೆ, ಕೇಳಿರಿ' ಎಂದು ಆ ಪತಿವ್ರತೆಯು ನಮಗೆ ತಮ್ಮ ಕಥೆಯನ್ನು ವರ್ಣಿಸಿದಳು.

## ವರ್ಷೋಪಾಧ್ಯಾಯನ ಕಥೆ

೫೪. ಈ ಊರಿನಲ್ಲಿ ಶಂಕರಸ್ವಾಮಿ ಎಂಬ ಶ್ರೇಷ್ಠ ಬ್ರಾಹ್ಮಣನಿದ್ದನು. ನನ್ನ ಪತಿ ವರ್ಷನೂ, ಉಪವರ್ಷನೂ ಆತನ ಇಬ್ಬರು ಮಕ್ಕಳು.

೫೫. ನನ್ನ ಪತಿ ಮೂರ್ಖ ಹಾಗೂ ದರಿದ್ರ. ಅವನ ತಮ್ಮ ಉಪವರ್ಷನು ತದ್ವಿರುದ್ಧ. ಅವನು ತನ್ನ ಪತ್ನಿಯನ್ನು ಈತನ ಗೃಹಪೋಷಣೆಗಾಗಿ ನಿಯೋಜಿಸಿದ್ದನು.

---

ಧೂಸರಕ್ಷಾಮವಪುಷಂ ವಿಶೀರ್ಣಮಲಿನಾಂಬರಾಮ್ ।
ಗುಣರಾಗಾಗತಾಂ ತಸ್ಯ ರೂಪಿಣೀಮಿವ ದುರ್ಗತಿಮ್ ॥ ೫೧
ಪ್ರಣಾಮಪೂರ್ವಮಾವಾಭ್ಯಾಂ ತಸ್ಯೈ ಸೋಽಥ ನಿವೇದಿತಃ ।
ಸ್ವವೃತ್ತಾಂತಶ್ಚ ತದ್ಭರ್ತೃಮೌರ್ಖ್ಯವಾರ್ತಾ ಚ ಯಾ ಶ್ರುತಾ ॥ ೫೨
ಪುತ್ರೌ ಯುವಾಂ ಮೇ ಕಾ ಲಜ್ಜಾ ಶ್ರೂಯತಾಂ ಕಥಯಾಮಿ ವಾಮ್ ।
ಇತ್ಯುಕ್ತ್ವಾ ಸಾವಯೋಃ ಸಾಧ್ವೀ ಕಥಾಮೇತಾಮವರ್ಣಯತ್ ॥ ೫೩
ಶಂಕರಸ್ವಾಮಿನಾಮಾತ್ರ ನಗರೇಽಭೂದ್ ದ್ವಿಜೋತ್ತಮಃ ।
ಮದ್ಭರ್ತಾ ಚೋಪವರ್ಷಶ್ಚ ತಸ್ಯ ಪುತ್ರಾವಿಮಾವುಭೌ ॥ ೫೪
ಅಯಂ ಮೂರ್ಖೋ ದರಿದ್ರಶ್ಚ ವಿಪರೀತೋಽಸ್ಯ ಚಾನುಜಃ ।
ತೇನ ಚಾಸ್ಯ ನಿಯುಕ್ತಾಭೂತ್ ಸ್ವಭಾರ್ಯಾ ಗೃಹರಕ್ಷಣೇ ॥ ೫೫

೫೬–೫೮ ಒಮ್ಮೆ ಇಲ್ಲಿ ಮಳೆಗಾಲ ಬಂದಿತು. ಆ ಸಮಯದಲ್ಲಿ ಹೆಂಗಸರು ಬೆಲ್ಲವನ್ನೂ ಹಿಟ್ಟನ್ನೂ ಕಲೆಸಿ ಅದರಿಂದ ಜನನಾಂಗದ ಅಸಹ್ಯ ರೂಪವನ್ನು ರಚಿಸಿ ಅದನ್ನು ಯಾವನಾದರೊಬ್ಬ ಮೂರ್ಖಬ್ರಾಹ್ಮಣನಿಗೆ ದಾನ ಮಾಡುತ್ತಾರೆ. ಹೀಗೆ ಮಾಡಿದರೆ ಅವರಿಗೆ ಚಳಿಗಾಲದಲ್ಲೂ ಬೇಸಗೆಯಲ್ಲೂ ಸ್ನಾನದಿಂದ ಉಂಟಾಗುವ ಕ್ಲೇಶ, ಶ್ರಮಗಳು ಆಗುವುದಿಲ್ಲ ಎಂಬ ಕುತ್ಸಿತವಾದ ಸಂಪ್ರದಾಯವಿದೆ. ಅಂಥ ಗುಹ್ಯಾಕಾರದ ಪ್ರತಿಮೆಯನ್ನು ನನ್ನ ಮೈದುನನ ಹೆಂಡತಿ ನನ್ನ ಪತಿಗೆ ದಕ್ಷಿಣೆ ಸಹಿತ ದಾನ ಮಾಡಿದಳು.

೫೯. ನನ್ನ ಗಂಡನು ಅದನ್ನು ತೆಗೆದುಕೊಂಡು ಬಂದಾಗ ನಾನು ಅವನನ್ನು ಚೆನ್ನಾಗಿ ಹೀಯಾಳಿಸಿದೆನು. ತನ್ನ ಮೂರ್ಖತ್ವದಿಂದ ಉಂಟಾದ ಒಳಗಿನ ಕೋಪದಿಂದ ಅವನು ಪರಿತಪಿಸಿದನು.

೬೦. ಅನಂತರ ವರ್ಷವಿಪ್ರನು ಕುಮಾರಸ್ವಾಮಿಯ ಪಾದಗಳನ್ನು ಆಶ್ರಯಿಸಿದನು. ತಪಸ್ಸಿನಿಂದ ಸಂತುಷ್ಟನಾದ ಕುಮಾರಸ್ವಾಮಿಯು ಅವನಿಗೆ ಸಮಸ್ತ ವಿದ್ಯೆಗಳನ್ನೂ ಅನುಗ್ರಹಿಸಿದನು.

೬೧. ಏಕಶ್ರುತಧರನಾದ ವಿಪ್ರನು ದೊರಕಿದಾಗ ಈ ವಿದ್ಯೆಗಳನ್ನು ಪ್ರಕಾಶಪಡಿಸು ಎಂದು ಕುಮಾರಸ್ವಾಮಿಯು ಆಜ್ಞೆ ಮಾಡಿದನು. ಅನಂತರ ವರ್ಷನು ಮನೆಗೆ ಹಿಂದಿರುಗಿದನು.

---

ಕದಾಚಿದಥ ಸಂಪ್ರಾಪ್ತಾ ಪ್ರಾವೃಟ್ ತಸ್ಯಾಂ ಚ ಯೋಷಿತಃ ।
ಸಗುಡಂ ಪಿಷ್ಟರಚಿತಂ ಗುಹ್ಯರೂಪಂ ಜುಗುಪ್ಸಿತಮ್ ॥ ೫೬
ಕೃತ್ವಾ ಮೂರ್ಖಾಯ ವಿಪ್ರಾಯ ದದತ್ಯೇವಂ ಕೃತೇ ಹಿ ತಾಃ ।
ಶೀತಕಾಲೇ ನಿದಾಘೇ ಚ ಸ್ನಾನಕ್ಲೇಶಕ್ಷಮಾಪಹಮ್ ॥ ೫೭
ದತ್ತಂ ನ ಪ್ರತಿಪದ್ಯಂತ ಇತ್ಯಾಚಾರೋ ಹಿ ಕುತ್ಸಿತಃ ।
ತದ್ದೇವರಗೃಹಿಣ್ಯಾ ಮೇ ದತ್ತಮಸ್ಮೈ ಸದಕ್ಷಿಣಮ್ ॥ ೫೮
ತದ್ ಗೃಹೀತ್ವಾಯಮಾಯಾತೋ ಮಯಾ ನಿರ್ಭರ್ತ್ಸಿತೋ ಭೃಶಮ್ ।
ಮೂರ್ಖಭಾವಕೃತೇನಾಂತರ್ಮನ್ಯುನಾ ಪರ್ಯತಪ್ಯತ ॥ ೫೯
ತತಃ ಸ್ವಾಮಿಕುಮಾರಸ್ಯ ಪಾದಮೂಲಂ ಗತೋಽಭವತ್ ।
ತಪಸ್ತುಷ್ಟೇನ ತೇನಾಸ್ಯ ಸರ್ವಾ ವಿದ್ಯಾಃ ಪ್ರಕಾಶಿತಾಃ ॥ ೬೦
ಸಕೃಚ್ಛ್ರುತಧರಂ ವಿಪ್ರಂ ಪ್ರಾಪ್ಯೈತಾಸ್ತ್ವಂ ಪ್ರಕಾಶಯೇಃ ।
ಇತ್ಯಾದಿಷ್ಟಃ ಸ ತೇನೈವ ಸಹರ್ಷೋಽಯಮಿಹಾಗತಃ ॥ ೬೧

೬೨. ಹಿಂದಿರುಗಿ ಬಂದು ಎಲ್ಲ ವೃತ್ತಾಂತವನ್ನೂ ನನಗೆ ತಿಳಿಸಿದನು. ಆಗಿನಿಂದ ಸತತವಾಗಿ ಜಪವನ್ನೂ ಧ್ಯಾನವನ್ನೂ ಮಾಡುತ್ತಿರುತ್ತಾನೆ.

೬೩. ಆದ್ದರಿಂದ ನೀವಿಬ್ಬರೂ ಎಲ್ಲಾದರೂ ಹುಡುಕಿ ಏಕಶ್ರುತಧರನನ್ನು ಕರೆದು ತನ್ನಿರಿ. ಇದರಿಂದ ನಿಮಗೆ ಎಲ್ಲ ಇಷ್ಟಾರ್ಥಗಳೂ ಸಿದ್ಧಿಸುವುದರಲ್ಲಿ ಸಂಶಯವಿಲ್ಲ.

೬೪. ವರ್ಷನ ಪತ್ನಿಯಿಂದ ಇದನ್ನು ಕೇಳಿ ಕೂಡಲೇ ಅವರ ಬಡತನ ಹೋಗಲೆಂದು ನೂರು ಚಿನ್ನದ ನಾಣ್ಯಗಳನ್ನು ಕೊಟ್ಟು ಆ ಪಟ್ಟಣದಿಂದ ನಾವು ಹೊರಟೆವು.

೬೫. ಆಮೇಲೆ ನಾವಿಬ್ಬರೂ ಭೂಮಿಯನ್ನೆಲ್ಲ ಅಲೆದರೂ ಏಕಶ್ರುತಧರನು ನಮಗೆ ಸಿಗಲೇ ಇಲ್ಲ. ಬಳಲಿದ ನಾವು ನಿನ್ನ ಮನೆಗೆ ಬಂದೆವು.

೬೬. ಇಲ್ಲಿ ಏಕಶ್ರುತಧರನಾದ ನಿನ್ನ ಮಗ ಸಿಕ್ಕಿದ್ದಾನೆ. ದಯೆಯಿಟ್ಟು ಇವನನ್ನು ಕೊಡು. ವಿದ್ಯೆಯೆಂಬ ಸಂಪತ್ತನ್ನು ಪಡೆದುಕೊಳ್ಳಲು ನಾವಿಬ್ಬರೂ ತೆರಳುತ್ತೇವೆ".

೬೭. ವ್ಯಾಡಿಯ ಈ ಮಾತುಗಳನ್ನು ಕೇಳಿ ನನ್ನ ತಾಯಿಯು ಆದರಪೂರ್ವಕವಾಗಿ ಇಂತೆಂದಳು. " "ನೀವು ಹೇಳಿದುದು ಸರಿಯಾಗಿದೆ. ನನಗೆ ಇದರಲ್ಲಿ ನಂಬಿಕೆಯಿದೆ.

೬೮. ಏಕೆಂದರೆ ನನ್ನ ಈ ಏಕಮಾತ್ರಪುತ್ರನು ಹುಟ್ಟಿದಾಗ ಆಕಾಶದಿಂದ ಸ್ಫುಟವಾಗಿ ಅಶರೀರವಾಣಿಯು ಕೇಳಿಸಿತ್ತು.

---

ಆಗತ್ಯೈವ ಚ ವೃತ್ತಾಂತಂ ಸರ್ವಂ ಮಹ್ಯಂ ನ್ಯವೇದಯತ್ ।
ತದಾ ಪ್ರಭೃತ್ಯವಿರತಂ ಜಪನ್ ಧ್ಯಾಯಂಶ್ಚ ತಿಷ್ಠತಿ ॥ ೬೨

ಅತಃ ಶ್ರುತಧರಂ ಕಂಚಿದನ್ವಿಷ್ಯಾನಯತಂ ಯುವಾಮ್ ।
ತೇನ ಸರ್ವಾರ್ಥಸಿದ್ಧಿರ್ವಾಂ ಭವಿಷ್ಯತಿ ನ ಸಂಶಯಃ ॥ ೬೩

ಶ್ರುತ್ವೈತದ್ವರ್ಷಪತ್ನೀತಃ ತೂರ್ಣಂ ದೌರ್ಗತ್ಯಹಾನಯೇ ।
ದತ್ವಾ ಹೇಮಶತಂ ಚಾಸ್ಯೈ ನಿರ್ಗತೌ ಸ್ವಸ್ತತಃ ಪುರಾತ್ ॥ ೬೪

ಅಥಾವಾಂ ಪೃಥಿವೀಂ ಭ್ರಾಂತೌ ನ ಚ ಶ್ರುತಧರಂ ಕ್ವಚಿತ್ ।
ಲಬ್ಧವಂತೌ ತತಃ ಶ್ರಾಂತೌ ಪ್ರಾಪ್ತಾವದ್ಯ ಗೃಹಂ ತವ ॥ ೬೫

ಏಕಶ್ರುತಧರಃ ಪ್ರಾಪ್ತೋ ಬಾಲೋಽಯಂ ತನಯಸ್ತವ ।
ತದೇನಂ ದೇಹಿ ಗಚ್ಛಾವೋ ವಿದ್ಯಾದ್ರವಿಣಸಿದ್ಧಯೇ ॥ ೬೬

ಇತಿ ವ್ಯಾಡಿವಚಃ ಶ್ರುತ್ವಾ ಮನ್ಮಾತಾ ಸಾದರಾವದತ್ ।
ಸರ್ವಂ ಸಂಗತಮೇವೈತದಸ್ತ್ಯತ್ರ ಪ್ರತ್ಯಯೋ ಮಮ ॥ ೬೭

ತಥಾ ಹಿ ಪೂರ್ವಂ ಜಾತೇಽಸ್ಮಿನ್ ಏಕಪುತ್ರೇ ಮಮ ಸ್ಫುಟಾ ।
ಗಗನಾದೇವಮುದಭೂತ್ ಅಶರೀರಾ ಸರಸ್ವತೀ ॥ ೬೮

೧೯. "ಈಗ ಹುಟ್ಟಿರುವ ಶ್ರುತಧರನು ವರ್ಷನಿಂದ ವಿದ್ಯೆಯನ್ನು ಕಲಿಯುವನು. ಅಲ್ಲದೆ ಜಗತ್ತಿನಲ್ಲಿ ವ್ಯಾಕರಣವನ್ನು ಇವನು ಸ್ಥಿರಗೊಳಿಸುವನು.

೨೦. ಇವನ ಹೆಸರು ವರರುಚಿ. ಯಾವುದು ಯಾವುದು ವರ (ಉತ್ತಮ)ವೋ ಅದೆಲ್ಲ ಇವನಿಗೆ ರುಚಿಸುತ್ತದೆ." ಇಷ್ಟು ಹೇಳಿ ಅಶರೀರವಾಣಿಯು ನಿಂತಿತು.

೨೧. ಆದ್ದರಿಂದ ಈ ಹುಡುಗನು ದೊಡ್ಡವನಾಗುತ್ತಿದ್ದಂತೆ ನಾನು ಹಗಲಿರುಳೂ 'ಆ ವರ್ಷೋಪಾಧ್ಯಾಯನು ಎಲ್ಲಿದ್ದಾನೆ ?' ಎಂದು ಚಿಂತಿಸುತ್ತಿದ್ದೆ.

೨೨. ಇಂದು ನಿಮ್ಮ ಮುಖದಿಂದ ವರ್ಷೋಪಾಧ್ಯಾಯನ ಬಗೆಗೆ ತಿಳಿದು ನನಗೆ ಅಪಾರ ಸಂತೋಷವಾಗಿದೆ. ಇವನನ್ನು ಕರೆದೊಯ್ಯಿರಿ. ನಿಮ್ಮಿಬ್ಬರಿಗೂ ಇವನು ತಮ್ಮನು. ನಷ್ಟವೇನಿದೆ ?"

೨೩. ನನ್ನ ತಾಯಿಯ ಈ ಮಾತನ್ನು ಕೇಳಿ ವ್ಯಾಡಿ ಇಂದ್ರದತ್ತರಿಬ್ಬರೂ ಹರ್ಷದಿಂದ ಹಿಗ್ಗಿ ಆ ರಾತ್ರಿಯನ್ನು ಕ್ಷಣದಂತೆ ಕಳೆದರು.

೨೪. ನನಗೆ ವೇದವನ್ನು ಕಲಿಯುವ ಅರ್ಹತೆ ಉಂಟಾಗಲೆಂದು ವ್ಯಾಡಿಯು ನನ್ನ ತಾಯಿಗೆ ಸಮಾರಂಭಕ್ಕಾಗಿ ಹಣವನ್ನು ಕೊಟ್ಟು ತಾನೇ ನನ್ನ ಉಪನಯನವನ್ನು ನೆರವೇರಿಸಿದನು.

---

ಏಷ ಶ್ರುತಧರೋ ಜಾತೋ ವಿದ್ಯಾಂ ವರ್ಷಾದವಾಪ್ಸ್ಯತಿ ।
ಕಿಂಚ ವ್ಯಾಕರಣಂ ಲೋಕೇ ಪ್ರತಿಷ್ಠಾಂ ಪ್ರಾಪಯಿಷ್ಯತಿ ॥ ೧೯
ನಾಮ್ನಾ ವರರುಚಿಶ್ಚಾಯಂ ತತ್ತದಸ್ಮೈ ಹಿ ರೋಚತೇ ।
ಯದ್ಯದ್ವರಂ ಭವೇತ್ ಕಿಂಚಿದಿತ್ಯುಕ್ತ್ವಾ ವಾಗುಪಾರಮತ್ ॥ ೨೦
ಅತ ಏವ ವಿವೃದ್ಧೇಽಸ್ಮಿನ್ ಬಾಲಕೇ ಚಿಂತಯಾಮ್ಯಹಮ್ ।
ಕ್ವ ಸ ವರ್ಷ ಉಪಾಧ್ಯಾಯೋ ಭವೇದಿತಿ ದಿವಾನಿಶಮ್ ॥ ೨೧
ಅದ್ಯ ಯುಷ್ಮನ್ಮುಖಾಜ್ಜ್ಞಾತ್ವಾ ಪರಿತೋಷಶ್ಚ ಮೇ ಪರಃ ।
ತದೇನಂ ನಯತಂ ಭ್ರಾತಾ ಯುವಯೋರೇಷ ಕಾ ಕ್ಷತಿಃ ॥ ೨೨
ಇತಿ ಮನ್ಮಾತೃವಚನಂ ಶ್ರುತ್ವಾ ತೌ ಹರ್ಷನಿರ್ಭರೌ ।
ವ್ಯಾಡೀಂದ್ರದತ್ತೌ ತಾಂ ರಾತ್ರಿಮಬುಧ್ಯೇತಾಂ ಕ್ಷಣೋಪಮಾಮ್ ॥ ೨೩
ಅಥೋತ್ಸವಾರ್ಥಮಂಬಾಯಾಃ ತೂರ್ಣಂ ದತ್ತ್ವಾ ನಿಜಂ ಧನಮ್ ।
ವ್ಯಾಡಿನೈವೋಪನೀತೋಽಹಂ ವೇದಾರ್ಹತ್ವಂ ಮಮೇಚ್ಛತಾ ॥ ೨೪

೭೫–೭೬. ಆಮೇಲೆ ನನ್ನ ತಾಯಿ ಹೇಗೋ ಕಣ್ಣೀರನ್ನು ತಡೆದುಕೊಂಡು ಹೊರಡಲು ನನಗೆ ಅಪ್ಪಣೆ ನೀಡಿದಳು. ನನ್ನ ಉತ್ಸಾಹವು ಅವಳ ವ್ಯಥೆಯನ್ನೆಲ್ಲ ಶಮನಗೊಳಿಸಿತು. ಕುಮಾರನ ಅನುಗ್ರಹ ಪುಷ್ಪಿತವಾಯಿತು ಎಂದು ಭಾವಿಸಿದ ವ್ಯಾಡಿ, ಇಂದ್ರದತ್ತರು ಅಲ್ಲಿಂದ ಶೀಘ್ರವಾಗಿ ನನ್ನನ್ನು ಕರೆದುಕೊಂಡು ಹೊರಟರು.

೭೭. ಅನಂತರ ನಾವು ಸರಿದಾರಿಯಲ್ಲಿ ವರ್ಷಗುರುವಿನ ಮನೆಯನ್ನು ತಲುಪಿದೆವು. ಮೂರ್ತಿಮತ್ತಾಗಿ (ಶರೀರವನ್ನು ಧರಿಸಿ) ಬಂದ ಕುಮಾರಸ್ವಾಮಿಯ ಅನುಗ್ರಹವೇ ಇವನು ಎಂದು ಆತನೂ ನನ್ನನ್ನು ಭಾವಿಸಿದನು.

೭೮. ಮಾರನೆಯ ದಿನ ನಮ್ಮನ್ನು ಮುಂದೆ ಕೂಡಿಸಿಕೊಂಡು ತಾನೂ ಶುಚಿಯಾದ ಭೂಮಿಯಲ್ಲಿ ಕುಳಿತು ವರ್ಷೋಪಾಧ್ಯಾಯನು ದಿವ್ಯವಾದ ಧ್ವನಿಯಿಂದ ಓಂಕಾರವನ್ನು ಉಚ್ಚರಿಸಿದನು.

೭೯. ಆಗ ಅವನಿಗೆ ಅಂಗಸಹಿತವಾದ ಎಲ್ಲ ವೇದಗಳೂ ಉಪಸ್ಥಿತವಾದುವು. ಆಮೇಲೆ ಅವನು ಅವನ್ನು ನಮಗೆ ಕಲಿಸಲು ತೊಡಗಿದನು.

೮೦. ಗುರು ಹೇಳಿದುದನ್ನು ಒಂದು ಸಲ ಕೇಳಿ ನಾನು ಕಲಿತುಬಿಡುತ್ತಿದ್ದೆ. ಎರಡು ಸಲ ಕೇಳಿ ವ್ಯಾಡಿಯೂ ಮೂರು ಸಲ ಕೇಳಿ ಇಂದ್ರದತ್ತನೂ ಕಲಿಯುತ್ತಿದ್ದರು.

---

ತತೋ ಮಾತ್ರಾಭ್ಯನುಜ್ಞಾತಂ ಕಥಂಚಿದ್ ರುದ್ಧಬಾಷ್ಪಯಾ ।
ಮಾಮಾದಾಯ ನಿಜೋತ್ಸಾಹಶಮಿತಾಶೇಷತದ್ವ್ಯಥಮ್ ॥ ೭೫
ಮನ್ಯಮಾನೌ ಚ ಕೌಮಾರಂ ಪುಷ್ಪಿತಂ ತದನುಗ್ರಹಮ್ ।
ವ್ಯಾಡೀಂದ್ರದತ್ತೌ ತರಸಾ ನಗರ್ಯಾಃ ಪ್ರಸ್ಥಿತೌ ತತಃ ॥ ೭೬
ಅಥ ಕ್ರಮೇಣ ವರ್ಷಸ್ಯ ವಯಂ ಪ್ರಾಪ್ತಾ ಗೃಹಂ ಗುರೋಃ ।
ಸ್ಕಂದಪ್ರಸಾದಮಾಯಾಂತಂ ಮೂರ್ತಂ ಮಾಂ ಸೋಽಪ್ಯಮನ್ಯತ ॥ ೭೭
ಕೃತ್ವಾಸ್ಮಾನಗ್ರತೋಽನ್ಯೇದ್ಯುಃ ಉಪವಿಷ್ಟಃ ಶುಚೌ ಭುವಿ ।
ವರ್ಷೋಪಾಧ್ಯಾಯ ಓಂಕಾರಮ್ ಅಕರೋದ್ ದಿವ್ಯಯಾ ಗಿರಾ ॥ ೭೮
ತದನಂತರಮೇವಾಸ್ಯ ವೇದಾಃ ಸಾಂಗಾ ಉಪಸ್ಥಿತಾಃ ।
ಅಧ್ಯಾಪಯಿತುಮಸ್ಮಾಂಶ್ಚ ಪ್ರವೃತ್ತೋಽಭೂದಸೌ ತತಃ ॥ ೭೯
ಸಕೃಚ್ಛ್ರುತಂ ಮಯಾ ತತ್ರ ದ್ವಿಃ ಶ್ರುತಂ ವ್ಯಾಡಿನಾ ತಥಾ ।
ತ್ರಿಃ ಶ್ರುತಂ ಚೇಂದ್ರದತ್ತೇನ ಗುರುಣೋಕ್ತಮಗೃಹ್ಯತ ॥ ೮೦

೮೧. ಆ ಅಪೂರ್ವವಾದ ವೇದಧ್ವನಿಯನ್ನು ಕೇಳಿ ಊರಿನ ವಿಪ್ರಸಮುದಾಯವು ಮನಸ್ಸಿನಲ್ಲಿ ಆಶ್ಚರ್ಯಪಟ್ಟು ಅದೇನೆಂದು ನೋಡುವ ಕುತೂಹಲದಿಂದ ಅಲ್ಲಿಗೆ ಬಂದು ನೋಡಿ ವರ್ಷೋಪಾಧ್ಯಾಯನನ್ನು ಅನೇಕವಿಧವಾದ ಸ್ತುತಿಗಳಿಂದ ಅಭಿನಂದಿಸಿ ಪೂಜಿಸಿತು.

೮೨. ಆ ರೀತಿಯಾದ ಆಶ್ಚರ್ಯವನ್ನು ಅಲ್ಲಿ ಕಂಡು ಕೇವಲ ಉಪವರ್ಷನೇ ಅಲ್ಲ, ಪಾಟಲಿಪುತ್ರನಗರದ ಸಮಸ್ತ ಪೌರಸಮುದಾಯವೂ ಆನಂದದಿಂದ ಮಹೋತ್ಸವವನ್ನು ಆಚರಿಸಿತು.

೮೩. ಸಂಪತ್ಸಮೃದ್ಧನಾಗಿದ್ದ ರಾಜ ನಂದನೂ ಶಿವಪುತ್ರ ಕುಮಾರಸ್ವಾಮಿಯ ವರಪ್ರಭಾವವನ್ನು ನೋಡಿ ಆನಂದಿಸಿದನು. ಕೂಡಲೇ ಆದರಪೂರ್ವಕವಾಗಿ ವರ್ಷೋಪಾಧ್ಯಾಯನ ಮನೆಯನ್ನು ಸಂಪತ್ತಿನಿಂದ ತುಂಬಿಸಿದನು.

ಮಹಾಕವಿ ಸೋಮದೇವಭಟ್ಟನು ರಚಿಸಿದ
ಕಥಾಸರಿತ್ಸಾಗರದ
ಕಥಾಪೀಠಲಂಬಕದ ಎರಡನೆಯ ತರಂಗ ಮುಗಿಯಿತು.

---

ಧ್ವನಿಮಥ ತಮಪೂರ್ವಂ ದಿವ್ಯಮಾಕರ್ಣ್ಯ ಸದ್ಯಃ
ಸಪದಿ ವಿಲಸದಂತರ್ವಿಸ್ಮಯೋ ವಿಪ್ರವರ್ಗಃ ।
ಕಿಮಿದಮಿತಿ ಸಮಂತಾದ್ ದ್ರಷ್ಟುಮಭ್ಯೇತ್ಯ ವರ್ಷಂ
ಸ್ತುತಿಮುಖರಮುಖಶ್ರೀರರ್ಚತಿ ಸ್ಮ ಪ್ರಣಾಮೈಃ ॥ ೮೧
ಕಿಮಿತಿ ತದವಲೋಕ್ಯ ತತ್ರ ಚಿತ್ರಂ
ಪ್ರಮುದವಶಾನ್ನ ಪರಂ ತದೋಪವರ್ಷಃ ।
ಅಪಿ ವಿತತಮಹೋತ್ಸವಃ ಸಮಗ್ರಃ
ಸಮಜನಿ ಪಾಟಲಿಪುತ್ರಪೌರಲೋಕಃ ॥ ೮೨
ರಾಜಾಪಿ ತಂ ಗಿರಿಶಸೂನುವರಪ್ರಭಾವಮ್
ಆಲೋಕ್ಯ ತಸ್ಯ ಪರಿತೋಷಮುಪೇತ್ಯ ನಂದಃ ।
ವರ್ಷಸ್ಯ ವೇಶ್ಮ ವಸುಭಿಃ ಸ ಕಿಲಾದರೇಣ
ತತ್ಕಾಲಮೇವ ಸಮಪೂರಯದುನ್ನತಶ್ರೀಃ ॥ ೮೩

ಇತಿ ಮಹಾಕವಿ ಶ್ರೀ ಸೋಮದೇವಭಟ್ಟವಿರಚಿತೇ
ಕಥಾಸರಿತ್ಸಾಗರೇ
ಕಥಾಪೀಠಲಂಬಕೇ ದ್ವಿತೀಯಸ್ತರಂಗಃ ।

# ಮೂರನೆಯ ತರಂಗ

೧ ಕಾಡಿನಲ್ಲಿ ಹೀಗೆ ವರರುಚಿಯು ಹೇಳುತ್ತಿದ್ದುದನ್ನು ಕಾಣಭೂತಿಯು ಏಕಾಗ್ರತೆಯಿಂದ ಕೇಳುತ್ತಿದ್ದಾಗ ಮತ್ತೆ ವರರುಚಿ ಹೀಗೆ ಹೇಳಿದನು.

೨. ಕಾಲ ಕಳೆಯುತ್ತಿತ್ತು, ಅಧ್ಯಯನವು ನಡೆಯುತ್ತಿತ್ತು. ಒಮ್ಮೆ ವರ್ಷೋಪಾಧ್ಯಾಯನು ಆಹ್ನಿಕವನ್ನು ಮುಗಿಸಿ ಬಂದಾಗ ನಾವು ಆತನನ್ನು ಕೇಳಿದೆವು.

೩ "ಉಪಾಧ್ಯಾಯರೇ, ಈ ನಗರವು ಸರಸ್ವತಿಗೂ ಲಕ್ಷ್ಮಿಗೂ ಸ್ಥಾನವಾದುದು ಹೇಗೆ ? (ಕೃಪೆಯಿಟ್ಟು) ಹೇಳೋಣವಾಗಲಿ."

## ಪಾಟಲಿಪುತ್ರನಗರದ ಕಥೆ

೪. ಆ ಮಾತನ್ನು ಕೇಳಿ ವರ್ಷೋಪಾಧ್ಯಾನು ಹೀಗೆ ಹೇಳಿದನು. 'ಅದರ ಕಥೆಯನ್ನು ಕೇಳಿರಿ. ಗಂಗಾದ್ವಾರದಲ್ಲಿ ಕನುಖಲ ಎಂಬ ಪವಿತ್ರ ತೀರ್ಥವಿದೆ.

೫ ಕಾಂಚನಪಾತ ಎಂಬ ದೇವಗಜವು ಉಶೀನರಗಿರಿ ಎಂಬ ಬೆಟ್ಟದ ತಪ್ಪಲನ್ನು ತನ್ನ ದಂತಗಳಿಂದ ಒಡೆದು ಹಾಕಿ ಅಲ್ಲಿ ಗಂಗೆ ಹರಿಯುವಂತೆ ಮಾಡಿತು.

೬ ಆ ಕನುಖಲಕ್ಷೇತ್ರದಲ್ಲಿ ದಕ್ಷಿಣದೇಶದ ಒಬ್ಬ ಬ್ರಾಹ್ಮಣನು ತನ್ನ ಪತ್ನಿಯೊಡನೆ ವಾಸಿಸುತ್ತಾ ತಪಸ್ಸು ಮಾಡುತ್ತಿದ್ದನು. ಅವನಿಗೆ ಮೂವರು ಗಂಡುಮಕ್ಕಳು ಹುಟ್ಟಿದರು.

---

ಏವಮುಕ್ತ್ವಾ ವರರುಚಿಃ ಶೃಣ್ವತ್ಯೇಕಾಗ್ರಮಾನಸೇ ।
ಕಾಣಭೂತೌ ವನೇ ತತ್ರ ಪುನರೇವೇದಮಬ್ರವೀತ್ ॥ ೧
ಕದಾಚಿದ್ ಯಾತಿ ಕಾಲೇಽಥ ಕೃತೇ ಸ್ವಾಧ್ಯಾಯಕರ್ಮಣಿ ।
ಇತಿ ವರ್ಷ ಉಪಾಧ್ಯಾಯಃ ಪೃಷ್ಟೋಽಸ್ಮಾಭಿಃ ಕೃತಾಹ್ನಿಕಃ ॥ ೨
ಇದಮೇವಂವಿಧಂ ಕಸ್ಮಾನ್ನಗರಂ ಕ್ಷೇತ್ರತಾಂ ಗತಮ್ ।
ಸರಸ್ವತ್ಯಾಶ್ಚ ಲಕ್ಷ್ಮ್ಯಾಶ್ಚ ತದುಪಾಧ್ಯಾಯ ಕಥ್ಯತಾಮ್ ॥ ೩
ತಚ್ಛ್ರುತ್ವಾ ಸೋಽಬ್ರವೀದಸ್ಮಾನ್ ಶೃಣುತೈತತ್ಕಥಾಮಿಮಾಮ್ ।
ತೀರ್ಥಂ ಕನುಖಲಂ ನಾಮ ಗಂಗಾದ್ವಾರೇಽಸ್ತಿ ಪಾವನಮ್ ॥ ೪
ಯತ್ರ ಕಾಂಚನಪಾತೇನ ಜಾಹ್ನವೀ ದೇವದಂತಿನಾ ।
ಉಶೀನರಗಿರಿಪ್ರಸ್ಥಾದ್ ಭಿತ್ತ್ವಾ ತಮವತಾರಿತಾ ॥ ೫
ದಾಕ್ಷಿಣಾತ್ಯೋ ದ್ವಿಜಃ ಕಶ್ಚಿತ್ ತಪಸ್ಯನ್ ಭಾರ್ಯಯಾ ಸಹ ।
ತತ್ರಾಸೀತ್ ತಸ್ಯ ಚಾತ್ರೈವ ಜಾಯಂತೇ ಸ್ಮ ತ್ರಯಃ ಸುತಾಃ ॥ ೬

೭ ಕಾಲಕ್ರಮದಲ್ಲಿ ಆ ಬ್ರಾಹ್ಮಣನೂ ಅವನ ಹೆಂಡತಿಯೂ ಸ್ವರ್ಗಸ್ಥರಾದರು. ಅವರ ಮಕ್ಕಳು ವಿದ್ಯೆಯನ್ನು ಕಲಿಯುವ ಆಸೆಯಿಂದ ರಾಜಗೃಹ ಎಂಬ ಊರಿಗೆ ಹೋದರು.

೮ ಅಲ್ಲಿ ವಿದ್ಯೆಯನ್ನು ಕಲಿತುಕೊಂಡರೂ ಅವರೆಲ್ಲ ತಾವು ಅನಾಥರೆಂದು ದುಃಖಪಡುತ್ತಿದ್ದರು. ಆದ್ದರಿಂದ ಕುಮಾರಸ್ವಾಮಿಯ ದರ್ಶನಕ್ಕಾಗಿ ಅವರು ದಕ್ಷಿಣಾಪಥ (ದಕ್ಷಿಣದೇಶ)ಕ್ಕೆ ಹೊರಟರು.

೯. ಅಲ್ಲಿ ಸಮುದ್ರತೀರದಲ್ಲಿದ್ದ ಚಿಂಚಿನೀ ಎಂಬ ನಗರಕ್ಕೆ ಹೋಗಿ ಭೋಜಿಕನೆಂಬ ಬ್ರಾಹ್ಮಣನ ಮನೆಯಲ್ಲಿ ತಂಗಿದರು.

೧೦. ಆ ಭೋಜಿಕನು ತನ್ನ ಮೂವರು ಹೆಣ್ಣು ಮಕ್ಕಳನ್ನು ಧನಸಹಿತವಾಗಿ ಅವರಿಗೆ ಮದುವೆ ಮಾಡಿಕೊಟ್ಟು, ಬೇರೆ ಮಕ್ಕಳಿರಲಿಲ್ಲವಾಗಿ ತಾನು ತಪಸ್ಸನ್ನಾಚರಿಸಲು ಗಂಗಾನದಿಯ ಕಡೆಗೆ ಹೊರಟು ಹೋದನು.

೧೧. ಅವರೆಲ್ಲರೂ ತಮ್ಮ ಮಾವನ ಮನೆಯಲ್ಲಿ ವಾಸಿಸುತ್ತಿರಲು ಒಮ್ಮೆ ಮಳೆ ಬರದೆ ಅತ್ಯಂತ ಉಗ್ರವಾದ ದುರ್ಭಿಕ್ಷ ಉಂಟಾಯಿತು.

೧೨. ಆಗ ಆ ಮೂವರೂ ಪತಿವ್ರತೆಯರಾಗಿದ್ದ ತಮ್ಮ ಹೆಂಡಂದಿರನ್ನು ಪರಿತ್ಯಜಿಸಿ ಹೊರಟು ಹೋದರು. ಬಾಂಧವ್ಯದ ಭಾವನೆಗಳು ಕ್ರೂರಜನರ ಹೃದಯವನ್ನು ಮುಟ್ಟುವುದಿಲ್ಲ.

---

ಕಾಲೇನ ಸ್ವರ್ಗತೇ ತಸ್ಮಿನ್ ಸಭಾರ್ಯೇ ತೇ ಚ ತತ್ಸುತಾಃ ।
ಸ್ಥಾನಂ ರಾಜಗೃಹಂ ನಾಮ ಜಗ್ಮುರ್ವಿದ್ಯಾರ್ಜನೇಚ್ಛಯಾ ॥ ೭
ತತ್ರ ಚಾಧೀತವಿದ್ಯಾಸ್ತೇ ತ್ರಯೋಽಪ್ಯಾನಾಥ್ಯದುಃಖಿತಾಃ ।
ಯಯುಃ ಸ್ವಾಮಿಕುಮಾರಸ್ಯ ದರ್ಶನೇ ದಕ್ಷಿಣಾಪಥಮ್ ॥ ೮
ತತ್ರ ತೇ ಚಿಂಚಿನೀಂ ನಾಮ ನಗರೀಮಂಬುಧೇಸ್ತಟೇ ।
ಗತ್ವಾ ಭೋಜಿಕಸಂಜ್ಞಸ್ಯ ವಿಪ್ರಸ್ಯ ನ್ಯವಸನ್ ಗೃಹೇ ॥ ೯
ಸ ಚ ಕನ್ಯಾ ನಿಜಾಸ್ತಿಸ್ರಸ್ತೇಭ್ಯೋ ದತ್ತ್ವಾ ಧನಾನಿ ಚ ।
ತಪಸೇಽನನ್ಯಸಂತಾನೋ ಗಂಗಾಂ ಯಾತಿ ಸ್ಮ ಭೋಜಿಕಃ ॥ ೧೦
ಅಥ ತೇಷಾಂ ನಿವಸತಾಂ ತತ್ರ ಶ್ವಶುರವೇಶ್ಮನಿ ।
ಅವಗ್ರಹಕೃತಸ್ತೀವ್ರೋ ದುರ್ಭಿಕ್ಷಃ ಸಮಜಾಯತ ॥ ೧೧
ತೇನ ಭಾರ್ಯಾಃ ಪರಿತ್ಯಜ್ಯ ಸಾಧ್ವೀಸ್ತಾಸ್ತೇ ತ್ರಯೋ ಯಯುಃ ।
ಸ್ಪೃಶಂತಿ ನ ನೃಶಂಸಾನಾಂ ಹೃದಯಂ ಬಂಧುಬುದ್ಧಯಃ ॥ ೧೨

೧೩. ಆ ಮೂವರು ಪತ್ನಿಯರಲ್ಲಿ ಮಧ್ಯದವಳು ಗರ್ಭಿಣಿಯಾಗಿದ್ದಳು. ಆದ್ದರಿಂದ ಅವರು ತಮ್ಮ ತಂದೆಯ ಮಿತ್ರನಾಗಿದ್ದ ಯಜ್ಞದತ್ತನೆಂಬುವನ ಮನೆಯಲ್ಲಿ ಆಶ್ರಯವನ್ನು ಪಡೆದರು.

೧೪. ಅಲ್ಲಿ ಕಷ್ಟಪಟ್ಟು ಜೀವಿಸುತ್ತಾ ಅವರು ತಮ್ಮ ಗಂಡಂದಿರನ್ನು ಧ್ಯಾನಿಸುತ್ತಾ ಕಾಲವನ್ನು ಕಳೆಯುತ್ತಿದ್ದರು. ಕುಲನಾರಿಯರು ಆಪತ್ತಿನಲ್ಲಾದರೂ ಪಾತಿವ್ರತ್ಯವನ್ನು ಬಿಡುವರೆ?

೧೫. ಕಾಲವು ಕಳೆಯಲು ಆ ಮೂವರಲ್ಲಿ ಮಧ್ಯದವಳು ಒಂದು ಗಂಡುಮಗುವನ್ನು ಹೆತ್ತಳು. ಆ ಮಗುವಿನಲ್ಲಿ ಮೂವರಿಗೂ ಒಬ್ಬರಿಗಿಂತ ಒಬ್ಬರಿಗೆ ಹೆಚ್ಚೆನ್ನುವಂತೆ ಪ್ರೀತಿಯು ಬೆಳೆಯಿತು.

೧೬. ಒಮ್ಮೆ ಆಕಾಶಮಾರ್ಗದಲ್ಲಿ ಪರಮೇಶ್ವರನು ಸಂಚರಿಸುತ್ತಿದ್ದಾಗ ಅವನ ಮಡಿಲಲ್ಲಿ ಕುಳಿತಿದ್ದ ಪಾರ್ವತಿಯು ಆ ಮಗುವನ್ನು ನೋಡಿ ದಯೆಯಿಂದ ಹೀಗೆಂದಳು.

೧೭. "ದೇವ, ನೋಡು. ಈ ಮಗುವಿನಲ್ಲಿ ಮೂವರು ಸ್ತ್ರೀಯರೂ ಪ್ರೀತಿಯನ್ನಿಟ್ಟು ಅವನು ತಮ್ಮನ್ನು ಕಾಪಾಡುವನೆಂದು ಆಶೆಯನ್ನಿಟ್ಟುಕೊಂಡಿದ್ದಾರೆ.

೧೮. ಆದ್ದರಿಂದ ಅವನು ಅವರನ್ನು ಕಾಪಾಡುವಂತಹವನಾಗುವಂತೆ ಮಾಡು"ಹೀಗೆ ತನ್ನ ಪ್ರಿಯಪತ್ನಿಯು ಹೇಳಿದಾಗ, ಸದಾ ವರಗಳನ್ನು ನೀಡುವ ಪರಮೇಶ್ವರನಿಂತೆಂದನು.

೧೯. '"ಇವನು ಹಿಂದೆ ತನ್ನ ಭಾರ್ಯೆಯೊಡನೆ ನನ್ನನ್ನು ಪೂಜಿಸಿದ್ದನು. ಅದರಿಂದ ಸುಖಪಡುವುದಕ್ಕಾಗಿಯೇ ಇವನು ಹುಟ್ಟಿದ್ದಾನೆ. ಇವನಿಗೆ ನನ್ನ ಅನುಗ್ರಹವಿದೆ.

---

ತತಸ್ತು ಮಧ್ಯಮಾ ತಾಸಾಂ ಸಗರ್ಭಾಭೂತ್ ತತಶ್ಚ ತಾಃ ।
ಭವನಂ ಯಜ್ಞದತ್ತಸ್ಯ ಪಿತೃಮಿತ್ರಸ್ಯ ಶಿಶ್ರಿಯುಃ ॥ ೧೩

ತತ್ರ ತಸ್ಥುರ್ನಿಜಾನ್ ಭರ್ತೄನ್ ಧ್ಯಾಯಂತ್ಯಃ ಕ್ಲಿಷ್ಟವೃತ್ತಯಃ ।
ಆಪದ್ಯಪಿ ಸತೀವೃತ್ತಂ ಕಿಂ ಮುಂಚಂತಿ ಕುಲಸ್ತ್ರಿಯಃ ॥ ೧೪

ಕಾಲೇನ ಮಧ್ಯಮಾ ಚಾತ್ರ ತಾಸಾಂ ಪುತ್ರಮಸೂತ ಸಾ ।
ಅನ್ಯೋನ್ಯಾತಿಶಯಾತ್ ತಸ್ಮಿನ್ ಸ್ನೇಹಶ್ಚಾಸಾಮವರ್ಧತ ॥ ೧೫

ಕದಾಚಿದ್ ವ್ಯೋಮಮಾರ್ಗೇಣ ವಿಹರಂತಂ ಮಹೇಶ್ವರಮ್ ।
ಅಂಕಸ್ಥಾ ಸ್ಕಂದಜನನೀ ತಂ ದೃಷ್ಟ್ವಾ ಸದಯಾವದತ್ ॥ ೧೬

ದೇವ ಪಶ್ಯ ಶಿಶಾವಸ್ಮಿನ್ ಏತಾಸ್ತಿಸ್ರೋऽಪಿ ಯೋಷಿತಃ ।
ಬದ್ಧಸ್ನೇಹಾ ದಧತ್ಯಾಶಾಮ್ ಏಷೋऽಸ್ಮಾನ್ ಜೀವಯೇದಿತಿ ॥ ೧೭

ತತ್ತಥಾ ಕುರು ಯೇನಾಯಮ್ ಏತಾ ಬಾಲೋऽಪಿ ಜೀವಯೇತ್ ।
ಇತ್ಯುಕ್ತಃ ಪ್ರಿಯಯಾ ದೇವೋ ವರದಃ ಸ ಜಗಾದ ತಾಮ್ ॥ ೧೮

ಅನುಗೃಹ್ಣಾಮ್ಯಮುಂ ಪೂರ್ವಂ ಸಭಾರ್ಯೇಣಾಮುನಾ ಯತಃ ।
ಆರಾಧಿತೋऽಸ್ಮಿ ತೇನಾಯಂ ಭೋಗಾರ್ಥಂ ನಿರ್ಮಿತೋ ಭುವಿ ॥ ೧೯

೨೦. ಇವನ ಹೆಂಡತಿಯೂ ಈಗ ಮಹೇಂದ್ರವರ್ಮನ ಮಗಳಾಗಿ ಪಾಟಲೀ ಎಂಬ ಹೆಸರಿನಿಂದ ಹುಟ್ಟಿದ್ದಾಳೆ. ಅವಳು ಮತ್ತೆ ಇವನ ಹೆಂಡತಿಯೇ ಆಗುವಳು."

೨೧. ಇಷ್ಟು ಹೇಳಿದ ಮೇಲೆ ಪರಮೇಶ್ವರನು ಆ ಮೂವರು ಪತಿವ್ರತೆಯರಿಗೂ ಕನಸಿನಲ್ಲಿ ಕಾಣಿಸಿಕೊಂಡು ಹೀಗೆ ಹೇಳಿದನು— "ನಿಮ್ಮ ಈ ಪುಟ್ಟ ಮಗುವಿನ ಹೆಸರು 'ಪುತ್ರಕ' ಎಂದೇ ಇರಲಿ.

೨೨. ಇವನು ಪ್ರತಿದಿನವೂ ಮಲಗಿ ಏಳುವಷ್ಟರಲ್ಲಿ ಇವನ ತಲೆಯ ಬಳಿ ಲಕ್ಷ ಹೊನ್ನು ಕಂಡುಬರುವುದು ಮತ್ತು ಇವನು ದೊರೆಯಾಗುವನು"

೨೩. ಆ ಮಗು ನಿದ್ದೆ ಮಾಡಿ ಎದ್ದಾಗ ಆ ಸಾಧ್ವಿಯರಿಗೆ ಹೊನ್ನು ಸಿಕ್ಕಿತು. ಯಜ್ಞದತ್ತನ ಮಕ್ಕಳಾದ ಆ ಸಾಧ್ವಿಯರು ತಮ್ಮ ವ್ರತ ಫಲಿಸಿತೆಂದು ಆನಂದಿಸಿದರು.

೨೪. ಆ ಹೊನ್ನಿನಿಂದ ಪುತ್ರಕನ ಧನಕೋಷವು ಬೇಗನೆ ಬೆಳೆಯಿತು. ಅವನು ರಾಜನೂ ಆದನು. ಎಲ್ಲ ಸಂಪತ್ತೂ ತಪಸ್ಸಿಗೆ ಅಧೀನ.

೨೫. ಒಮ್ಮೆ ಯಜ್ಞದತ್ತನು ಪುತ್ರಕನನ್ನು ಕುರಿತು ಹೇಳಿದನು. 'ರಾಜನ್, ದುರ್ಭಿಕ್ಷದ ಕಾರಣದಿಂದ ನಿನ್ನ ತಂದೆಯಂದಿರು ಎಲ್ಲೋ ಹೊರಟುಹೋದರು.

೨೬. ಆದ್ದರಿಂದ ನೀನು ಸದಾ ಬ್ರಾಹ್ಮಣರಿಗೆ ದಾನ ಮಾಡುತ್ತಿರು. ಅದರ ಬಗೆಗೆ ಕೇಳಿ ಅವರೂ ಬರಬಹುದು. ಈ ಸಂಬಂಧದಲ್ಲಿ ಬ್ರಹ್ಮದತ್ತನ ಕಥೆಯೊಂದನ್ನು ಹೇಳುವೆನು, ಕೇಳು.

---

ಏತಜ್ಜಾಯಾ ಚ ಸಾ ಜಾತಾ ಪಾಟಲೀ ನಾಮ ಭೂಪತೇಃ ।
ಮಹೇಂದ್ರವರ್ಮಣಃ ಪುತ್ರೀ ಭಾರ್ಯಾಸ್ಯೈವ ಭವಿಷ್ಯತಿ ॥ ೨೦
ಇತ್ಯುಕ್ತ್ವಾ ಸ ವಿಭುಃ ಸ್ವಪ್ನೇ ಸಾಧ್ವೀಸ್ತಿಸ್ರೋ ಜಗಾದ ತಾಃ ।
ನಾಮ್ನಾ ಪುತ್ರಕ ಏವಾಯಂ ಯುಷ್ಮಾಕಂ ಬಾಲಪುತ್ರಕಃ ॥ ೨೧
ಅಸ್ಯ ಸುಪ್ತಪ್ರಬುದ್ಧಸ್ಯ ಶೀರ್ಷಾಂತೇ ಚ ದಿನೇ ದಿನೇ ।
ಸುವರ್ಣಲಕ್ಷಂ ಭವಿತಾ ರಾಜಾ ಚಾಯಂ ಭವಿಷ್ಯತಿ ॥ ೨೨
ತತಃ ಸುಪ್ತೋತ್ಥಿತೇ ತಸ್ಮಿನ್ ಬಾಲೇ ತಾಃ ಪ್ರಾಪ್ಯ ಕಾಂಚನಮ್ ।
ಯಜ್ಞದತ್ತಸುತಾಃ ಸಾಧ್ವ್ಯೋ ನನಂದುಃ ಫಲಿತವ್ರತಾಃ ॥ ೨೩
ಅಥ ತೇನ ಸುವರ್ಣೇನ ವೃದ್ಧಕೋಶೋಽಚಿರೇಣ ಸಃ ।
ಬಭೂವ ಪುತ್ರಕೋ ರಾಜಾ ತಪೋಽಧೀನಾ ಹಿ ಸಂಪದಃ ॥ ೨೪
ಕದಾಚಿದ್ ಯಜ್ಞದತ್ತೋಽಥ ರಹಃ ಪುತ್ರಕಮಬ್ರವೀತ್ ।
ರಾಜನ್ ದುರ್ಭಿಕ್ಷದೋಷೇಣ ಕ್ವಾಪಿ ತೇ ಪಿತರೋ ಗತಾಃ ॥ ೨೫
ತತ್ಸದಾ ದೇಹಿ ವಿಪ್ರೇಭ್ಯೋ ಯೇನಾಯಾಂತಿ ನಿಶಮ್ಯ ತೇ ।
ಬ್ರಹ್ಮದತ್ತಕಥಾಂ ಚೈತಾಂ ಕಥಯಾಮ್ಯತ್ರ ತೇ ಶೃಣು ॥ ೨೬

## ಬ್ರಹ್ಮದತ್ತನ ಕಥೆ

೨೭. ಹಿಂದೆ ವಾರಾಣಸಿಯಲ್ಲಿ ಬ್ರಹ್ಮದತ್ತನೆಂಬ ರಾಜನಿದ್ದನು. ಒಮ್ಮೆ ರಾತ್ರಿಯಲ್ಲಿ ಅವನು ಆಕಾಶದಲ್ಲಿ ಪಯಣಿಸುತ್ತಿದ್ದ ಹಂಸಪಕ್ಷಿಗಳ ಜೋಡಿಯನ್ನು ಕಂಡನು.

೨೮. ಹಕ್ಕಿಗಳ ಜೋಡಿಯು ಹೊಂಬಣ್ಣದಿಂದ ಮಿರುಗುತ್ತಿತ್ತು. ಅದರ ಸುತ್ತಲೂ ನೂರಾರು ರಾಜಹಂಸಗಳು ಹಾರುತ್ತಿದ್ದುವು. ಆ ಜೋಡಿಯು ಬಿಳಿಯ ಮೋಡಗಳಿಂದ ಅಕಾಲದಲ್ಲಿ ಸುತ್ತುವರಿಯಲ್ಪಟ್ಟ ಮಿಂಚಿನ ರಾಶಿಯಂತೆ ಹೊಳೆಯುತ್ತಿತ್ತು.

೨೯. ಆ ಜೋಡಿಹಕ್ಕಿಗಳನ್ನು ಮತ್ತೆ ನೋಡಬೇಕೆಂಬ ಬಲವತ್ತಾದ ಆಸೆಯು ಆ ರಾಜನಲ್ಲುಂಟಾಯಿತು. ಅದರಿಂದ ಅವನು ಉಳಿದ ಯಾವ ರಾಜಭೋಗಗಳಲ್ಲೂ ಆಸಕ್ತಿಯನ್ನು ವಹಿಸಲಿಲ್ಲ.

೩೦. ತನ್ನ ಮಂತ್ರಿಗಳೊಡನೆ ಆಲೋಚಿಸಿ ಅವನೊಂದು ಸರೋವರವನ್ನು ನಿರ್ಮಿಸಿದನು. ಎಲ್ಲ ಪ್ರಾಣಿಗಳಿಗೂ ಅಲ್ಲಿ ಅಭಯವುಂಟೆಂದನು.

೩೧. ಸ್ವಲ್ಪ ಕಾಲವಾದ ಮೇಲೆ ಆ ಎರಡು ಹಂಸಗಳೂ ಬಂದುವು. ರಾಜನು ಅವುಗಳನ್ನು ನೋಡಿದನು. ಅವುಗಳಿಗೆ ಅವನಲ್ಲಿ ನಂಬಿಕೆ ಹುಟ್ಟಿದ ಮೇಲೆ ಚಿನ್ನದ ಶರೀರ ಉಂಟಾದುದು ಹೇಗೆ ಎಂದು ಅವನು ಕೇಳಿದನು.

೩೨. ಸ್ಪಷ್ಟವಾದ ಮಾತಿನಲ್ಲಿ ಆ ಎರಡು ಹಂಸಗಳೂ ರಾಜನಿಗೆ ಹೀಗೆ ಹೇಳಿದವು— "ರಾಜನೇ, ಹಿಂದೊಂದು ಜನ್ಮದಲ್ಲಿ ನಾವಿಬ್ಬರೂ ಕಾಗೆಗಳಾಗಿದ್ದೆವು.

---

ವಾರಾಣಸ್ಯಾಮಭೂತ್ ಪೂರ್ವಂ ಬ್ರಹ್ಮದತ್ತಾಭಿಧೋ ನೃಪಃ ।
ಸೋಽಪಶ್ಯದ್ಧಂಸಯುಗಲಂ ಪ್ರಯಾತಂ ಗಗನೇ ನಿಶಿ ॥ ೨೭
ವಿಸ್ಫುರತ್ ಕನಕಚ್ಛಾಯಂ ರಾಜಹಂಸಶತೈರ್ಯುತಮ್ ।
ವಿದ್ಯುತ್‌ಪುಂಜಮಿವಾಕಾಂಡಸಿತಾಭ್ರಪರಿವೇಷ್ಟಿತಮ್ ॥ ೨೮
ಪುನಸ್ತದ್ದರ್ಶನೋತ್ಕಂಠಾ ತಥಾಸ್ಯ ವವೃಧೇ ತತಃ ।
ಯಥಾ ನೃಪತಿಸೌಖ್ಯೇಷು ನ ಬಬಂಧ ರತಿಂ ಕ್ವಚಿತ್ ॥ ೨೯
ಮಂತ್ರಿಭಿಃ ಸಹ ಸಂಮಂತ್ರ್ಯ ತತಶ್ಚಾಕಾರಯತ್ ಸರಃ ।
ಸ ರಾಜಾ ಸ್ವಮತೇ ಕಾಂತಂ ಪ್ರಾಣಿನಾಂ ಚಾಭಯಂ ದದೌ ॥ ೩೦
ತತಃ ಕಾಲೇನ ತೌ ಪ್ರಾಪ್ತೌ ಹಂಸೌ ರಾಜಾ ದದರ್ಶ ಸಃ ।
ವಿಶ್ವಸ್ತೌ ಚಾಪಿ ಪಪ್ರಚ್ಛ ಹೈಮೇ ವಪುಷಿ ಕಾರಣಮ್ ॥ ೩೧
ವ್ಯಕ್ತವಾಚೌ ತತಸ್ತೌ ಚ ಹಂಸೌ ರಾಜಾನಮೂಚತುಃ ।
ಪುರಾ ಜನ್ಮಾಂತರೇ ಕಾಕಾವಾವಾಂ ಜಾತೌ ಮಹೀಪತೇ ॥ ೩೨

೩೩-೩೪ ಆಹಾರಕ್ಕಾಗಿ ನಾವಿಬ್ಬರೂ ಜಗಳವಾಡುತ್ತಾ ಒಂದು ಪುಣ್ಯಮಯವಾದ ನಿರ್ಜನ ಶಿವಾಲಯದಲ್ಲಿ ಬಿದ್ದು ಸತ್ತು ಹೋದೆವು. ಅದೇ ಸ್ಥಳದಲ್ಲಿದ್ದ ಒಂದು ಜಲಾಶಯದಲ್ಲಿ ಮತ್ತೆ ಹುಟ್ಟಿ ಪೂರ್ವಜನ್ಮ ಸ್ಮರಣೆಯುಳ್ಳ ಚಿನ್ನದ ಹಂಸಗಳಾದೆವು." ಈ ವಿಷಯವನ್ನು ಕೇಳಿ ಅವುಗಳನ್ನು ಇಷ್ಟ ಬಂದಷ್ಟು ನೋಡಿ ರಾಜನು ಆನಂದಪಟ್ಟನು.

೩೫ ಆದ್ದರಿಂದ ನೀನೂ ಅಸದೃಶವಾದ ದಾನದಿಂದ ನಿನ್ನ ತಂದೆಯಂದಿರನ್ನು ಪಡೆಯುವೆ ಎಂದು ಯಜ್ಞದತ್ತನು ಹೇಳಲು ಪುತ್ರಕನು ಹಾಗೆಯೇ ಮಾಡಿದನು.

೩೬ ದಾನದ ವಾರ್ತೆಯನ್ನು ಕೇಳಿದ ಆ ಮೂವರು ಬ್ರಾಹ್ಮಣರೂ ಅಲ್ಲಿಗೆ ಬಂದರು. ಹೆಚ್ಚು ಸಂಪತ್ತಿನೊಡನೆ ತಮ್ಮ ಪತ್ನಿಯರನ್ನು ಮತ್ತೆ ಪಡೆದುಕೊಂಡರು.

೩೭ ದುರಾತ್ಮರ ಬುದ್ಧಿ ಅವಿವೇಕದಿಂದ ಕುರುಡಾಗಿರುತ್ತದೆ. ಎಷ್ಟು ಆಪತ್ತುಗಳು ಬಂದುಹೋದರೂ ಅವರು ತಮ್ಮ ರೀತಿನೀತಿಗಳನ್ನು ಬಿಡುವುದಿಲ್ಲ. ಇದೊಂದು ಆಶ್ಚರ್ಯ.

೩೮ ಸ್ವಲ್ಪ ಕಾಲಾನಂತರ ಆ ಬ್ರಾಹ್ಮಣರಿಗೆ ರಾಜ್ಯದ ಆಸೆ ಉಂಟಾಯಿತು. ಪುತ್ರಕನನ್ನು ಕೊಂದುಹಾಕಬೇಕೆಂಬ ಉದ್ದೇಶದಿಂದ ವಿಂಧ್ಯವಾಸಿನಿಯ ದರ್ಶನವನ್ನು ಮಾಡಿಸುವ ನೆಪದಿಂದ ಪುತ್ರಕನನ್ನು ಅಲ್ಲಿಗೆ ಒಯ್ದರು.

೩೯. ಗರ್ಭಗುಡಿಯೊಳಗೆ ಕೊಲೆಗಡುಕರನ್ನಿರಿಸಿ ಅವರು "ನೀನು ಮೊದಲು ಒಳಗೆ ಹೋಗಿ ದೇವಿಯ ದರ್ಶನವನ್ನು ಮಾಡು" ಎಂದು ಅವನಿಗೆ ಹೇಳಿದರು.

---

ಬಲ್ಯರ್ಥಂ ಯುಧ್ಯಮಾನೌ ಚ ಪುಣ್ಯೇ ಶೂನ್ಯೇ ಶಿವಾಲಯೇ ।
ವಿನಿಪತ್ಯ ವಿಪನ್ನೌ ಸ್ವಸ್ತತ್‌ಸ್ಥಾನದ್ರೋಣಿಕಾಂತರೇ ॥ ೩೩
ಜಾತೌ ಜಾತಿಸ್ಮರಾವಾವಾಂ ಹಂಸೌ ಹೇಮಮಯೌ ತತಃ ।
ತಚ್ಛ್ರುತ್ವಾ ತೌ ಯಥಾಕಾಮಂ ಪಶ್ಯನ್ ರಾಜಾ ತುತೋಷ ಸಃ ॥ ೩೪
ಅತೋಽನನ್ಯಾದೃಶಾದೇವ ಪಿತ್ರೄನ್‌ದಾನಾದವಾಪ್ಸ್ಯಸಿ ।
ಇತ್ಯುಕ್ತೋ ಯಜ್ಞದತ್ತೇನ ಪುತ್ರಕಸ್ತತ್ ತಥಾಕರೋತ್ ॥ ೩೫
ಶ್ರುತ್ವಾ ಪ್ರದಾನವಾರ್ತಾಂ ತಾಮಾಯಯುಸ್ತೇ ದ್ವಿಜಾತಯಃ ।
ಪರಿಜ್ಞಾತಾಃ ಪರಾಂ ಲಕ್ಷ್ಮೀಂ ಪತ್ನೀಶ್ಚ ಸಹ ಲೇಭಿರೇ ॥ ೩೬
ಆಶ್ಚರ್ಯಮಪರಿತ್ಯಾಜ್ಯೋ ದೃಷ್ಟನಷ್ಟಾಪದಾಮಪಿ ।
ಅವಿವೇಕಾಂಧಬುದ್ಧೀನಾಂ ಸ್ವಾನುಭಾವೋ ದುರಾತ್ಮನಾಮ್ ॥ ೩೭
ಕಾಲೇನ ರಾಜ್ಯಕಾಮಾಸ್ತೇ ಪುತ್ರಕಂ ತಂ ಜಿಘಾಂಸವಃ ।
ನಿನ್ಯುಸ್ತದ್ದರ್ಶನವ್ಯಾಜಾದ್ ದ್ವಿಜಾ ವಿಂಧ್ಯನಿವಾಸಿನೀಮ್ ॥ ೩೮
ವಧಕಾನ್ ಸ್ಥಾಪಯಿತ್ವಾ ಚ ದೇವೀಗರ್ಭಗೃಹಾಂತರೇ ।
ತಮೂಚುಃ ಪೂರ್ವಮೇಕಸ್ತ್ವಂ ಪಶ್ಯ ದೇವೀಂ ವ್ರಜಾಂತರಮ್ ॥ ೩೯

೪೦. ಅವರಲ್ಲಿ ನಂಬಿಕೆಯನ್ನಿಟ್ಟು ಅವನು ಒಳಗೆ ಪ್ರವೇಶಿಸಿದನು. ಅಲ್ಲಿ ಅವನನ್ನು ಕೊಲ್ಲಲು ಬಂದ ಕಟುಕರನ್ನು ನೋಡಿ ಪುತ್ರಕನು "ನನ್ನನ್ನೇಕೆ ಕೊಲ್ಲುತ್ತಿದ್ದೀರಿ ?" ಎಂದು ಕೇಳಿದನು.

೪೧. "ನಿನ್ನ ತಂದೆಯಂದಿರು ನಮಗೆ ಹೊನ್ನನ್ನು ಕೊಟ್ಟು ಈ ಕಾರ್ಯಕ್ಕೆ ತೊಡಗಿಸಿದ್ದಾರೆ" ಎಂದು ಅವರು ಹೇಳಿದರು. ಆಗ ಅವರು ವಿಂಧ್ಯವಾಸಿನೀದೇವಿಯ ಮಾಯೆಗೆ ವಶರಾಗಲು, ಬುದ್ಧಿಶಾಲಿಯಾದ ಪುತ್ರಕನಿಂತೆಂದನು.

೪೨. "ನಿಮಗೆ ಅಮೂಲ್ಯವಾದ ಈ ನನ್ನ ರತ್ನಾಭರಣವನ್ನು ಕೊಡುತ್ತೇನೆ. ನನ್ನನ್ನು ಬಿಟ್ಟು ಬಿಡಿ. ಈ ರಹಸ್ಯವನ್ನು ನಾನು ಹೊರಗೆಡಹುವುದಿಲ್ಲ. ದೂರ ಹೊರಟುಹೋಗುತ್ತೇನೆ."

೪೩. ಹಾಗೆಯೇ ಆಗಲಿ ಎಂದು ಕಟುಕರು ಅವನಿಂದ ಆ ರತ್ನಾಭರಣವನ್ನು ಪಡೆದುಕೊಂಡು ಹೊರಗೆ ಹೋಗಿ 'ಪುತ್ರಕನನ್ನು ಕೊಂದೆವು' ಎಂದು ಅವನ ತಂದೆಯಂದಿರ ಮುಂದೆ ಸುಳ್ಳು ಹೇಳಿದರು.

೪೪. ಆಮೇಲೆ ರಾಜ್ಯಕ್ಕಾಗಿ ಆಸೆಯಿಂದ ಬಂದ ಆ ಬ್ರಾಹ್ಮಣರನ್ನು ಅವರು ದ್ರೋಹಿಗಳೆಂದು ಅರಿತ ಮಂತ್ರಿಗಳು ಕೊಂದುಹಾಕಿದರು. ಕೃತಘ್ನರಿಗೆ ಶುಭವೆಲ್ಲಿದೆ ?

೪೫. ಈ ಮಧ್ಯದಲ್ಲಿ ಸತ್ಯಸಂಧನಾದ ರಾಜ ಪುತ್ರಕನು ತನ್ನ ಬಂಧುಗಳ ಬಗೆಗೆ ಬೇಸರಪಟ್ಟುಕೊಂಡು ವಿಂಧ್ಯಾಟವಿಯನ್ನು ಹೊಕ್ಕನು.

---

ತತಃ ಪ್ರವಿಷ್ಟೋ ವಿಶ್ವಾಸಾತ್ ಸ ದೃಷ್ಟ್ವಾ ಹಂತುಮುದ್ಯತಾನ್ ।
ಪುರುಷಾನ್ ಪುತ್ರಕೋಽಪೃಚ್ಛತ್ ಕಸ್ಮಾನ್ಮಿಹಥ ಮಾಮಿತಿ ॥ ೪೦
ಪಿತೃಭಿಸ್ತೇ ಪ್ರಯುಕ್ತಾಃ ಸ್ಮಃ ಸ್ವರ್ಣಂ ದತ್ತ್ವೇತಿ ಚಾಬ್ರುವನ್ ।
ತತಸ್ತಾನ್ ಮೋಹಿತಾನ್ ದೇವ್ಯಾ ಬುದ್ಧಿಮಾನ್ ಪುತ್ರಕೋಽವದತ್ ॥ ೪೧
ದದಾಮ್ಯೇತದನರ್ಘಂ ವೋ ರತ್ನಾಲಂಕರಣಂ ನಿಜಮ್ ।
ಮಾಂ ಮುಂಚತ ಕರೋಮ್ಯತ್ರ ನೋದ್ಭೇದಂ ಯಾಮಿ ದೂರತಃ ॥ ೪೨
ಏವಮಸ್ತ್ವಿತಿ ತತ್ತಸ್ಮಾದ್ ಗೃಹೀತ್ವಾ ವಧಕಾ ಗತಾಃ ।
ಹತಃ ಪುತ್ರಕ ಇತ್ಯೂಚುಃ ತತ್ಪಿತೄಣಾಂ ಪುರೋ ಮೃಷಾ ॥ ೪೩
ತತಃ ಪ್ರತಿನಿವೃತ್ತಾಸ್ತೇ ಹತಾ ರಾಜ್ಯಾರ್ಥಿನೋ ದ್ವಿಜಾಃ ।
ಮಂತ್ರಿಭಿರ್ದ್ರೋಹಿಣೋ ಬುದ್ಧ್ವಾ ಕೃತಘ್ನಾನಾಂ ಶಿವಂ ಕುತಃ ॥ ೪೪
ಅತ್ರಾಂತರೇ ಸ ರಾಜಾಪಿ ಪುತ್ರಕಃ ಸತ್ಯಸಂಗರಃ ।
ವಿವೇಶ ವಿಂಧ್ಯಕಾಂತಾರಂ ವಿರಕ್ತಃ ಸ್ವೇಷು ಬಂಧುಷು ॥ ೪೫

## ಮಯಾಸುರನ ಮೂರ್ಖಪುತ್ರರ ಕಥೆ

೪೬. ಅಲ್ಲಿ ಅಲೆದಾಡುತ್ತಾ ಅವನು ಪರಸ್ಪರ ಬಾಹುಯುದ್ಧದಲ್ಲಿ ತೊಡಗಿದ್ದ ಇಬ್ಬರು ಪುರುಷರನ್ನು ಕಂಡು "ನೀವು ಯಾರು ?" ಎಂದು ಕೇಳಿದನು.

೪೭. "ನಾವಿಬ್ಬರೂ ಮಯಾಸುರನ ಮಕ್ಕಳು. ಅಪ್ಪನ ಆಸ್ತಿಯಾಗಿ ನಮಗಿರುವುದು ಈ ಪಾತ್ರೆ ಈ ಕೋಲು ಹಾಗೂ ಈ ಪಾದುಕೆಗಳು ಮಾತ್ರ

೪೮. ಇವುಗಳಿಗಾಗಿ ನಮ್ಮ ಹೊಡೆದಾಟ. ನಮ್ಮಿಬ್ಬರಲ್ಲಿ ಯಾರು ಹೆಚ್ಚು ಬಲಶಾಲಿಯೋ ಅವನು ಇವೆಲ್ಲವನ್ನೂ ಪಡೆಯಬೇಕು" ಎಂದ ಅವರ ಮಾತನ್ನು ಕೇಳಿ ಪುತ್ರಕನು ನಕ್ಕು ಹೀಗೆಂದನು.

೪೯. "ಇದು ಯಾವ ಮಹಾ ಆಸ್ತಿ ?" ಆಗ ಅವರು ಹೇಳಿದರು. "ಈ ಪಾದುಕೆಗಳನ್ನು ಧರಿಸಿದರೆ ಆಕಾಶದಲ್ಲಿ ಹಾರಬಹುದು.

೫೦. ಈ ಕೋಲಿನಿಂದ ಏನನ್ನು ಬರೆದರೂ ಅದು ಸತ್ಯವಾಗುತ್ತದೆ. ಈ ಪಾತ್ರೆಯಲ್ಲಿ ಯಾವ ಆಹಾರ ಬರಲಿ ಎಂದು ಅಂದುಕೊಳ್ಳುತ್ತೇವೋ ಆ ಆಹಾರ ಸಿದ್ಧವಾಗುತ್ತದೆ"

೫೧. ಅದನ್ನು ಕೇಳಿ ಪುತ್ರಕನಿಂತೆಂದನು. "ಯುದ್ಧದಿಂದೇನು ಲಾಭ ? ಒಂದು ಪಣವನ್ನಿಟ್ಟುಕೊಳ್ಳಿರಿ. ಓಡುವುದರಲ್ಲಿ ಯಾರಿಗೆ ಹೆಚ್ಚು ಶಕ್ತಿಯೋ ಅವನು ಆಸ್ತಿಯನ್ನು ಪಡೆದುಕೊಳ್ಳಲಿ"

---

ಭ್ರಮನ್ ದದರ್ಶ ತತ್ರಾಸೌ ಬಾಹುಯುದ್ಧೈಕತತ್ಪರೌ ।
ಪುರುಷೌ ದ್ವೌ ತತಸ್ತೌ ಸಃ ಪೃಷ್ಟವಾನ್ ಕೌ ಯುವಾಮಿತಿ ॥ ೪೬
ಮಯಾಸುರಸುತಾವಾವಾಂ ತದೀಯಂ ಚಾಸ್ತಿ ನೌ ಧನಮ್ ।
ಇದಂ ಭಾಜನಮೇಷಾ ಚ ಯಷ್ಟಿರೇತೇ ಚ ಪಾದುಕೇ ॥ ೪೭
ಏತನ್ನಿಮಿತ್ತಂ ಯುದ್ಧಂ ನೌ ಯೋ ಬಲೀ ಸ ಹರೇದಿತಿ ।
ಏತತ್ತದ್ವಚನಂ ಶ್ರುತ್ವಾ ಹಸನ್ ಪ್ರೋವಾಚ ಪುತ್ರಕಃ ॥ ೪೮
ಕಿಯದೇತದ್ ಧನಂ ಪುಂಸಃ ? ತತಸ್ತೌ ಸಮವೋಚತಾಮ್ ।
ಪಾದುಕೇ ಪರಿಧಾಯೈತೇ ಖೇಚರತ್ವಮವಾಪ್ಯತೇ ॥ ೪೯
ಯಷ್ಟ್ಯಾ ಯಲ್ಲಿಖ್ಯತೇ ಕಿಂಚಿತ್ ಸತ್ಯಂ ಸಂಪದ್ಯತೇ ಹಿ ತತ್ ।
ಭಾಜನೇ ಯೋ ಯ ಆಹಾರಶ್ಚಿಂತ್ಯತೇ ಸ ಸ ತಿಷ್ಠತಿ ॥ ೫೦
ತಚ್ಛ್ರುತ್ವಾ ಪುತ್ರಕೋಽವಾದೀತ್ ಕಿಂ ಯುದ್ಧೇನಾಸ್ತ್ವಯಂ ಪಣಃ ।
ಧಾವನ್ ಬಲಾಧಿಕೋ ಯಃ ಸ್ಯಾತ್ ಸ ಏವೈತದ್ಧರೇದಿತಿ ॥ ೫೧

೫೨. "ಹಾಗೆಯೇ ಆಗಲಿ" ಎಂದು ಆ ಮೂಢರಿಬ್ಬರೂ ಓಡಿದರು. ಪುತ್ರಕನು ಕೋಲನ್ನೂ ಪಾತ್ರೆಯನ್ನೂ ತೆಗೆದುಕೊಂಡು ಪಾದುಕೆಗಳನ್ನು ಮೆಟ್ಟಿಕೊಂಡು ಆಕಾಶಮಾರ್ಗದಿಂದ ಹೊರಟನು.

೫೩. ಕ್ಷಣಮಾತ್ರದಲ್ಲಿ ಬಹಳ ದೂರವನ್ನು ಕ್ರಮಿಸಿದ ಅವನು ಆಕರ್ಷಿಕಾ ಎಂಬ ನಗರವನ್ನು ನೋಡಿ ಆಕಾಶದಿಂದ ಅಲ್ಲಿ ಇಳಿದನು.

೫೪. "ವೇಶ್ಯೆಯರು ಮೋಸಗಾರ್ತಿಯರು. ಬ್ರಾಹ್ಮಣರು ನನ್ನ ತಂದೆಯಂದಿರಂತೆಯೇ. ವೈಶ್ಯರು ಹಣದಲ್ಲಿ ಲೋಭವನ್ನುಳ್ಳವರು. ನಾನು ಯಾರ ಮನೆಯಲ್ಲಿ ವಾಸಿಸಲಿ ?"

೫೫. ಹೀಗೆ ಆಲೋಚಿಸುತ್ತಾ ರಾಜ ಪುತ್ರಕನು ನಿರ್ಜನವಾದ ಒಂದು ಮುರುಕಲು ಮನೆಗೆ ಹೋದನು. ಅದರಲ್ಲಿ ಒಬ್ಬ ಮುದುಕಿಯನ್ನು ಕಂಡನು.

೫೬. ಅವಳಿಗೆ ಹಣವನ್ನಿತ್ತು ಸಂತೋಷಪಡಿಸಿ ಅವಳ ಆದರಾತಿಥ್ಯವನ್ನು ಸ್ವೀಕರಿಸಿ ಯಾರಿಗೂ ಕಾಣದಂತೆ ಪುತ್ರಕನು ಆ ಮುರುಕಲು ಮನೆಯಲ್ಲೇ ಉಳಿದುಕೊಂಡನು.

೫೭. ಸಂತುಷ್ಟಳಾಗಿದ್ದ ಆ ಮುದುಕಿಯು ಒಮ್ಮೆ ಪುತ್ರಕನಿಗೆ ಹೀಗೆ ಹೇಳಿದಳು. "ಮಗನೇ, ನಿನಗೆ ಅನುರೂಪಳಾದ ಮಡದಿ ಇಲ್ಲದಿರುವುದು ನನಗೆ ಚಿಂತೆಯಾಗಿದೆ.

೫೮. ಈ ಊರಿನಲ್ಲಿ ರಾಜನ ಮಗಳು ಪಾಟಲೀ ಎಂಬ ಕನ್ಯೆ ಇದ್ದಾಳೆ. ಅವಳೊಂದು ರತ್ನವೆಂದು ಉಪ್ಪರಿಗೆಯ ಅಂತಃಪುರದಲ್ಲಿ ಅವಳನ್ನು ರಕ್ಷಿಸಿಟ್ಟಿದ್ದಾರೆ."

---

ಏವಮಸ್ತ್ವಿತಿ ತೌ ಮೂಢೌ ಧಾವಿತೌ ಸೋಽಪಿ ಪಾದುಕೇ ।
ಅಧ್ಯಾಸ್ಯೋದಪತದ್ ವ್ಯೋಮ ಗೃಹೀತ್ವಾ ಯಷ್ಟಿಭಾಜನೇ ॥ ೫೨
ಅಥ ದೂರಂ ಕ್ಷಣಾದ್ ಗತ್ವಾ ದದರ್ಶ ನಗರೀಂ ಶುಭಾಮ್ ।
ಆಕರ್ಷಿಕಾಖ್ಯಾಂ ತಸ್ಯಾಂ ಚ ನಭಸೋಽವತತಾರ ಸಃ ॥ ೫೩
ವಂಚನಪ್ರವಣಾ ವೇಶ್ಯಾ ದ್ವಿಜಾ ಮತ್ಪಿತರೋ ಯಥಾ ।
ವಣಿಜೋ ಧನಲುಬ್ಧಾಶ್ಚ ಕಸ್ಯ ಗೇಹೇ ವಸಾಮ್ಯಹಮ್ ॥ ೫೪
ಇತಿ ಸಂಚಿಂತಯನ್ ಪ್ರಾಪ ಸ ರಾಜಾ ವಿಜನಂ ಗೃಹಮ್ ।
ಜೀರ್ಣಂ ತದಂತರೇ ಚೈಕಾಂ ವೃದ್ಧಾಂ ಯೋಷಿತಮೈಕ್ಷತ ॥ ೫೫
ಪ್ರದಾನಪೂರ್ವಂ ಸಂತೋಷ್ಯ ತಾಂ ವೃದ್ಧಾಮಾದೃತಸ್ತಯಾ ।
ಉವಾಸಾಲಕ್ಷಿತಸ್ತತ್ರ ಪುತ್ರಕಃ ಶೀರ್ಣಸದ್ಮನಿ ॥ ೫೬
ಕದಾಚಿತ್ ಸಾಥ ಸಂಪ್ರೀತಾ ವೃದ್ಧಾ ಪುತ್ರಕಮಬ್ರವೀತ್ ।
ಚಿಂತಾ ಮೇ ಪುತ್ರ ಯದ್ ಭಾರ್ಯಾ ನಾನುರೂಪಾ ತವ ಕ್ವಚಿತ್ ॥ ೫೭
ಇಹ ರಾಜ್ಞಸ್ತು ತನಯಾ ಪಾಟಲೀತ್ಯಸ್ತಿ ಕನ್ಯಕಾ ।
ಉಪರ್ಯಂತಃಪುರೇ ಸಾ ಚ ರತ್ನಮಿತ್ಯಭಿರಕ್ಷ್ಯತೇ ॥ ೫೮

೫೯. ಮುದುಕಿಯ ಮಾತುಗಳನ್ನು ಕಿವಿಗೊಟ್ಟು ಕೇಳುತ್ತಿದ್ದ ಪುತ್ರಕನ ಹೃದಯದೊಳಕ್ಕೆ ಮನ್ಮಥನು ಆ ಕಿವಿಯ ಮಾರ್ಗದಿಂದಲೇ ಅವಕಾಶವನ್ನು ಪಡೆದು ನುಗ್ಗಿದನು.

೬೦. "ಆ ಸುಂದರಿಯನ್ನು ನಾನಿಂದು ನೋಡಲೇಬೇಕು' ಎಂದು ನಿಶ್ಚಯಿಸಿ ಪುತ್ರಕನು ರಾತ್ರಿಯಲ್ಲಿ ಪಾದುಕೆಗಳನ್ನು ಧರಿಸಿ ಆಕಾಶಮಾರ್ಗದಿಂದ ಅಲ್ಲಿಗೆ ತೆರಳಿದನು.

೬೧. ಪುತ್ರಕನು ಬೆಟ್ಟದ ಶಿಖರದ ಮೇಲಿದ್ದ ಕಿಟಕಿಯಿಂದ ಒಳಕ್ಕೆ ಪ್ರವೇಶಿಸಿ ಅಂತಃಪುರದಲ್ಲಿ ಏಕಾಂತದಲ್ಲಿ ಮಲಗಿದ್ದ ಪಾಟಲಿಯನ್ನು ನೋಡಿದನು.

೬೨. ಅವಳ ದೇಹದ ಅಂಗಗಳನ್ನು ಚಂದ್ರನ ಬೆಳಕು ಸತತವಾಗಿ ಆವರಿಸಿತ್ತು. ಈ ಜಗತ್ತನ್ನೆಲ್ಲ ಗೆದ್ದು ಬಳಲಿದ ಮನ್ಮಥನ ಶಕ್ತಿಯೇ ಮೂರ್ತಿಮತ್ತಾಗಿ ಬಂದಂತೆ ಇದ್ದಳು ಅವಳು.

೬೩. ಇವಳನ್ನು ಎಚ್ಚರಗೊಳಿಸುವುದು ಹೇಗೆ ಎಂದು ಪುತ್ರಕನು ಚಿಂತಿಸುತ್ತಿರುವಷ್ಟರಲ್ಲಿ ಅಕಸ್ಮಾತ್ ಹೊರಗಡೆ ನಿಂತಿದ್ದ ಕಾವಲುಗಾರನು ಹಾಡತೊಡಗಿದನು.

೬೪. ಮಧುರಹುಂಕಾರವನು ಮಾಡುತ್ತ ಮಲಗಿರುವ
ಕಣ್ಣುಗಳನಾಲಸ್ಯದಿಂದರ್ಧ ತೆರೆದು
ಕಾಂತೆಯನು ಏಕಾಂತದಲಿ ಎಚ್ಚರಿಸುವುದೇ
ಜನ್ಮಫಲವಿದು ತರುಣರಿಗೆ ದಿಟವು ಪಿರಿದು

---

ಏತದ್ ವೃದ್ಧಾವಚಸ್ತಸ್ಯ ದತ್ತಕರ್ಣಸ್ಯ ಶೃಣ್ವತಃ ।
ವಿವೇಶ ತೇನೈವ ಪಥಾ ಲಬ್ಧರಂಧ್ರೋ ಹೃದಿ ಸ್ಮರಃ ॥ ೫೯
ದ್ರಷ್ಟವ್ಯಾ ಸಾ ಮಯಾದ್ಯೈವ ಕಾಂತೇತಿ ಕೃತನಿಶ್ಚಯಃ ।
ನಿಶಾಯಾಂ ನಭಸಾ ತತ್ರ ಪಾದುಕಾಭ್ಯಾಂ ಜಗಾಮ ಸಃ ॥ ೬೦
ಪ್ರವಿಶ್ಯ ಸೋಽದ್ರಿಶೃಂಗಾಗ್ರತುಂಗವಾತಾಯನೇನ ತಾಮ್ ।
ಅಂತಃಪುರೇ ದದರ್ಶಾಥ ಸುಪ್ತಾಂ ರಹಸಿ ಪಾಟಲೀಮ್ ॥ ೬೧
ಸೇವ್ಯಮಾನಾಮವಿರತಂ ಚಂದ್ರಕಾಂತ್ಯಾಂಗಲಗ್ನಯಾ ।
ಜಿತ್ವಾ ಜಗದಿದಂ ಶ್ರಾಂತಾಂ ಮೂರ್ತಾಂ ಶಕ್ತಿಂ ಮನೋಭುವಃ ॥ ೬೨
ಕಥಂ ಪ್ರಬೋಧಯಾಮ್ಯೇತಾಮ್ ಇತಿ ಯಾವದಚಿಂತಯತ್ ।
ಇತ್ಯೇಕಸ್ಮಾದ್ ಬಹಿಸ್ತಾವದ್ ಯಾಮಿಕಃ ಪುರುಷೋ ಜಗೌ ॥ ೬೩
ಆಲಿಂಗ್ಯ ಮಧುರಹುಂಕೃತಿಮ್ ಅಲಸೋನ್ಮಿಷದೀಕ್ಷಣಾಂ ರಹಃ ಕಾಂತಾಮ್।
ಯದ್ ಬೋಧಯಂತಿ ಸುಪ್ತಾಂ ಜನ್ಮನಿ ಯೂನಾಂ ತದೇವ ಫಲಮ್ ॥ ೬೪

೧೫. ಮುಂದಿನ ಕಾರ್ಯಕ್ಕೆ ಪೀಠಿಕೆಯಂತಿದ್ದ ಆ ಹಾಡನ್ನು ಕೇಳಿ ಪುತ್ರಕನು ಆ ಕಾಂತೆಯನ್ನು ತಬ್ಬಿಕೊಂಡನು. ಅವನ ಅಂಗಗಳು ನಡುಕದಿಂದ ದುರ್ಬಲವಾಗಿದ್ದುವು. ಆಗ ಅವಳಿಗೂ ಎಚ್ಚರವಾಯಿತು.

೧೬. ಪುತ್ರಕರಾಜನನ್ನು ನೋಡುತ್ತಿದ್ದ ಅವಳ ಕಣ್ಣೋಟಗಳು ಅತ್ತಿತ್ತ ಚಲಿಸುತ್ತಿದ್ದು ಆ ನೋಟದಲ್ಲಿ ನಾಚಿಕೆ ಮತ್ತು ಕುತೂಹಲಗಳು ಪರಸ್ಪರ ಸ್ಪರ್ಧಿಸುತ್ತಿದ್ದುವು.

೧೭. ಅವರಿಬ್ಬರೂ ಮಾತನಾಡಿಕೊಂಡರು. ಗಾಂಧರ್ವವಿವಾಹ ನಡೆದೇ ಬಿಟ್ಟಿತು. ಆ ದಂಪತಿಗಳ ಪ್ರೀತಿ ದೀರ್ಘವಾಗಿ ಬೆಳೆಯಿತು, ಆದರೆ ರಾತ್ರಿ ಮಾತ್ರ ಕೊನೆಗೊಂಡಿತು.

೧೮. ಉತ್ಕಂಠಿತಳಾಗಿದ್ದ ವಧುವಿಗೆ ಹೋಗಿಬರುವೆನೆಂದು ಹೇಳಿ, ಮನಸ್ಸನ್ನು ಅವಳ ಬಳಿಯೇ ಬಿಟ್ಟು ರಾತ್ರಿಯ ಕೊನೆಯ ಯಾಮದಲ್ಲಿ ಪುತ್ರಕನು ಮುದುಕಿಯ ಮನೆಗೆ ಹಿಂದಿರುಗಿದನು.

೧೯. ಹೀಗೆ ಪ್ರತಿರಾತ್ರಿಯೂ ಪುತ್ರಕನು ಅಲ್ಲಿಗೆ ಬಂದುಹೋಗುತ್ತಿರಲು ಒಮ್ಮೆ ಕಾವಲುಗಾರರು ರಾಜಕುಮಾರಿ ಪಾಟಲಿಯಲ್ಲಿ ಸಂಭೋಗದ ಚಿಹ್ನೆಗಳನ್ನು ಕಂಡರು.

೨೦. ಅವರು ಅದನ್ನು ಅವಳ ತಂದೆಗೆ ತಿಳಿಸಿದರು. ರಾಜನು ಏನು ನಡೆಯುವುದೆಂಬುದನ್ನು ತಿಳಿದುಕೊಳ್ಳುವುದಕ್ಕಾಗಿ ಗುಟ್ಟಾಗಿ ಒಬ್ಬ ಹೆಂಗಸನ್ನು ಅಂತಃಪುರದಲ್ಲಿ ಇರಿಸಿದನು.

---

ಶ್ರುತ್ವೈವೈತದುಪೋದ್ಘಾತಮಂಗೈರುತ್ಕಂಪವಿಕ್ಲವೈಃ ।
ಆಲಿಲಿಂಗ ಸ ತಾಂ ಕಾಂತಾಂ ಪ್ರಾಬುಧ್ಯತ ತತಶ್ಚ ಸಾ ॥ ೧೫

ಪಶ್ಯಂತ್ಯಾಸ್ತಂ ನೃಪಂ ತಸ್ಯಾ ಲಜ್ಜಾಕೌತುಕಯೋರ್ದೃಶಿ ।
ಅಭೂದನ್ಯೋನ್ಯಸಂಮರ್ದೋ ರಚಯಂತ್ಯಾಂ ಗತಾಗತಮ್ ॥ ೧೬

ಅಥಾಲಾಪೇ ಕೃತೇ ವೃತ್ತೇ ಗಾಂಧರ್ವೋದ್ವಾಹಕರ್ಮಣಿ ।
ಅವರ್ಧತ ತಯೋಃ ಪ್ರೀತಿರ್ದಂಪತ್ಯೋರ್ನತು ಯಾಮಿನೀ ॥ ೧೭

ಆಮಂತ್ರ್ಯಾಥ ವಧೂಮುತ್ಕಾಂ ತದ್ಗತೇನೈವ ಚೇತಸಾ ।
ಆಯಯೌ ಪಶ್ಚಿಮೇ ಭಾಗೇ ತದ್‌ವೃದ್ಧಾವೇಶ್ಮ ಪುತ್ರಕಃ ॥ ೧೮

ಇತ್ಥಂ ಪ್ರತಿನಿಶಂ ತತ್ರ ಕುರ್ವಾಣೇಽಸ್ಮಿನ್ ಗತಾಗತಮ್ ।
ಸಂಭೋಗಚಿಹ್ನಂ ಪಾಟಲ್ಯಾ ರಕ್ಷಿಭಿರ್ದೃಷ್ಟಮೇಕದಾ ॥ ೧೯

ತೈಸ್ತದಾವೇದಿತಂ ತಸ್ಯಾಃ ಪಿತುಃ ಸೋಽಪಿ ನಿಯುಕ್ತವಾನ್ ।
ಗೂಢಮಂತಃ ಪುರೇ ತತ್ರ ನಿಶಿ ನಾರೀಮವೇಕ್ಷಿತುಮ್ ॥ ೨೦

೭೧. ಪುತ್ರಕನು ಬಂದಾಗ ಅವಳು ಗಮನಿಸಿ ಅವನ ಗುರುತನ್ನು ಹಿಡಿಯಲು ಅನುಕೂಲವಾಗುವಂತೆ ಅವನ ಬಟ್ಟೆಗೆ ಅಲಕ್ತಕದ ಬಣ್ಣವನ್ನು ಬಳಿದಳು.

೭೨. ಬೆಳಗಾದ ಮೇಲೆ ಅವಳು ವಿಷಯವನ್ನು ತಿಳಿಸಲಾಗಿ ರಾಜನು ಭಟರನ್ನು ಕಳುಹಿಸಿದನು. ಅಲಕ್ತಕದ ಗುರುತಿನಿಂದ ಅವರು ಪುತ್ರಕನನ್ನು ಮುರುಕಲು ಮನೆಯಲ್ಲಿ ಹಿಡಿದರು.

೭೩. ಪುತ್ರಕನನ್ನು ರಾಜನ ಬಳಿಗೆ ಕರೆತಂದಾಗ ರಾಜನು ಸಿಟ್ಟಾಗಿರುವುದನ್ನು ನೋಡಿ ಪುತ್ರಕನು ಪಾದುಕೆಗಳಿಂದ ಹಾರಿ ಪಾಟಲಿಯ ಸೌಧದೊಳಗೆ ಪ್ರವೇಶಿಸಿದನು.

೭೪. 'ನಮ್ಮ ವಿಷಯ ಎಲ್ಲರಿಗೂ ತಿಳಿದುಬಿಟ್ಟಿದೆ. ಎದ್ದೇಳು, ಪಾದುಕೆಗಳ ಶಕ್ತಿಯಿಂದ ದೂರ ಹೋಗೋಣ', ಎಂದು ಹೇಳಿ ಪಾಟಲಿಯನ್ನು ಮಡಿಲಿನಲ್ಲಿ ಕೂಡಿಸಿಕೊಂಡು ಪುತ್ರಕನು ಆಕಾಶಮಾರ್ಗದಲ್ಲಿ ಹೊರಟನು.

೭೫. ಕಾಂತೆ ಪಾಟಲಿಯು ಬಳಲಿದಾಗ ಗಂಗಾತೀರದಲ್ಲಿ ಆಕಾಶದಿಂದ ಇಳಿದು ಮಾಯಾಪಾತ್ರೆಯ ಪ್ರಭಾವದಿಂದ ಉತ್ಪನ್ನವಾದ ಆಹಾರಗಳಿಂದ ಪುತ್ರಕನು ಪ್ರಿಯೆಯನ್ನು ತೃಪ್ತಿ ಪಡಿಸಿದನು.

೭೬. ಪುತ್ರಕನ ಪ್ರಭಾವವನ್ನು ಗಮನಿಸಿದ ಪಾಟಲಿಯ ಬೇಡಿಕೆಯಂತೆ ಅವನು ಮಾಯಾಕೋಲಿನಿಂದ ಚತುರಂಗಬಲಸಹಿತವಾದ ಒಂದು ನಗರವನ್ನು ಬರೆದನು.

---

ತಯಾ ಚ ತಸ್ಯ ಪ್ರಾಪ್ತಸ್ಯ ತತ್ರಾಭಿಜ್ಞಾನಸಿದ್ಧಯೇ ।
ಪುತ್ರಕಸ್ಯ ಪ್ರಸುಪ್ತಸ್ಯ ನ್ಯಸ್ತಂ ವಾಸಸ್ಯಲಕ್ತಕಮ್ ॥ ೭೧
ಪ್ರಾತಸ್ತಯಾ ಚ ವಿಜ್ಞಪ್ತೋ ರಾಜಾ ಚಾರಾನ್ ವ್ಯಸರ್ಜಯತ್ ।
ಸೋಽಭಿಜ್ಞಾನಾಚ್ಚ ತೈಃ ಪ್ರಾಪ್ತಃ ಪುತ್ರಕೋ ಜೀರ್ಣವೇಶ್ಮನಃ ॥ ೭೨
ಆನೀತೋ ರಾಜನಿಕಟಂ ಕುಪಿತಂ ವೀಕ್ಷ್ಯ ತಂ ನೃಪಮ್ ।
ಪಾದುಕಾಭ್ಯಾಂ ಸಮುತ್ಪತ್ಯ ಪಾಟಲೀಮಂದಿರೇಽವಿಶತ್ ॥ ೭೩
ವಿದಿತೌ ಸ್ವಸ್ತದುತ್ತಿಷ್ಠ ಗಚ್ಛಾವಃ ಪಾದುಕಾವಶಾತ್ ।
ಇತ್ಯಂಕೇ ಪಾಟಲೀಂ ಕೃತ್ವಾ ಜಗಾಮ ನಭಸಾ ತತಃ ॥ ೭೪
ಅಥ ಗಂಗಾತಟನಿಕಟೇ ಗಗನಾದವತೀರ್ಯ ಸ ಪ್ರಿಯಾಂ ಶ್ರಾಂತಾಮ್ ।
ಪಾತ್ರಪ್ರಭಾವಜಾತೈರಾಹಾರೈರ್ನಂದಯಾಮಾಸ ॥ ೭೫
ಆಲೋಕಿತಪ್ರಭಾವಃ ಪಾಟಲ್ಯಾ ಪುತ್ರಕೋಽರ್ಥಿತಶ್ಚ ತತಃ ।
ಯಷ್ಟ್ಯಾ ಲಿಲೇಖ ತತ್ರ ಸ ನಗರಂ ಚತುರಂಗಬಲಯುಕ್ತಮ್ ॥ ೭೬

೭೭. (ಆ ನಗರವು ಆವಿರ್ಭವಿಸಲು) ಅಲ್ಲಿ ಅವನೇ ರಾಜನಾದನು. ಅವನ ಮಹಾಪ್ರಭಾವವೆಲ್ಲ ಸತ್ಯವಾಯಿತು. ಶಕ್ತಿಯಿಂದ ಮಾವನನ್ನು ಬಗ್ಗಿಸಿ ಸಮುದ್ರಪರ್ಯಂತವಾದ ಭೂಮಿಯನ್ನು ಪುತ್ರಕನು ಆಳಿದನು.

೭೮. ಹೀಗೆ ಈ ನಗರವು ಮಾಯೆಯಿಂದ ರಚಿತವಾಗಿ ಪೌರರಿಂದ ತುಂಬಿ ಪಾಟಲಿಪುತ್ರ ಎಂಬ ಹೆಸರನ್ನು ಪಡೆದು ಲಕ್ಷ್ಮಿಗೂ ಸರಸ್ವತಿಗೂ ಆಡುಂಬೊಲವಾಗಿದೆ.

೭೯. ಹೀಗೆ ನಾವು ವರ್ಷೋಪಾಧ್ಯಾಯನ ಬಾಯಿಂದ ಅಪೂರ್ವವೂ ವಿಚಿತ್ರವೂ ಆದ ಈ ಕಥೆಯನ್ನು ಕೇಳಿದೆವು. ಕಾಣಭೂತಿಯೇ, ಅದರಿಂದ ಬಹುಕಾಲ ನಮ್ಮ ಮನಸ್ಸು ಆಶ್ಚರ್ಯದಿಂದ ಕೂಡಿ ಆನಂದವನ್ನು ಅನುಭವಿಸಿತು.

ಮಹಾಕವಿ ಸೋಮದೇವಭಟ್ಟನು ರಚಿಸಿದ

ಕಥಾಸರಿತ್ಸಾಗರದ ಕಥಾಪೀಠಲಂಬಕದ

ಮೂರನೆಯ ತರಂಗ ಮುಗಿಯಿತು.

---

ತತ್ರ ಸ ರಾಜಾ ಭೂತ್ವಾ ಮಹಾಪ್ರಭಾವೇ ಚ ಸತ್ಯತಾಂ ಪ್ರಾಪ್ತೇ ।
ನಮಯಿತ್ವಾ ತಂ ಶ್ವಶುರಂ ಶಶಾಸ ಪೃಥ್ವೀಂ ಸಮುದ್ರಾಂತಾಮ್ ॥ ೭೭

ತದಿದಂ ದಿವ್ಯಂ ನಗರಂ ಮಾಯಾರಚಿತಂ ಸಪೌರಮತ ಏವ ।
ನಾಮ್ನಾ ಪಾಟಲಿಪುತ್ರಂ ಕ್ಷೇತ್ರಂ ಲಕ್ಷ್ಮೀಸರಸ್ವತ್ಯೋಃ ॥ ೭೮
ಇತಿವರ್ಷಮುಖಾದಿಮಾಮಪೂರ್ವಾಂ ವಯಮಾಕರ್ಣ್ಯ
ಕಥಾಮತೀವ ಚಿತ್ರಾಮ್ ।
ಚಿರಕಾಲಮಭೂಮ ಕಾಣಭೂತೇ ವಿಲಸದ್ವಿಸ್ಮಯಮೋದಮಾನ –
ಚಿತ್ತಾಃ ॥ ೭೯

ಇತಿ ಮಹಾಕವಿ ಶ್ರೀ ಸೋಮದೇವಭಟ್ಟವಿರಚಿತೇ

ಕಥಾಸರಿತ್ಸಾಗರೇ ಕಥಾಪೀಠಲಂಬಕೇ ತೃತೀಯಸ್ತರಂಗಃ ।

# ನಾಲ್ಕನೆಯ ತರಂಗ

೧ ವಿಂಧ್ಯಪರ್ವತದಲ್ಲಿ ಈ ಕಥೆಯನ್ನು ಕಾಣಭೂತಿಗೆ ಹೇಳಿ ಮತ್ತೆ ವರರುಚಿಯು ಪ್ರಕೃತವೃತ್ತಾಂತವನ್ನು ಹೇಳತೊಡಗಿದನು.

## ವರರುಚಿ-ಉಪಕೋಶೆಯರ ಕಥೆ

೨. ವ್ಯಾಡಿಇಂದ್ರದತ್ತರೊಡನೆ ವಾಸಿಸುತ್ತಾ ಕ್ರಮವಾಗಿ ನಾನು ಎಲ್ಲ ವಿದ್ಯೆಗಳ ಪಾರವನ್ನು ತಲುಪುವಷ್ಟರಲ್ಲಿ ನನ್ನ ಬಾಲ್ಯ ಕಳೆದಿತ್ತು.

೩ ಒಮ್ಮೆ ಇಂದ್ರೋತ್ಸವವನ್ನು ನೋಡಲು ಹೋಗಿದ್ದ ನಾವು ಮನ್ಮಥನ ಬಾಣವಲ್ಲದ ಬೇರೆ ವಿಧದ ಅಸ್ತ್ರವೋ ಎಂಬಂತಿದ್ದ ಒಬ್ಬ ಕನ್ಯೆಯನ್ನು ನೋಡಿದೆವು.

೪. ಇವಳಾರು ಎಂದು ನಾನು ಇಂದ್ರದತ್ತನನ್ನು ಕೇಳಿದೆನು. "ಅವಳು ಉಪವರ್ಷನ ಮಗಳು ಉಪಕೋಶಾ" ಎಂದು ಅವನು ಹೇಳಿದನು.

೫ ಅವಳೂ ಸಖಿಯರಿಂದ ನನ್ನ ಬಗೆಗೆ ತಿಳಿದುಕೊಂಡು ಪ್ರೀತಿಯಿಂದ ಮನೋಹರವಾಗಿದ್ದ ನೋಟದಿಂದ ನನ್ನ ಮನಸ್ಸನ್ನು ಸೆಳೆದು ಹೇಗೋ ಕಷ್ಟದಿಂದ ತನ್ನ ಮನೆಗೆ ಹೋದಳು.

---

# ಚತುರ್ಥಸ್ತರಂಗಃ

ಇತ್ಯಾಖ್ಯಾಯ ಕಥಾಂ ಮಧ್ಯೇ ವಿಂಧ್ಯಾಂತಃ ಕಾಣಭೂತಯೇ ।
ಪುನರ್ವರರುಚಿಸ್ತಸ್ಮೈ ಪ್ರಕೃತಾರ್ಥಮವರ್ಣಯತ್ ॥ ೧
ಏವಂ ವ್ಯಾಡೀಂದ್ರದತ್ತಾಭ್ಯಾಂ ಸಹ ತತ್ರ ವಸನ್ ಕ್ರಮಾತ್ ।
ಪ್ರಾಪ್ತೋಽಹಂ ಸರ್ವವಿದ್ಯಾನಾಂ ಪಾರಮುತ್ಕ್ರಾಂತ ಶೈಶವಃ ॥ ೨
ಇಂದ್ರೋತ್ಸವಂ ಕದಾಚಿಚ್ಚ ಪ್ರೇಕ್ಷಿತುಂ ನಿರ್ಗತಾ ವಯಮ್ ।
ಕನ್ಯಾಮೇಕಾಮಪಶ್ಯಾಮ ಕಾಮಸ್ಯಾಸ್ತ್ರಮಸಾಯಕಮ್ ॥ ೩
ಇಂದ್ರದತ್ತೋ ಮಯಾ ಪೃಷ್ಟಸ್ತತಃ ಕೇಯಂ ಭವೇದಿತಿ ।
ಉಪವರ್ಷಸುತಾ ಸೇಯಮುಪಕೋಶೇತಿ ಸೋಽಬ್ರವೀತ್ ॥ ೪
ಸಾ ಸಖೀಭಿಶ್ಚ ಮಾಂ ಜ್ಞಾತ್ವಾ ಪ್ರೀತಿಪೇಶಲಯಾ ದೃಶಾ ।
ಕರ್ಷಂತೀ ಮನ್ಮನಃ ಕೃಚ್ಛ್ರಾದಗಚ್ಛದ್ ಭವನಂ ಪ್ರತಿ ॥ ೫

೬ ಅವಳ ಮುಖವು ಪೂರ್ಣಚಂದ್ರನಂತಿತ್ತು. ಶ್ರೇಷ್ಠವಾದ ನೀಲಕಮಲಗಳಂತೆ ಉತ್ತಮವಾದ ಕಣ್ಣುಗಳು. ಅವಳ ತೋಳುಗಳು ತಾವರೆ ದಂಟಿನೊಳಗಿನ ಮೃದುವಾದ ಮೃಣಾಲದಂತೆ. ಉಬ್ಬಿದ ಸ್ತನಗಳು ಅವಳಿಗೆ ಶೋಭೆಯನ್ನು ಕೊಟ್ಟಿದ್ದುವು.

೭ ಅವಳ ಕಂಠ ಶಂಖದಂತಿತ್ತು. ಹವಳದಂತೆ ಇದ್ದ ಒಸಡುಗಳಿಂದ ಶೋಭಿಸುತ್ತಿದ್ದ ಅವಳು ಮನ್ಮಥರಾಜನ ಸೌಂದರ್ಯಮಂದಿರದ ಇನ್ನೊಬ್ಬ ಲಕ್ಷ್ಮಿಯಂತಿದ್ದಳು.

೮ ಮನ್ಮಥನ ಬಾಣಗಳ ಹೊಡೆತದಿಂದ ನನ್ನ ಹೃದಯ ಸೀಳಿತ್ತು. ತೊಂಡೆಹಣ್ಣಿನಂತಿದ್ದ ಅವಳ ತುಟಿಗಳ ರಸವನ್ನು ಹೀರಬೇಕೆಂಬ ಆಸೆಯಿಂದ ನನಗೆ ಆ ರಾತ್ರಿ ನಿದ್ದೆಯೇ ಬರಲಿಲ್ಲ

೯. ಆ ಮೇಲೆ ಹೇಗೋ ನಿದ್ದೆ ಬಂದಾಗ ರಾತ್ರಿಯ ಕೊನೆಯ ಭಾಗದಲ್ಲಿ ನಾನು ಬಿಳಿಯ ಉಡುಗೆಯಿಂದ ಶೋಭಿಸುತ್ತಿದ್ದ ಒಬ್ಬ ದಿವ್ಯನಾರಿಯನ್ನು ಕನಸ್ಸಿನಲ್ಲಿ ಕಂಡೆನು. ಆಕೆ ನನಗೆ ಹೀಗೆ ಹೇಳಿದಳು.

೧೦. "ಪುತ್ರ, ಈ ಉಪಕೋಶೆಯು ನಿನ್ನ ಪೂರ್ವಜನ್ಮದ ಪತ್ನಿ. ನಿನ್ನ ಗುಣಗಳನ್ನೆಲ್ಲ ತಿಳಿದಿರುವ ಅವಳು ಬೇರೆ ಯಾವನ್ನೂ ಪತಿಯಾಗಿ ಬಯಸುವುದಿಲ್ಲ. ಆದ್ದರಿಂದ ಈ ಬಗೆಗೆ ನೀನು ಚಿಂತಿಸಬೇಕಾಗಿಲ್ಲ.

೧೧. ನಾನು ಸದಾ ನಿನ್ನ ದೇಹದಲ್ಲಿ ವಾಸಿಸುತ್ತಿರುವ ಸರಸ್ವತಿ. ನಿನ್ನ ದುಃಖವನ್ನು ನಾನು ನೋಡಲಾರೆ" ಎಂದು ಹೇಳಿ ಆ ದಿವ್ಯಸ್ತ್ರೀ ಅದೃಶ್ಯಳಾದಳು.

---

ಪೂರ್ಣಚಂದ್ರಮುಖೀ ನೀಲನೀರಜೋತ್ತಮಲೋಚನಾ ।
ಮೃಣಾಲನಾಲಲಲಿತಭುಜಾ ಪೀನಸ್ತನೋಜ್ಜ್ವಲಾ ॥ ೬
ಕಂಬುಕಂಠೀ ಪ್ರವಾಲಾಭರದನಚ್ಛದಶೋಭಿನೀ ।
ಸ್ಮರಭೂಪತಿಸೌಂದರ್ಯಮಂದಿರೇವೇಂದಿರಾಪರಾ ॥ ೭
ತತಃ ಕಾಮಶರಾಪಾತನಿರ್ಭಿನ್ನೇ ಹೃದಯೇ ನ ಮೇ ।
ನಿಶಿ ತಸ್ಯಾಮಭೂನ್ನಿದ್ರಾ ತದ್ಬಿಂಬೋಷ್ಠಪಿಪಾಸಯಾ ॥ ೮
ಕಥಂಚಿಲ್ಲಬ್ಧನಿದ್ರೋಽಹಮಪಶ್ಯಂ ರಜನಿಕ್ಷಯೇ ।
ಶುಕ್ಲಾಂಬರಧರಾಂ ದಿವ್ಯಾಂ ಸ್ತ್ರಿಯಂ ಸಾ ಮಾಮಭಾಷತ ॥ ೯
ಪೂರ್ವಭಾರ್ಯೋಪಕೋಶಾ ತೇ ಗುಣಜ್ಞಾ ನಾಪರಂ ಪತಿಮ್ ।
ಕಂಚಿದಿಚ್ಛತ್ಯತಶ್ಚಿಂತಾ ಪುತ್ರ ಕಾರ್ಯಾತ್ರ ನ ತ್ವಯಾ ॥ ೧೦
ಅಹಂ ಸದಾ ಶರೀರಾಂತರ್ವಾಸಿನೀ ತೇ ಸರಸ್ವತೀ ।
ತ್ವದ್‌ದುಃಖಂ ನೋತ್ಸಹೇ ದ್ರಷ್ಟುಮ್ ಇತ್ಯುಕ್ತ್ವಾಂತರ್ಹಿತಾಭವತ್ ॥ ೧೧

೧೨. ಆಮೇಲೆ ಎಚ್ಚೆತ್ತ ನಾನು ಧೈರ್ಯ ವಹಿಸಿದೆನು. ನನ್ನ ಪ್ರಿಯೆಯ ಮನೆಯ ಸಮೀಪದಲ್ಲಿದ್ದ ಒಂದು ಚಿಕ್ಕ ಮಾವಿನ ಮರದ ಬಳಿಗೆ ಮೆಲ್ಲನೆ ಹೋಗಿ ಅದರ ಕೆಳಗೆ ನಿಂತುಕೊಂಡೆನು.

೧೩. ಅನಂತರ ಅವಳ ಸಖಿಯೊಬ್ಬಳು ಬಂದು, ನನ್ನ ಕಾರಣದಿಂದ ಉಪಕೋಶೆಗೆ ಹೊಸ ಮನ್ಮಥಾವೇಶ ಉಂಟಾಗಿದೆ, ಅದು ಅತಿಗಾಢವಾಗಿದೆ ಎಂದು ತಿಳಿಸಿದಳು.

೧೪. ಅದರಿಂದ ನನ್ನ ಮನ್ಮಥತಾಪವು ಇಮ್ಮಡಿಯಾಯಿತು. ಆ ಸಖಿಗೆ ನಾನು ಹೇಳಿದೆ. "ಹಿರಿಯರು ಒಪ್ಪಿಸದೆ ಇದ್ದಾಗ ಸ್ವೇಚ್ಛೆಯಿಂದ ಉಪಕೋಶೆಯನ್ನು ನಾನು ಸ್ವೀಕರಿಸುವುದು ಹೇಗೆ ?

೧೫. ಅಪಕೀರ್ತಿಗಿಂತ ಸಾವೇ ಮೇಲು. ಆದ್ದರಿಂದ ನಿನ್ನ ಸಖಿ ಉಪಕೋಶೆಯ ಮನಸ್ಸು ಅವಳ ಹಿರಿಯರಿಗೆ ತಿಳಿಯುವಂತಾದರೆ ಒಳ್ಳೆಯದಾಗಬಹುದು.

೧೬. ಆದ್ದರಿಂದ ಮಂಗಳಾಂಗಿಯೇ, ಹಾಗಾಗುವಂತೆ ಮಾಡು. ನಿನ್ನ ಸಖಿಯನ್ನು ಬದುಕಿಸು." ಈ ಮಾತನ್ನು ಕೇಳಿ ಅವಳು ಹೋಗಿ ಉಪಕೋಶೆಯ ತಾಯಿಗೆ ಎಲ್ಲವನ್ನೂ ತಿಳಿಸಿದಳು.

೧೭. ಅವಳು ತನ್ನ ಪತಿ ಉಪವರ್ಷನಿಗೆ ಕೂಡಲೇ ವಿಷಯವನ್ನು ತಿಳಿಸಿದಳು. ಅವನು ಅಣ್ಣನಾದ ವರ್ಷೋಪಾಧ್ಯಾಯನಿಗೆ ಹೇಳಿದಾಗ ಅವನೂ ಅಭಿನಂದಿಸಿದನು.

೧೮. ಮದುವೆ ನಿಶ್ಚಿತವಾಯಿತು. ವರ್ಷೋಪಾಧ್ಯಾಯನ ಆದೇಶಾನುಸಾರವಾಗಿ ವ್ಯಾಡಿಯು ಕೌಶಾಂಬಿಗೆ ಹೋಗಿ ನನ್ನ ತಾಯಿಯನ್ನು ಕರೆದು ತಂದನು.

---

ತತಃ ಪ್ರಬುದ್ಧೋ ಜಾತಾಸ್ಥೋ ಗತ್ವಾತಿಷ್ಠಮಹಂ ಶನೈಃ ।
ದಯಿತಾಮಂದಿರಾಸನ್ನಬಾಲಚೂತತರೋರಧಃ ॥ ೧೨
ಅಥಾಗತ್ಯ ಸಮಾಖ್ಯಾತಂ ತತ್ಸಖ್ಯಾ ಮನ್ನಿಬಂಧನಮ್ ।
ಉದ್ಗಾಢಮುಪಕೋಶಾಯಾ ನವಾನಂಗವಿಜೃಂಭಿತಮ್ ॥ ೧೩
ತತೋಽಹಂ ದ್ವಿಗುಣೀಭೂತತಾಪಸ್ತಾಮೇವಮಬ್ರವಮ್ ।
ಅದತ್ತಾಂ ಗುರುಭಿಃ ಸ್ವೇಚ್ಛಮುಪಕೋಶಾಂ ಕಥಂ ಭಜೇ ॥ ೧೪
ವರಂ ಹಿ ಮೃತ್ಯುರ್ನಾಕೀರ್ತಿಸ್ತತ್ಸಖೀಹೃದಯಂ ತವ ।
ಗುರುಭಿರ್ಯದಿ ಬುಧ್ಯೇತ ತತ್ ಕದಾಚಿಚ್ಛಿವಂ ಭವೇತ್ ॥ ೧೫
ತದೇತತ್ ಕುರು ಭದ್ರೇ ತ್ವಂ ತಾಂ ಸಖೀಂ ಮಾಂ ಚ ಜೀವಯ ।
ತಚ್ಛ್ರುತ್ವಾ ಸಾ ಗತಾ ಸಖ್ಯಾ ಮಾತುಃ ಸರ್ವಂ ನ್ಯವೇದಯತ್ ॥ ೧೬
ತಯಾ ತತ್ ಕಥಿತಂ ಭರ್ತುರುಪವರ್ಷಸ್ಯ ತತ್ಕ್ಷಣಮ್ ।
ತೇನ ಭ್ರಾತುಶ್ಚ ವರ್ಷಸ್ಯ ತೇನ ತಚ್ಚಾಭಿನಂದಿತಮ್ ॥ ೧೭
ವಿವಾಹೇ ನಿಶ್ಚಿತೇ ಗತ್ವಾ ವ್ಯಾಡಿರಾನಯತಿ ಸ್ಮ ತಾಮ್ ।
ವರ್ಷಾಚಾರ್ಯನಿದೇಶೇನ ಕೌಶಾಂಬ್ಯಾ ಜನನೀಂ ಮಮ ॥ ೧೮

೧೯. ಅನಂತರ ಉಪಕೋಶೆಯನ್ನು ನನಗೆ ವಿಧಿವತ್ತಾಗಿ ಅವಳ ತಂದೆ ಮದುವೆ ಮಾಡಿ ಕೊಟ್ಟನು. ಆನಂತರ ಸಹೋದರ ಮತ್ತು ಹೆಂಡತಿಯ ಜೊತೆಯಲ್ಲಿ ನಾನು ಸುಖವಾಗಿದ್ದೆನು.

## ಪಾಣಿನಿಯ ಕಥೆ

೨೦. ಕಾಲ ಕಳೆಯುತ್ತಿದ್ದಂತೆ ವರ್ಷೋಪಾಧ್ಯಾಯನ ಶಿಷ್ಯವರ್ಗವು ದೊಡ್ಡದಾಯಿತು. ಅದರಲ್ಲಿ ಪಾಣಿನಿ ಎಂಬ ಅತಿದಡ್ಡಬುದ್ಧಿಯವನೊಬ್ಬನಿದ್ದನು.

೨೧. ಅವನು ಕಷ್ಟಪಟ್ಟು ಗುರುಶುಶ್ರೂಷೆಯನ್ನು ಮಾಡುತ್ತಿದ್ದನು. ವಿದ್ಯೆಯನ್ನು ಬಯಸಿ ಖಿನ್ನನಾಗಿ ವರ್ಷೋಪಾಧ್ಯಾಯನ ಹೆಂಡತಿಯ ಆದೇಶದಂತೆ ತಪಸ್ಸನ್ನು ಮಾಡಲು ಹಿಮಾಲಯಕ್ಕೆ ಹೋದನು.

೨೨. ಅಲ್ಲಿ ತೀವ್ರವಾದ ತಪಸ್ಸಿನಿಂದ ಶಿವನನ್ನು ಒಲಿಸಿ ಪಾಣಿನಿಯು ಎಲ್ಲ ವಿದ್ಯೆಗಳಿಗೂ ಆಶ್ರಯವಾದ ಹೊಸ ವ್ಯಾಕರಣವನ್ನು ಪಡೆದನು.

೨೩. ಅಲ್ಲಿಂದ ಹಿಂದಿರುಗಿ ಬಂದು ಪಾಣಿನಿಯು ನನ್ನನ್ನೇ ವಾದಕ್ಕೆ ಕರೆದನು. ನಮ್ಮಿಬ್ಬರ ವಾದವು ಏಳು ದಿನಗಳ ಕಾಲ ನಡೆಯಿತು.

೨೪. ಎಂಟನೆಯ ದಿನ ನಾನು ಅವನನ್ನು ಸೋಲಿಸಿದೆನು. ಆಗ ಆಕಾಶದಲ್ಲಿದ್ದ ಶಂಭು ಮಹಾಘೋರವಾದ ಹುಂಕಾರಶಬ್ದ ಮಾಡಿದನು.

೨೫. ಅದರಿಂದ ಭೂಲೋಕದಲ್ಲಿ ನಮ್ಮ ಐಂದ್ರವ್ಯಾಕರಣವು ಅದೃಶ್ಯವಾಯಿತು. ಆಗ ಪಾಣಿನಿಗೆ ಸೋತ ನಾವೆಲ್ಲ ಮೂರ್ಖರಂತಾದೆವು.

---

ಅಥೋಪಕೋಶಾ ವಿಧಿವತ್ ಪಿತ್ರಾ ಮೇ ಪ್ರತಿಪಾದಿತಾ ।
ತತೋ ಭ್ರಾತ್ರಾ ಗೃಹಿಣ್ಯಾ ಚ ಸಮಂ ತತ್ರಾವಸಂ ಸುಖಮ್ ॥ ೧೯
ಅಥ ಕಾಲೇನ ವರ್ಷಸ್ಯ ಶಿಷ್ಯವರ್ಗೋ ಮಹಾನಭೂತ್ ।
ತತ್ರೈಕಃ ಪಾಣಿನಿರ್ನಾಮ ಜಡಬುದ್ಧಿತರೋಽಭವತ್ ॥ ೨೦
ಸ ಶುಶ್ರೂಷಾಪರಿಕ್ಲಿಷ್ಟಃ ಪ್ರೇಷಿತೋ ವರ್ಷಭಾರ್ಯಯಾ ।
ಅಗಚ್ಛತ್ ತಪಸೇ ಖಿನ್ನೋ ವಿದ್ಯಾಕಾಮೋ ಹಿಮಾಲಯಮ್ ॥ ೨೧
ತತ್ರ ತೀವ್ರೇಣ ತಪಸಾ ತೋಷಿತಾದಿಂದುಶೇಖರಾತ್ ।
ಸರ್ವವಿದ್ಯಾಮುಖಂ ತೇನ ಪ್ರಾಪ್ತಂ ವ್ಯಾಕರಣಂ ನವಮ್ ॥ ೨೨
ತತಶ್ಚಾಗತ್ಯ ಮಾಮೇವ ವಾದಾಯಾಹ್ವಯತೇ ಸ್ಮ ಸಃ ।
ಪ್ರವೃತ್ತೇ ಚಾವಯೋರ್ವಾದೇ ಪ್ರಯಾತಾಃ ಸಪ್ತ ವಾಸರಾಃ ॥ ೨೩
ಅಷ್ಟಮೇಽಹ್ನಿ ಮಯಾ ತಸ್ಮಿನ್ ಜಿತೇ ತತ್ಸಮನಂತರಮ್ ।
ನಭಃಸ್ಥೇನ ಮಹಾಘೋರೋ ಹುಂಕಾರಃ ಶಂಭುನಾ ಕೃತಃ ॥ ೨೪
ತೇನ ಪ್ರಣಷ್ಟಮೈಂದ್ರಂ ತದಸ್ಮದ್ವ್ಯಾಕರಣಂ ಭುವಿ ।
ಜಿತಾಃ ಪಾಣಿನಿನಾ ಸರ್ವೇ ಮೂರ್ಖೀಭೂತಾ ವಯಂ ಪುನಃ ॥ ೨೫

೨೬–೨೭ ಆಗ ನನಗೆ ಬೇಸರವಾಯಿತು. ಹಿರಣ್ಯಗುಪ್ತನೆಂಬ ವ್ಯಾಪಾರಿಯ ಕೈಗೆ ನನ್ನ ಮನೆಯನ್ನು ನಡೆಸಲು ಬೇಕಾದ ಹಣವನ್ನು ಕೊಟ್ಟು ಆ ವಿಷಯವನ್ನು ಉಪಕೋಶೆಗೆ ತಿಳಿಸಿ, ನಿರಾಹಾರನಾಗಿ ಶಂಕರನನ್ನು ತಪಸ್ಸುಗಳಿಂದ ಒಲಿಸಿಕೊಳ್ಳುವುದಕ್ಕಾಗಿ ಹಿಮಾಲಯಕ್ಕೆ ಹೋದೆನು.

## ಉಪಕೋಶೆಯ ಪಾತಿವ್ರತ್ಯದ ಕಥೆ

೨೮. ನನ್ನ ಶ್ರೇಯಸ್ಸನ್ನೇ ಅಪೇಕ್ಷಿಸುತ್ತಿದ್ದ ಉಪಕೋಶೆ ಮನೆಯಲ್ಲಿದ್ದು ಪ್ರತಿದಿನವೂ ಗಂಗೆಯಲ್ಲಿ ಸ್ನಾನಮಾಡುತ್ತಾ ನಿಯತವಾಗಿ ವ್ರತಾಚರಣೆಯನ್ನು ಮಾಡುತ್ತಿದ್ದಳು.

೨೯–೩೦ ವಸಂತಕಾಲ ಬಂದಾಗ ಒಮ್ಮೆ ಅವಳು ಸ್ನಾನ ಮಾಡುವುದಕ್ಕಾಗಿ ಗಂಗಾನದಿಗೆ ಹೋಗುತ್ತಿದ್ದಳು. ಕ್ಷೀಣಶರೀರೆಯಾಗಿ ಬಿಳಿಚಿಕೊಂಡಿದ್ದರೂ ಆಕರ್ಷಕವಾಗಿದ್ದ ಅವಳು ಪಾಡ್ಯಮಿಯ ಚಂದ್ರಲೇಖೆಯಂತೆ ಜನರ ಕಣ್ಣುಗಳನ್ನು ಸೆಳೆಯುತ್ತಿದ್ದಳು. ಅವಳನ್ನು ರಾಜಪುರೋಹಿತನೂ, ಸೇನಾಧಿಪತಿಯೂ ಕುಮಾರಸಚಿವನೂ ನೋಡಿದರು.

೩೧. ಆ ಕ್ಷಣದಲ್ಲೇ ಅವರೆಲ್ಲ ಮನ್ಮಥನ ಬಾಣಗಳಿಗೆ ಈಡಾದರು. ಅಂದು ಅವಳು ಸ್ನಾನ ಮಾಡುವುದಕ್ಕೆ ಹೇಗೋ ತುಂಬ ಹೊತ್ತು ಹಿಡಿಯಿತು.

೩೨. ಸಂಜೆ ಮನೆಗೆ ಬರುತ್ತಿದ್ದ ಅವಳನ್ನು ಕುಮಾರಸಚಿವನು ಹಠದಿಂದ ಹಿಡಿದು ನಿಲ್ಲಿಸಿದನು. ಆಗ ಅವಳು ಸಮಯಸ್ಫೂರ್ತಿಯಿಂದ ಅವನಿಗೆ ಹೀಗೆ ಹೇಳಿದಳು.

---

ಅಥ ಸಂಜಾತನಿರ್ವೇದಃ ಸ್ವಗೃಹಸ್ಥಿತಯೇ ಧನಮ್ ।
ಹಸ್ತೇ ಹಿರಣ್ಯಗುಪ್ತಸ್ಯ ವಿಧಾಯ ವಣಿಜೋ ನಿಜಮ್ ॥ ೨೬

ಉಕ್ತ್ವಾ ತಚ್ಚೋಪಕೋಶಾಯೈ ಗತವಾನಸ್ಮಿ ಶಂಕರಮ್ ।
ತಪೋಭಿರಾರಾಧಯಿತುಂ ನಿರಾಹಾರೋ ಹಿಮಾಲಯಮ್ ॥ ೨೭

ಉಪಕೋಶಾ ಹಿ ಮೇ ಶ್ರೇಯಃ ಕಾಂಕ್ಷತೀ ನಿಜಮಂದಿರೇ ।
ಅತಿಷ್ಠತ್ ಪ್ರತ್ಯಹಂ ಸ್ನಾಂತೀ ಗಂಗಾಯಾಂ ನಿಯತವ್ರತಾ ॥ ೨೮

ಏಕದಾ ಸಾ ಮಧೌ ಪ್ರಾಪ್ತೇ ಕ್ಷಾಮಾ ಪಾಂಡುಮನೋರಮಾ ।
ಪ್ರತಿಪಚ್ಚಂದ್ರಲೇಖೇವ ಜನಲೋಚನಹಾರಿಣೀ ॥ ೨೯

ಸ್ನಾತುಂ ತ್ರಿಪಥಗಾಂ ಯಾಂತೀ ದೃಷ್ಟಾ ರಾಜಪುರೋಧಸಾ ।
ದಂಡಾಧಿಪತಿನಾ ಚೈವ ಕುಮಾರಸಚಿವೇನ ಚ ॥ ೩೦

ತತ್ಕ್ಷಣಾತ್ತೇ ಗತಾಃ ಸರ್ವೇ ಸ್ಮರಸಾಯಕಲಕ್ಷ್ಯತಾಮ್ ।
ಸಾಪಿ ತಸ್ಮಿನ್ ದಿನೇ ಸ್ನಾಂತೀ ಕಥಮಪ್ಯಕರೋಚ್ಚಿರಮ್ ॥ ೩೧

ಆಗಚ್ಛಂತೀಂ ಚ ತಾಂ ಸಾಯಂ ಕುಮಾರಸಚಿವೋ ಹಠಾತ್ ।
ಅಗ್ರಹೀದಥ ಸಾಪ್ಯೇನಮ್ ಅವೋಚತ್ ಪ್ರತಿಭಾವತೀ ॥ ೩೨

೩೩ '"ಅಯ್ಯಾ, ಇದು ನಿನಗೆ ಇಷ್ಟವಾಗಿರುವಂತೆಯೇ ನನಗೂ ಇಷ್ಟ. ಆದರೆ ನಾನು ಒಳ್ಳೆಯ ವಂಶದಲ್ಲಿ ಹುಟ್ಟಿದವಳು. ನನ್ನ ಗಂಡನು ಪ್ರವಾಸದಲ್ಲಿದ್ದಾನೆ.

೩೪. ಹೀಗೆ ನಾನು ನಡೆದುಕೊಳ್ಳುವುದು ಹೇಗೆ ? ಯಾರಾದರೂ ನೋಡಿಯಾರು. ಆದ್ದರಿಂದ ನಿನಗೂ ನನಗೂ ಕೆಟ್ಟದ್ದಾಗುವುದು ನಿಶ್ಚಯ.

೩೫. ಆದ್ದರಿಂದ ರಾತ್ರಿಯ ಮೊದಲನೆಯ ಯಾಮದಲ್ಲಿ ನೀನು ನಮ್ಮ ಮನೆಗೆ ಬಾ. ಆಗ ಊರಿನ ಜನರೆಲ್ಲ ವಸಂತೋತ್ಸವದಲ್ಲಿ ಮಗ್ನರಾಗಿರುತ್ತಾರೆ."

೩೬ ಹೀಗೆ ಹೇಳಿ ಅವನೊಡನೆ ಒಪ್ಪಂದವನ್ನು ಮಾಡಿಕೊಂಡು ಬಿಡುಗಡೆ ಹೊಂದಿದಳು. ಅಲ್ಲಿಂದ ಇನ್ನು ಸ್ವಲ್ಪ ದೂರ ಬರುತ್ತಲೇ ವಿಧಿಯ ನಿಯಮದಂತೆ ರಾಜಪುರೋಹಿತನು ಅವಳನ್ನು ತಡೆದನು.

೩೭ ಅದೇ ರೀತಿಯಾಗಿ ಅವನಿಗೂ ಆಕೆ ಅದೇ ದಿನ ರಾತ್ರಿಯ ಎರಡನೆಯ ಯಾಮದಲ್ಲಿ ಬರುವಂತೆ ಸಂಕೇತವನ್ನು ಮಾಡಿಕೊಂಡಳು.

೩೮. ಅವನಿಂದ ಹೇಗೋ ಬಿಡಿಸಿಕೊಂಡು ಇನ್ನೂ ಸ್ವಲ್ಪ ದೂರ ದಾಟಿ ಬರುವಾಗ ಮೂರನೆಯವನಾಗಿ ಸೇನಾಧಿಪತಿಯು ಹೆದರಿದ್ದ ಅವಳನ್ನು ತಡೆದನು.

೩೯. ಆಮೇಲೆ ಅವನಿಗೂ ಅದೇ ದಿನ ರಾತ್ರಿಯ ಮೂರನೆಯ ಯಾಮದಲ್ಲಿ ಬರುವುದಕ್ಕೆ ಸಂಕೇತವನ್ನು ಅವಳು ತಿಳಿಸಿದಳು.

---

ಅಭಿಪ್ರೇತಮಿದಂ ಭದ್ರ ಯಥಾ ತವ ತಥಾ ಮಮ ।
ಕಿಂತ್ವಹಂ ಸತ್ಕುಲೋತ್ಪನ್ನಾ ಪ್ರವಾಸಸ್ಥಿತಭರ್ತೃಕಾ ॥ ೩೩
ಕಥಮೇವಂ ಪ್ರವರ್ತೇಯ ಪಶ್ಯೇತ್ ಕೋಽಪಿ ಕದಾಚನ ।
ತತಶ್ಚ ಧ್ರುವಮಶ್ರೇಯಸ್ತ್ವಯಾ ಸಹ ಭವೇನ್ಮಮ ॥ ೩೪
ತಸ್ಮಾನ್ಮಧೂತ್ಸವಾಕ್ಷಿಪ್ತಪೌರಲೋಕೇ ಗೃಹಂ ಮಮ ।
ಆಗಂತವ್ಯಂ ಧ್ರುವಂ ರಾತ್ರೇಃ ಪ್ರಥಮೇ ಪ್ರಹರೇ ತ್ವಯಾ ॥ ೩೫
ಇತ್ಯುಕ್ತ್ವಾ ಕೃತಸಂಧಾ ಸಾ ತೇನ ಕ್ಷಿಪ್ತಾ ವಿಧೇರ್ವಶಾತ್ ।
ಯಾವತ್ ಕಿಂಚಿದ್ಗತಾ ತಾವತ್ ನಿರುದ್ಧಾ ಸಾ ಪುರೋಧಸಾ ॥ ೩೬
ತಸ್ಯಾಪಿ ತತ್ರೈವ ದಿನೇ ತದ್ವದೇವ ತಯಾ ನಿಶಿ ।
ಸಂಕೇತಕಂ ದ್ವಿತೀಯಸ್ಮಿನ್ ಪ್ರಹರೇ ಪರ್ಯಕಲ್ಪ್ಯತ ॥ ೩೭
ಮುಕ್ತಾಂ ಕಥಂಚಿತ್ ತೇನಾಪಿ ಪ್ರಯಾತಾಂ ಕಿಂಚಿದಂತರಮ್ ।
ದಂಡಾಧಿಪೋ ರುಣದ್ಧಿ ಸ್ಮ ತೃತೀಯಸ್ತಾಂ ಸುವಿಹ್ವಲಾಮ್ ॥ ೩೮
ಅಥ ತಸ್ಯಾಪಿ ದಿವಸೇ ತಸ್ಮಿನ್ನೇವ ತಥೈವ ಸಾ ।
ಸಂಕೇತಕಂ ತ್ರಿಯಾಮಾಯಾಂ ತೃತೀಯೇ ಪ್ರಹರೇ ವ್ಯಧಾತ್ ॥ ೩೯

೪೦. ಸುದೈವದಿಂದ ಅವನಿಂದಲೂ ಬಿಡಿಸಿಕೊಂಡು ನಡುಗುತ್ತಾ ಅವಳು ಮನೆಗೆ ಬಂದಳು. ತನ್ನ ದಾಸಿಯರಿಗೆ ಮಾಡಬೇಕಾದ ಕರ್ತವ್ಯದ ಬಗ್ಗೆ ಸ್ಪಷ್ಟವಾಗಿ ತಿಳಿಸಿಹೇಳಿದಳು.

೪೧. ಪತಿ ಪ್ರವಾಸದಲ್ಲಿದ್ದಾಗ ಕುಲಸ್ತ್ರೀಗೆ ಮರಣವೇ ಲೇಸು. ಅವಳ ರೂಪದಲ್ಲಿ ರುಚಿ ತೋರಿಸುವ ಜನರ ಕಣ್ಣುಗಳ ನೋಟಕ್ಕೆ ಈಡಾಗುವುದಲ್ಲ.

೪೨. ಹೀಗೆ ಆಲೋಚಿಸುತ್ತಲೂ, ಪತಿಯ ಬಗೆಗೆ ಚಿಂತಿಸುತ್ತಲೂ, ತನ್ನ ದೇಹದ ಬಗೆಗೆ ಶೋಕಪಡುತ್ತಲೂ ಉಪವಾಸದಿಂದಲೇ ಆ ಪತಿವ್ರತೆಯು ರಾತ್ರಿಯನ್ನು ಕಳೆದಳು.

೪೩. ಬೆಳಗಾದ ಮೇಲೆ ಬ್ರಾಹ್ಮಣಸತ್ಕಾರಕ್ಕಾಗಿ ಸ್ವಲ್ಪ ಹಣವನ್ನು ತರಲು ವ್ಯಾಪಾರಿ ಹಿರಣ್ಯಗುಪ್ತನ ಮನೆಗೆ ದಾಸಿಯನ್ನು ಕಳುಹಿಸಿದಳು.

೪೪. ಆ ವ್ಯಾಪಾರಿಯೂ ಏಕಾಂತದಲ್ಲಿ ಬಂದು 'ನನ್ನನ್ನು ಸೇವಿಸು, ಆಮೇಲೆ ನಿನ್ನ ಗಂಡನು ಇಟ್ಟಿರುವ ಹಣವನ್ನು ಕೊಡುವೆನು', ಎಂದನು.

೪೫–೪೬ ಆ ಮಾತನ್ನು ಕೇಳಿದಾಗ ತನ್ನ ಗಂಡನು ಹಣವನ್ನಿಟ್ಟಿರುವುದಕ್ಕೆ ಸಾಕ್ಷಿ ಇಲ್ಲವೆಂದು ಅರಿತು, ಆ ವ್ಯಾಪಾರಿಯು ಪಾಪಿ ಎಂಬುದನ್ನೂ ಕಂಡು, ಬೇಸರದಿಂದಲೂ ಕ್ರೋಧದಿಂದಲೂ ಕಂಗೆಟ್ಟು ಅದೇ ರಾತ್ರಿಯಲ್ಲಿ ಆ ವ್ಯಾಪಾರಿಗೂ ಕೊನೆಯ ಯಾಮದಲ್ಲಿ ಬರಲು ಸಂಕೇತವನ್ನು ಮಾಡಿದಳು. ಅನಂತರ ಅವನು ಅಲ್ಲಿಂದ ಹೋದನು.

---

ದೈವಾತ್ ತೇನಾಪಿ ನಿರ್ಮುಕ್ತಾ ಸಕಂಪಾ ಗೃಹಮಾಗತಾ ।
ಕರ್ತವ್ಯಾಂ ಸಾ ಸ್ವಚೇಟೀನಾಂ ಸಂವಿದಂ ಸ್ವೈರಮಬ್ರವೀತ್ ॥ ೪೦
ವರಂ ಪತ್ಯೌ ಪ್ರವಾಸಸ್ಥೇ ಮರಣಂ ಕುಲಯೋಷಿತಃ ।
ನ ತು ರೂಪಾರಮಲ್ಲೋಕಲೋಚನಾಪಾತಪಾತ್ರತಾ ॥ ೪೧
ಇತಿ ಸಂಚಿಂತಯಂತೀ ಚ ಸ್ಮರಂತೀ ಮಾಂ ನಿನಾಯ ಸಾ ।
ಶೋಚಂತೀ ಸ್ವಂ ವಪುಃ ಸಾಧ್ವೀ ನಿರಾಹಾರೈವ ತಾಂ ನಿಶಾಮ್ ॥ ೪೨
ಪ್ರಾತರ್ಬ್ರಾಹ್ಮಣಪೂಜಾರ್ಥಂ ವ್ಯಸರ್ಜಿ ವಣಿಜಸ್ತಯಾ ।
ಚೇಟೀ ಹಿರಣ್ಯಗುಪ್ತಸ್ಯ ಕಿಂಚಿನ್ಮಾರ್ಗಯಿತುಂ ಧನಮ್ ॥ ೪೩
ಆಗತ್ಯ ಸೋಽಪಿ ತಾಮೇವಮೇಕಾಂತೇ ವಣಿಗಬ್ರವೀತ್ ।
ಭಜಸ್ವ ಮಾಂ ತತೋ ಭರ್ತ್ರುಸ್ಥಾಪಿತಂ ತೇ ದದಾಮಿ ತತ್ ॥ ೪೪
ತಚ್ಛ್ರುತ್ವಾ ಸಾಕ್ಷಿರಹಿತಾಂ ಮತ್ವಾ ಭರ್ತೃಧನಸ್ಥಿತಿಮ್ ।
ವಣಿಜಂ ಪಾಪಮಾಲೋಕ್ಯ ಖೇದಾಮರ್ಷಕದರ್ಥಿತಾ ॥ ೪೫
ತಸ್ಯಾಮೇವಾತ್ರ ಸಂಕೇತಂ ರಾತ್ರೌ ತಸ್ಯಾಪಿ ಪಶ್ಚಿಮೇ ।
ಶೇಷೇ ಪತಿವ್ರತಾ ಯಾಮೇ ಸಾಕರೋದಥ ಸೋಽಗಮತ್ ॥ ೪೬

೪೭. ಅನಂತರ ಅವಳು ದಾಸಿಯರಿಂದ ತೈಲಮಿಶ್ರಿತವಾದ ಕಾಡಿಗೆಯನ್ನು ದೊಡ್ಡ ಪರಿಮಾಣದಲ್ಲಿ ಬಾನೆಯಲ್ಲಿ ಮಾಡಿಸಿ ಕಸ್ತೂರಿ ಮುಂತಾದ ವಸ್ತುಗಳನ್ನು ಬೆರೆಸಿ ಸಿದ್ಧಪಡಿಸಿದಳು.

೪೮. ಅದರಲ್ಲಿ ನಾಲ್ಕು ಬಟ್ಟೆಯ ಚೂರುಗಳನ್ನು ಅದ್ದಿ ಸಿದ್ಧಪಡಿಸಿದಳು. ಹೊರಗೆ ಅಗಳಿ ಇರುವ ದೊಡ್ಡ ಪೆಟ್ಟಿಗೆಯನ್ನೂ ಮಾಡಿಸಲಾಯಿತು.

೪೯. ಆಮೇಲೆ ವಸಂತೋತ್ಸವದ ದಿವಸ ರಾತ್ರಿಯ ಮೊದಲನೆಯ ಯಾಮದಲ್ಲಿ ಅದ್ಭುತವೇಷವನ್ನು ಧರಿಸಿ ಕುಮಾರಸಚಿವನು ಬಂದನು.

೫೦. ಯಾರಿಗೂ ಕಾಣಿಸದಂತೆ ಒಳಗೆ ಬಂದ ಅವನಿಗೆ ಉಪಕೋಶಾ ಇಂತೆಂದಳು. "ಸ್ನಾನ ಮಾಡದಿದ್ದರೆ ನಾನು ನಿನ್ನನ್ನು ಮುಟ್ಟಲಾರೆ. ಒಳಗೆ ನಡೆ, ಸ್ನಾನ ಮಾಡು."

೫೧. ಆ ಮೂಢನು ಅದಕ್ಕೆ ಒಪ್ಪಿಕೊಂಡನು. ದಾಸಿಯರು ಅವನನ್ನು ಗುಪ್ತವಾಗಿದ್ದ ಒಳಗಿನ ಮನೆಗೆ ಕರೆದೊಯ್ದರು. ಅದು ಕತ್ತಲೆಯಿಂದ ತುಂಬಿತ್ತು.

೫೨. ಅವನ ಎಲ್ಲ ಬಟ್ಟೆಗಳನ್ನೂ ಆಭರಣಗಳನ್ನೂ ತೆಗೆದುಕೊಂಡು ಸ್ನಾನಕ್ಕೆ ಒಳಗಿನ ಬಟ್ಟೆಯಾಗಿ ಉಪಯೋಗಿಸಲು ಮೊದಲು ಸಿದ್ಧಪಡಿಸಿದ್ದ ಬಟ್ಟೆಯ ಚೂರನ್ನು ಕೊಟ್ಟರು.

೫೩. ಆ ಪಾಪಿಗೆ ತಲೆಯಿಂದ ಕಾಲಿನವರೆಗೆ ಎಲ್ಲ ಅಂಗಗಳಲ್ಲೂ ಆ ಎಣ್ಣೆಕಾಡಿಗೆಯನ್ನು ಅಭ್ಯಂಗದ ರೀತಿಯಿಂದ ಬಳಿದರು. ಅವನಿಗೆ ಏನೂ ಕಾಣಿಸುತ್ತಿರಲಿಲ್ಲ.

---

ತತಃ ಸಾಕಾರಯದ್ ಭೂರಿ ಚೇಟೀಭಿಃ ಕುಂಡಕಸ್ಥಿತಮ್ ।
ಕಸ್ತೂರಿಕಾದಿಸಂಯುಕ್ತಂ ಕಜ್ಜಲಂ ತೈಲಮಿಶ್ರಿತಮ್ ॥ ೪೭
ತಲ್ಲಿಪ್ತಾಶ್ಚೇಲಖಂಡಾಶ್ಚ ಚತ್ವಾರೋ ವಿಹಿತಾಸ್ತಯಾ ।
ಮಂಜೂಷಾ ಕಾರಿತಾ ಚಾಭೂತ್ ಸ್ಥೂಲಾ ಸಬಹಿರರ್ಗಲಾ ॥ ೪೮
ಅಥ ತಸ್ಮಿನ್ ಮಹಾವೇಷೋ ವಸಂತೋತ್ಸವವಾಸರೇ ।
ಆಯಯೌ ಪ್ರಥಮೇ ಯಾಮೇ ಕುಮಾರಸಚಿವೋ ನಿಶಿ ॥ ೪೯
ಅಲಕ್ಷಿತಂ ಪ್ರವಿಷ್ಟಂ ತಮುಪಕೋಶೇದಮಬ್ರವೀತ್ ।
ಅಸ್ನಾತಂ ನ ಸ್ಪೃಶಾಮಿ ತ್ವಾಂ ತತ್ಸ್ನಾಹಿ ಪ್ರವಿಶಾಂತರಮ್ ॥ ೫೦
ಅಂಗೀಕುರ್ವನ್ ಸ ತನ್ಮೂಢಶ್ಚೇಟಿಕಾಭಿಃ ಪ್ರವೇಶಿತಃ ।
ಅಭ್ಯಂತರಗೃಹಂ ಗುಪ್ತಮಂಧಕಾರಮಯಂ ತತಃ ॥ ೫೧
ಗೃಹೀತ್ವಾ ತತ್ರ ತಸ್ಯಾಂತರ್ವಸ್ತ್ರಾಣ್ಯಾಭರಣಾನಿ ಚ ।
ಚೇಲಖಂಡಂ ತಮೇಕಂ ಚ ದತ್ವಾಂತರ್ವಾಸಸಃ ಕೃತೇ ॥ ೫೨
ಆ ಶಿರಃಪಾದಮಂಗೇಷು ತಾಭಿಸ್ತತ್ ತೈಲಕಜ್ಜಲಮ್ ।
ಅಭ್ಯಂಗಭಂಗ್ಯಾ ಪಾಪಸ್ಯ ನ್ಯಸ್ತಂ ಘನಮಪಶ್ಯತಃ ॥ ೫೩

೫೪. ಅವನ ಅಂಗ–ಅಂಗದಲ್ಲೂ ದಾಸಿಯರು ಆ ತೈಲವನ್ನು ಉಜ್ಜುತ್ತಿರುವಷ್ಟರಲ್ಲಿ ಎರಡನೆಯ ಯಾಮ ಆಯಿತು. ಆಗ ರಾಜಪುರೋಹಿತನು ಬಂದನು.

೫೫–೫೬ "ವರರುಚಿಯ ಮಿತ್ರ ಪುರೋಹಿತನು ಏತಕ್ಕೋ ಬಂದುಬಿಟ್ಟಿದ್ದಾನೆ. ಆದ್ದರಿಂದ ನೀನು ಇಲ್ಲಿರು" ಎಂದು ಹೇಳಿ ಚೇಟಿಯರು ಆ ಅವಸ್ಥೆಯಲ್ಲಿ ನಗ್ನನಾಗಿದ್ದ ಭಯಪಟ್ಟಿದ್ದ ಕುಮಾರಸಚಿವನನ್ನು ಪೆಟ್ಟಿಗೆಯೊಳಕ್ಕೆ ತಳ್ಳಿ ಹೊರಗಿನಿಂದ ಅಗಳಿಯನ್ನು ಹಾಕಿಬಿಟ್ಟರು.

೫೭–೫೮ ಆ ಪುರೋಹಿತನನ್ನೂ ಸ್ನಾನದ ನೆವದಿಂದ ಒಳಗೆ ಕತ್ತಲೆಮನೆಗೆ ಕರೆದೊಯ್ಯಲಾಯಿತು. ಹಿಂದಿನಂತೆಯೇ ಅವನ ಬಟ್ಟೆಗಳನ್ನೆಲ್ಲ ಕಳಚಿಹಾಕಿ ಧರಿಸಲು ಬಟ್ಟೆಯ ಚೂರನ್ನು ಕೊಟ್ಟು ಎಣ್ಣೆಕಾಡಿಗೆಯ ಅಂಗಮರ್ದನವನ್ನು ದಾಸಿಯರು ಮಾಡಿದರು. ಅಷ್ಟರಲ್ಲಿ ಮೂರನೆಯ ಯಾಮವಾಗಲು ಸೇನಾಧಿಪತಿಯು ಬಂದನು.

೫೯–೬೦ ಅವನು ಬಂದನೆಂದು ಭಯವನ್ನು ನಟಿಸಿದ ದಾಸಿಯರು ಆ ಪುರೋಹಿತನನ್ನೂ ಮೊದಲಿನವನ ಹಾಗೆ ಪೆಟ್ಟಿಗೆಯೊಳಕ್ಕೆ ಹಾಕಿದರು. ಪೆಟ್ಟಿಗೆಗೆ ಅಗಳಿಯನ್ನು ಹಾಕಿ ಸ್ನಾನದ ನೆಪದಿಂದ ಸೇನಾಧಿಪತಿಯನ್ನೂ ಕಾಡಿಗೆ ಎಣ್ಣೆಯ ಮರ್ದನಕ್ಕೆ ದಾಸಿಯರು ಒಳಪಡಿಸಿದರು.

---

ಅತಿಷ್ಠನ್ ಮರ್ದಯಂತ್ಯಸ್ತತ್ ಪ್ರತ್ಯಂಗಂ ಯಾವದಸ್ಯ ತಾಃ ।
ತಾವದ್ ದ್ವಿತೀಯೇ ಪ್ರಹರೇ ಸ ಪುರೋಧಾ ಉಪಾಗಮತ್ ॥ ೫೪
ಮಿತ್ರಂ ವರರುಚೇಃ ಪ್ರಾಪ್ತಃ ಕಿಮಪ್ಯೇಷ ಪುರೋಹಿತಃ ।
ತದಿಹ ಪ್ರವಿಶೇತ್ಯುಕ್ತ್ವಾ ಚೇಟ್ಯಸ್ತಾಸ್ತಂ ತಥಾವಿಧಮ್ ॥ ೫೫
ಕುಮಾರಸಚಿವಂ ನಗ್ನಂ ಮಂಜೂಷಾಯಾಂ ಸಸಂಭ್ರಮಮ್ ।
ನಿಚಿಕ್ಷಿಪುರಥಾಬಧ್ನನ್ ಅರ್ಗಲೇನ ಬಹಿಶ್ಚ ತಾಮ್ ॥ ೫೬
ಸೋಽಪಿ ಸ್ನಾನಮಿಷಾನ್ನೀತಃ ತಮಸ್ಯಂತಃ ಪುರೋಹಿತಃ ।
ತಥೈವ ಹೃತವಸ್ತ್ರಾದಿಃ ತೈಲಕಜ್ಜಲಮರ್ದನೈಃ ॥ ೫೭
ಚೇಲಖಂಡಧರಸ್ತಾವತ್ ಚೇಟಿಕಾಭಿರ್ವಿಮೋಹಿತಃ ।
ಯಾವತ್ ತೃತೀಯೇ ಪ್ರಹರೇ ದಂಡಾಧಿಪತಿರಾಗಮತ್ ॥ ೫೮
ತದಾಗಮನಜಾಚ್ಚೈವ ಚೇಟೀಭಿಃ ಸಹಸಾ ಭಯಾತ್ ।
ಆದ್ಯವತ್ ಸೋಽಪಿ ನಿಕ್ಷಿಪ್ತೋ ಮಂಜೂಷಾಯಾಂ ಪುರೋಹಿತಃ ॥ ೫೯
ತಸ್ಯ ದತ್ತ್ವಾರ್ಗಲಂ ತಾಭಿಃ ಸ್ನಾನವ್ಯಾಜಾತ್ ಪ್ರವೇಶ್ಯ ಸಃ ।
ದಂಡಾಧಿಪೋಽಪಿ ತತ್ರೈವ ತಾವತ್ ಕಜ್ಜಲಮರ್ದನೈಃ ॥ ೬೦

೬೧. ಅವನೂ ಮೋಸಹೋಗಿ ಬಟ್ಟೆಯ ಚೂರೊಂದನ್ನು ಧರಿಸಿರುವಾಗ ಕೊನೆಯ ಯಾಮದಲ್ಲಿ ವ್ಯಾಪಾರಿಯು ಬಂದನು.

೬೨. ಅವನು ನೋಡಿಬಿಡಬಹುದು ಎಂಬ ಭಯವನ್ನು ಹುಟ್ಟಿಸಿ ದಾಸಿಯರು ಸೇನಾಧಿಪತಿಯನ್ನೂ ಪೆಟ್ಟಿಗೆಯೊಳಗೆ ಹಾಕಿ ಹೊರಗಿನ ಅಗಳಿಯನ್ನು ಹಾಕಿದರು.

೬೩. ಆ ಮೂವರೂ ಅಂಧತಾಮಿಸ್ರವೆಂಬ ಕತ್ತಲೆಯ ಜಗತ್ತಿನ ವಾಸವನ್ನು ಅಭ್ಯಾಸ ಮಾಡಲು ತೊಡಗಿರುವವರಂತೆ ಪೆಟ್ಟಿಗೆಯಲ್ಲಿ ಕುಳಿತಿದ್ದು ಪರಸ್ಪರ ಸ್ಪರ್ಶವಾದರೂ ಹೆದರಿಕೆಯಿಂದ ಮಾತನಾಡಲಿಲ್ಲ.

೬೪. ಅನಂತರ ದೀಪವನ್ನು ತೋರಿಸಿ ವ್ಯಾಪಾರಿಯನ್ನು ಮನೆಯೊಳಗೆ ಬರಮಾಡಿಕೊಂಡ ಉಪಕೋಶೆಯು "ನನ್ನ ಗಂಡನು ನಿನಗೆ ಕೊಟ್ಟಿದ್ದ ಹಣವನ್ನು ಕೊಡು" ಎಂದು ಕೇಳಿದಳು.

೬೫. ಆ ಮಾತನ್ನು ಕೇಳಿ, ಮನೆ ನಿರ್ಜನವಾಗಿದ್ದುದನ್ನು ನೋಡಿ ಆ ಮೋಸಗಾರನು "ಹಿಂದೆಯೇ ನಾನು ಹೇಳಿದೆನಲ್ಲ, ನಿನ್ನ ಗಂಡನು ಇಟ್ಟಿರುವ ಧನವನ್ನು ಕೊಡುವೆನೆಂದು" ಎಂದನು.

೬೬. ಉಪಕೋಶೆಯು ಪೆಟ್ಟಿಗೆಯೊಳಗಿದ್ದವರಿಗೆ ಕೇಳಿಸುವಂತೆ "ದೇವತೆಗಳೇ, ಈ ಹಿರಣ್ಯಗುಪ್ತನ ಮಾತನ್ನು ಕೇಳಿಸಿಕೊಳ್ಳಿರಿ" ಎಂದಳು.

---

ಅನ್ಯವದ್ ವಿಪ್ರಲಬ್ಧೋಽಭೂಚ್ಚೇಲಖಂಡೈಕಕರ್ಪಟಃ ।
ಯಾವತ್ ಸ ಪಶ್ಚಿಮೇ ಯಾಮೇ ವಣಿಕ್ ತತ್ರಾಗತೋಽಭವತ್ ॥ ೬೧
ತದ್ದರ್ಶನಭಯಂ ದತ್ತ್ವಾ ಕ್ಷಿಪ್ತೋ ದಂಡಾಧಿಪೋಽಪ್ಯಥ ।
ಮಂಜೂಷಾಯಾಂ ಸ ಚೇಟೀಭಿಃ ದತ್ತ್ವಾ ಚ ಬಹಿರರ್ಗಲಮ್ ॥ ೬೨
ತೇ ಚ ತ್ರಯೋಽಂಧತಾಮಿಸ್ರವಾಸಾಭ್ಯಾಸೋದ್ಯತಾ ಇವ ।
ಮಂಜೂಷಾಯಾಂ ಭಿಯಾನ್ಯೋನ್ಯಂ ಸ್ಪರ್ಶಂ ಲಬ್ಧ್ವಾಪಿ ನಾಲಪನ್ ॥ ೬೩
ದತ್ತ್ವಾಥ ದೀಪಂ ಗೇಹೇಽತ್ರ ವಣಿಜಂ ತಂ ಪ್ರವೇಶ್ಯ ಸಾ ।
ಉಪಕೋಶಾವದದ್ ದೇಹಿ ತನ್ಮೇ ಭರ್ತ್ರಾರ್ಪಿತಂ ಧನಮ್ ॥ ೬೪
ತಚ್ಛ್ರುತ್ವಾ ಶೂನ್ಯಮಾಲೋಕ್ಯ ಗೃಹಂ ಸೋಽಪ್ಯವದಚ್ಛಠಃ ।
ಉಕ್ತಂ ಮಯಾ ದದಾಮ್ಯೇವ ಯದ್ ಭರ್ತ್ರಾ ಸ್ಥಾಪಿತಂ ಧನಮ್ ॥ ೬೫
ಉಪಕೋಶಾಪಿ ಮಂಜೂಷಾಂ ಶ್ರಾವಯಂತೀ ತತೋಽಬ್ರವೀತ್ ।
ಏತದ್ಧಿರಣ್ಯಗುಪ್ತಸ್ಯ ವಚಃ ಶೃಣುತ ದೇವತಾಃ ॥ ೬೬

೬೭. ಇಷ್ಟು ಹೇಳಿ ದೀಪವನ್ನಾರಿಸಿಬಿಟ್ಟಳು. ಬೇರೆಯವರಿಗೆ ಮಾಡಿದಂತೆ ವ್ಯಾಪಾರಿಯನ್ನೂ ಚೇಟಿಯರು ಸ್ನಾನದ ನೆಪದಿಂದ ಕಾಡಿಗೆಎಣ್ಣೆಯ ಲೇಪನಕ್ಕೆ ಒಳಪಡಿಸಿದರು.

೬೮. ಆಮೇಲೆ ರಾತ್ರಿ ಮುಗಿದು ಬೆಳಗಾಗಲು "ರಾತ್ರಿ ಕಳೆಯಿತು, ನೀನಿನ್ನು ಹೋಗು" ಎಂದು ಅವನಿಗೆ ಹೇಳಿದರು. ಅವನು ಒಪ್ಪದಿದ್ದಾಗ ದಾಸಿಯರು ಕತ್ತು ಹಿಡಿದು ಅವನನ್ನು ಹೊರಕ್ಕೆ ದಬ್ಬಿದರು.

೬೯. ಒಂದೇ ಒಂದು ತುಂಡು ಬಟ್ಟೆ ಮೈಯಲ್ಲೆಲ್ಲ ಕಪ್ಪು ಮಸಿ. ದಾರಿಯಲ್ಲಿ ಹೆಜ್ಜೆಹೆಜ್ಜೆಗೂ ನಾಯಿಗಳ ಕಚ್ಚಾಟ, ವ್ಯಾಪಾರಿ ನಾಚಿಕೆಯಿಂದ ಕುಗ್ಗಿ ಹೋಗಿ ಹೇಗೋ ಮನೆಯನ್ನು ಸೇರಿಕೊಂಡನು.

೭೦. ಅವನ ಸೇವಕರು (ಮೈಗೆ ಅಂಟಿದ್ದ) ಆ ಮಸಿಯನ್ನು ತೊಳೆದರು. ಆಮೇಲೆ ಅವರ ಎದುರಿನಲ್ಲಿ ನಿಲ್ಲುವುದಕ್ಕೂ ಅವನಿಂದಾಗಲಿಲ್ಲ. ಅವಿನಯದ ಪರಿಣಾಮ ಕಷ್ಟವಲ್ಲವೇ ?

೭೧. ಉಪಕೋಶಾ ಬೆಳಗಾದ ಮೇಲೆ ಹಿರಿಯರಿಗೂ ತಿಳಿಸದೆ ದಾಸಿಯೊಡನೆ ನಂದಮಹಾರಾಜನ ಅರಮನೆಗೆ ಹೋದಳು.

೭೨. ನನ್ನ ಗಂಡನು ನ್ಯಾಸವಾಗಿ ಇರಿಸಿದ್ದ ಹಣವನ್ನು ವ್ಯಾಪಾರಿ ಹಿರಣ್ಯಗುಪ್ತನು ಅಪಹರಿಸಲು ಯತ್ನಿಸುತ್ತಿದ್ದಾನೆ ಎಂದು ಅವಳು ಸ್ವಯಂ ರಾಜನಿಗೆ ವಿಜ್ಞಾಪಿಸಿದಳು.

---

ಇತ್ಯುಕ್ತ್ವಾ ಚೈವ ನಿರ್ವಾಪ್ಯ ದೀಪಂ ಸೋऽಪ್ಯನ್ಯವದ್ ವಣಿಕ್ ।
ಲಿಪ್ತಃ ಸ್ನಾನಾಪದೇಶೇನ ಚೇಟೀಭಿಃ ಕಜ್ಜಲೈಶ್ಚಿರಮ್ ॥ ೬೭
ಅಥ ಗಚ್ಛ ಗತಾ ರಾತ್ರಿರಿತ್ಯುಕ್ತಃ ಸ ನಿಶಾಕ್ಷಯೇ ।
ಅನಿಚ್ಛನ್ ಗಲಹಸ್ತೇನ ತಾಭಿರ್ನಿರ್ವಾಸಿತಸ್ತತಃ ॥ ೬೮
ಅಥ ಚೀರೈಕವಸನೋ ಮಷೀಲಿಪ್ತಃ ಪದೇಪದೇ ।
ಭಕ್ಷ್ಯಮಾಣಃ ಶ್ವಭಿಃ ಪ್ರಾಪ ಲಜ್ಜಮಾನೋ ನಿಜಂ ಗೃಹಮ್ ॥ ೬೯
ತತ್ರ ದಾಸಜನಸ್ಯಾಪಿ ತಾಂ ಪ್ರಕ್ಷಾಲಯತೋ ಮಷೀಮ್ ।
ನಾಶಕತ್ ಸಂಮುಖೇ ಸ್ಥಾತುಂ ಕಷ್ಟೋ ಹ್ಯವಿನಯಕ್ರಮಃ ॥ ೭೦
ಉಪಕೋಶಾಪ್ಯಥ ಪ್ರಾತಶ್ಚೇಟಿಕಾನುಗತಾ ಗತಾ ।
ಗುರೂಣಾಮನಿವೇದ್ಯೈವ ರಾಜ್ಞೋ ನಂದಸ್ಯ ಮಂದಿರಮ್ ॥ ೭೧
ವಣಿಗ್ಘಿರಣ್ಯಗುಪ್ತೋ ಮೇ ಭರ್ತ್ರಾ ನ್ಯಾಸೀಕೃತಂ ಧನಮ್ ।
ಜಿಹೀರ್ಷತೀತಿ ವಿಜ್ಞಪ್ತಸ್ತತ್ರ ರಾಜಾ ತಯಾ ಸ್ವಯಮ್ ॥ ೭೨

೭೩. ರಾಜನು ವ್ಯಾಪಾರಿಯನ್ನು ವಿಚಾರಿಸಲು ಅಲ್ಲಿಗೇ ಕರೆಸಿದನು. ಅವನು "ಸ್ವಾಮಿ, ಇವಳಿಗೆ ಕೊಡಬೇಕಾದ ಹಣ ನನ್ನ ಕೈಯಲ್ಲಿ ಯಾವುದೂ ಇಲ್ಲ" ಎಂದು ಹೇಳಿದನು.

೭೪. ಆಗ ಉಪಕೋಶಾ ಹೀಗೆಂದಳು. "ದೇವ, ನನಗೆ ಸಾಕ್ಷಿಗಳಿದ್ದಾರೆ. ನನ್ನ ಪತಿ ದೇವತೆಗಳನ್ನು ದೊಡ್ಡ ಪೆಟ್ಟಿಗೆಯಲ್ಲಿರಿಸಿ ಹೋಗಿದ್ದಾನೆ.

೭೫. ಈ ವ್ಯಾಪಾರಿ ಆ ದೇವತೆಗಳ ಎದುರಿಗೆ ಹಣಕೊಡುವುದಾಗಿ ಒಪ್ಪಿಕೊಂಡಿದ್ದಾನೆ. ಆ ಪೆಟ್ಟಿಗೆಯನ್ನು ಇಲ್ಲಿಗೆ ತರಿಸಿ ತಾವು ಆ ದೇವತೆಗಳನ್ನೇ ಕೇಳಬಹುದು."

೭೬. ಅದನ್ನು ಕೇಳಿ ಆಶ್ಚರ್ಯದಿಂದ ರಾಜನು ಆ ಪೆಟ್ಟಿಗೆಯನ್ನು ತರಲು ಆದೇಶವನ್ನಿತ್ತನು. ಆಗ ಕ್ಷಣಮಾತ್ರದಲ್ಲೇ ಅನೇಕ ಮಂದಿ ಹೋಗಿ ಆ ಪೆಟ್ಟಿಗೆಯನ್ನು ಅಲ್ಲಿಗೆ ತಂದರು.

೭೭. ಆಗ ಉಪಕೋಶಾ ಹೇಳಿದಳು. "ದೇವತೆಗಳೇ, ಸತ್ಯವನ್ನು ಹೇಳಿರಿ. ಈ ವ್ಯಾಪಾರಿ ಏನು ನುಡಿದನು ? ಅದನ್ನು ಹೇಳಿ ನೀವು ನಿಮ್ಮ ನಿವಾಸಕ್ಕೆ ತೆರಳಿರಿ.

೭೮. ಇಲ್ಲದಿದ್ದರೆ ನಿಮ್ಮನ್ನು ಸುಟ್ಟುಹಾಕುತ್ತೇನೆ ಅಥವಾ ಸಭೆಯಲ್ಲಿ ನೀವಾರೆಂಬುದನ್ನು ತೆರೆದು ತೋರಿಸುತ್ತೇನೆ." ಅದನ್ನು ಕೇಳಿ ಪೆಟ್ಟಿಗೆಯೊಳಗಿದ್ದವರು ಹೆದರಿ ಮಾತನಾಡಿದರು.

೭೯. "ಇದು ಸತ್ಯ. ನಮ್ಮೆದುರಿನಲ್ಲೇ ಇವನು ಹಣವನ್ನು ಕೊಡಲು ಒಪ್ಪಿಕೊಂಡಿದ್ದನು." ಆಗ ನಿರುತ್ತರನಾಗಿ ವ್ಯಾಪಾರಿ ಎಲ್ಲವನ್ನೂ ಅಂಗೀಕರಿಸಿದನು.

---

ತೇನ ತಚ್ಚ ಪರಿಜ್ಞಾತುಂ ತತ್ರೈವಾನಾಯಿತೋ ವಣಿಕ್ ।
ಮದ್ಧಸ್ತೇ ಕಿಂಚಿದಪ್ಯಸ್ಯಾ ದೇವ ನಾಸ್ತೀತ್ಯಭಾಷತ ॥ ೭೩
ಉಪಕೋಶಾ ತತೋಽವಾದೀತ್ ಸಂತಿ ಮೇ ದೇವ ಸಾಕ್ಷಿಣಃ ।
ಮಂಜೂಷಾಯಾಂ ಗತಃ ಕ್ಷಿಪ್ತ್ವಾ ಭರ್ತಾ ಮೇ ಗೃಹದೇವತಾಃ ॥ ೭೪
ಸ್ವಾಚಾ ಪುರತಸ್ತಾಸಾಮನೇನಾಂಗೀಕೃತಂ ಧನಮ್ ।
ತಾಮಾನಾಯ್ಯೇಹ ಮಂಜೂಷಾಂ ಪೃಚ್ಛ್ಯಂತಾಂ ದೇವತಾಸ್ತ್ವಯಾ ॥ ೭೫
ತಚ್ಛ್ರುತ್ವಾ ವಿಸ್ಮಯಾದ್ರಾಜಾ ತದಾನಯನಮಾದಿಶತ್ ।
ತತಃ ಕ್ಷಣಾತ್ ಸಾ ಮಂಜೂಷಾ ಪ್ರಾಪಿತಾ ಬಹುಭಿರ್ಜನೈಃ ॥ ೭೬
ಅಥೋಪಕೋಶಾ ವಕ್ತಿ ಸ್ಮ ಸತ್ಯಂ ವದತ ದೇವತಾಃ ।
ಯದುಕ್ತಂ ವಣಿಜಾನೇನ ತತೋ ಯಾತ ನಿಜಂ ಗೃಹಮ್ ॥ ೭೭
ನೋ ಚೇದ್ದಹಾಮ್ಯಹಂ ಯುಷ್ಮಾನ್ ಸದಸ್ಯುದ್ಘಾಟಯಾಮಿ ವಾ ।
ತಚ್ಛ್ರುತ್ವಾ ಭಯಭೀತಾಸ್ತೇ ಮಂಜೂಷಾಸ್ಥಾ ಬಭಾಷಿರೇ ॥ ೭೮
ಸತ್ಯಂ ಸಮಕ್ಷಮಸ್ಮಾಕಮನೇನಾಂಗೀಕೃತಂ ಧನಮ್ ।
ತತೋ ನಿರುತ್ತರಃ ಸರ್ವಂ ವಣಿಕ್ ತತ್ ಪ್ರತ್ಯಪದ್ಯತ ॥ ೭೯

೮೦. ರಾಜನಿಗೆ ಕುತೂಹಲ ಅಧಿಕವಾಗಿ ಉಪಕೋಶೆಯನ್ನು ಕೇಳಿ ಪೆಟ್ಟಿಗೆಯ ಅಗಳಿಯನ್ನು ತೆಗೆದು ಸಭೆಯಲ್ಲೇ ಅದರ ಮುಚ್ಚಳವನ್ನು ತೆರೆಯಲಾಯಿತು.

೮೧. ಮೂರು ಕತ್ತಲೆಯ ಉಂಡೆಗಳಂತಿದ್ದ ಆ ಮೂವರನ್ನೂ ಪೆಟ್ಟಿಗೆಯಿಂದ ಹೊರತೆಗೆಯಲಾಯಿತು. ಮಂತ್ರಿಗಳೂ ರಾಜನೂ ಅವರನ್ನು ತುಂಬ ಕಷ್ಟದಿಂದ ಗುರುತಿಸುವಂತಾಯಿತು.

೮೨. ಇದೇನಿದು ಎಂದು ಆಶ್ಚರ್ಯದಿಂದ ಎಲ್ಲರೂ ನಕ್ಕರು. ರಾಜನು ಕೇಳಿದಾಗ ಉಪಕೋಶಾ ಸಮಸ್ತ ವೃತ್ತಾಂತವನ್ನೂ ತಿಳಿಸಿದಳು.

೮೩. ಶೀಲದ ರಕ್ಷಣೆಯಲ್ಲಿರುವ ಕುಲನಾರಿಯರ ಚರಿತ್ರವು ಊಹಾತೀತ ಎಂದು ಹೇಳುತ್ತಾ ಸಭಾಸದರೆಲ್ಲರೂ ಉಪಕೋಶೆಯನ್ನು ಹೊಗಳಿದರು.

೮೪. ಪರನಾರಿಗೆ ಆಸೆಪಟ್ಟ ಆ ಮೂವರ ಸರ್ವಸ್ವವನ್ನೂ ಕಿತ್ತುಕೊಂಡು ರಾಜನು ಅವರನ್ನೆಲ್ಲ ದೇಶದಿಂದ ಗಡೀಪಾರು ಮಾಡಿದನು. ಕೆಟ್ಟ ನಡತೆ ಯಾರಿಗೆ ತಾನೆ ಒಳ್ಳೆಯದನ್ನು ತರುತ್ತದೆ ?

೮೫. 'ನೀನು ನನ್ನ ತಂಗಿ' ಎಂದು ಹೇಳಿ ರಾಜನು ಉಪಕೋಶೆಗೆ ಹೆಚ್ಚು ಸಂಪತ್ತನ್ನು ನೀಡಿ ಕಳುಹಿಸಿದನು. ಆಕೆ ತನ್ನ ಮನೆಗೆ ಬಂದಳು.

೮೬. ಈ ಘಟನೆಯ ಬಗೆಗೆ ತಿಳಿದುಕೊಂಡ ವರ್ಷ ಮತ್ತು ಉಪವರ್ಷ ಇಬ್ಬರೂ ಆ ಪತಿವ್ರತೆಯನ್ನು ಅಭಿನಂದಿಸಿದರು. ಆ ಊರಿನ ಎಲ್ಲ ಜನರೂ ವಿಸ್ಮಿತರಾಗಿ ಮುಗುಳುನಗುವಂತಾಯಿತು.

---

ಉಪಕೋಶಾಮಥಾಭ್ಯರ್ಥ್ಯ ರಾಜ್ಞಾ ತ್ವತಿಕುತೂಹಲಾತ್ ।
ಸದಸ್ಯುದ್ಘಾಟಿತಾ ತತ್ರ ಮಂಜೂಷಾ ಸ್ಫೋಟಿತಾರ್ಗಲಾ ॥ ೮೦
ನಿಷ್ಕೃಷ್ಟಾಸ್ತೇಽಪಿ ಪುರುಷಾಸ್ತಮಃಪಿಂಡಾ ಇವ ತ್ರಯಃ ।
ಕೃಚ್ಛ್ರಾಚ್ಚ ಪ್ರತ್ಯಭಿಜ್ಞಾತಾ ಮಂತ್ರಿಭಿರ್ಭೂಭೃತಾ ತಥಾ ॥ ೮೧
ಪ್ರಹಸತ್ಸ್ವಥ ಸರ್ವೇಷು ಕಿಮೇತದಿತಿ ಕೌತುಕಾತ್ ।
ರಾಜ್ಞಾ ಪೃಷ್ಟಾ ಸತೀ ಸರ್ವಮುಪಕೋಶಾ ಶಶಂಸ ತತ್ ॥ ೮೨
ಅಚಿಂತ್ಯಂ ಶೀಲಗುಪ್ತಾನಾಂ ಚರಿತಂ ಕುಲಯೋಷಿತಾಮ್ ।
ಇತಿ ಚಾಭಿನನಂದುಸ್ತಾಮುಪಕೋಶಾಂ ಸಭಾಸದಃ ॥ ೮೩
ತತಸ್ತೇ ಹೃತಸರ್ವಸ್ವಾಃ ಪರದಾರೈಷಿಣೋಽಖಿಲಾಃ ।
ರಾಜ್ಞಾ ನಿರ್ವಾಸಿತಾ ದೇಶಾದ್ ಅಶೀಲಂ ಕಸ್ಯ ಭೂತಯೇ ॥ ೮೪
ಭಗಿನೀ ಮೇ ತ್ವಮಿತ್ಯುಕ್ತ್ವಾ ದತ್ತ್ವಾ ಪ್ರೀತ್ಯಾ ಧನಂ ಬಹು ।
ಉಪಕೋಶಾಪಿ ಭೂಪೇನ ಪ್ರೇಷಿತಾ ಗೃಹಮಾಗಮತ್ ॥ ೮೫
ವರ್ಷೋಪವರ್ಷೌ ತದ್ ಬುದ್ಧ್ವಾ ಸಾಧ್ವೀಂ ತಾಮಭ್ಯನಂದತಾಮ್ ।
ಸರ್ವಶ್ಚ ವಿಸ್ಮಯಸ್ಮೇರಃ ಪುರೇ ತತ್ರಾಭವಜ್ಜನಃ ॥ ೮೬

೭೭. ಇದೇ ಕಾಲದಲ್ಲಿ ನಾನು ಹಿಮಾಲಯದಲ್ಲಿ ಅತಿತೀವ್ರವಾದ ತಪಸ್ಸಿನಿಂದ ಪಾರ್ವತೀಪತಿಯನ್ನು ಆರಾಧಿಸಿದೆನು.

೭೮. ಭಗವಾನ್ ಶಿವನು ನನಗೂ ಅದೇ ಪಾಣಿನೀಯ ವ್ಯಾಕರಣಶಾಸ್ತ್ರವನ್ನು ಅನುಗ್ರಹಿಸಿದನು. ಭಗವಂತನ ಇಚ್ಛಾನುಸಾರವಾಗಿ ನಾನು ಆ ಶಾಸ್ತ್ರವನ್ನು ಪೂರ್ಣಗೊಳಿಸಿದೆನು.

೭೯. ಚಂದ್ರಶೇಖರನಾದ ಶಿವನ ಅನುಗ್ರಹವೆಂಬ ಅಮೃತದಿಂದ ತುಂಬಿ ತುಳುಕುತ್ತಿದ್ದ ನಾನು ದಾರಿಯ ಆಯಾಸವೇ ತಿಳಿಯದಂತೆ ಮನೆಗೆ ಹಿಂದಿರುಗಿ ಬಂದೆನು.

೮೦. ತಾಯಿಗೂ ಹಿರಿಯರಿಗೂ ಪಾದವಂದನೆಯನ್ನು ಮಾಡಿ ಅನಂತರ ಉಪಕೋಶೆಯ ಅದ್ಭುತವಾದ ಮಹಾವೃತ್ತಾಂತವನ್ನು ಕೇಳಿದೆನು.

೮೧. ಅವಳಲ್ಲಿ ನನಗೆ ಸಹಜಪ್ರೇಮಗೌರವಗಳೂ ಮನಸ್ಸಿನಲ್ಲಿ ಆನಂದವಿಸ್ಮಯಗಳೂ ಹುಟ್ಟಿ ಪರಾಕಾಷ್ಠೆಯನ್ನು ಮುಟ್ಟಿದುವು.

೮೨. ವರ್ಷೋಪಾಧ್ಯಾಯನು ನನ್ನ ಬಾಯಿಂದ ಹೊಸ ವ್ಯಾಕರಣವನ್ನು ಕೇಳಲು ಬಯಸಿದನು. ಅನಂತರ ಕುಮಾರಸ್ವಾಮಿಯೇ ಅವನಿಗೆ ಅದನ್ನು ಪ್ರಕಾಶಪಡಿಸಿದನು.

೮೩. ಆಮೇಲೆ ವ್ಯಾಡಿ ಮತ್ತು ಇಂದ್ರದತ್ತರು ಗುರುದಕ್ಷಿಣೆಯ ಬಗೆಗೆ ವಿಜ್ಞಾಪಿಸಿದಾಗ ಗುರು ವರ್ಷೋಪಾಧ್ಯಾಯನು "ಒಂದು ಕೋಟಿ ಹೊನ್ನನ್ನು ಸಮರ್ಪಿಸಿ' ಎಂದನು.

---

ಅತ್ರಾಂತರೇ ತುಷಾರಾದ್ರೌ ಕೃತ್ವಾ ತೀವ್ರತರಂ ತಪಃ ।
ಆರಾಧಿತೋ ಮಯಾ ದೇವೋ ವರದಃ ಪಾರ್ವತೀಪತಿಃ ॥ ೭೭
ತದೇವ ತೇನ ಶಾಸ್ತ್ರಂ ಮೇ ಪಾಣಿನೀಯಂ ಪ್ರಕಾಶಿತಮ್ ।
ತದಿಚ್ಛಾನುಗ್ರಹಾದೇವ ಮಯಾ ಪೂರ್ಣೀಕೃತಂ ಚ ತತ್ ॥ ೭೮
ತತೋऽಹಂ ಗೃಹಮಾಗಚ್ಛಮಜ್ಞಾತಾಧ್ವಪರಿಶ್ರಮಃ ।
ನಿಶಾಕರಕಲಾಮೌಲಿಪ್ರಸಾದಾಮೃತನಿರ್ಭರಃ ॥ ೭೯
ಅಥ ಮಾತುರ್ಗುರೂಣಾಂ ಚ ಕೃತಪಾದಾಭಿವಂದನಃ ।
ತತ್ರೋಪಕೋಶಾವೃತ್ತಾಂತಂ ತಮಶ್ರೌಷಂ ಮಹಾದ್ಭುತಮ್ ॥ ೮೦
ತೇನ ಮೇ ಪರಮಾಂ ಭೂಮಿಮಾತ್ಮನ್ಯಾನಂದವಿಸ್ಮಯೌ ।
ತಸ್ಯಾಂ ಚ ಸಹಜಸ್ನೇಹಬಹುಮಾನಾವಗಚ್ಛತಾಮ್ ॥ ೮೧
ವರ್ಷೋऽಥ ಮನ್ಮುಖಾದೈಚ್ಛತ್ ಶ್ರೋತುಂ ವ್ಯಾಕರಣಂ ನವಮ್ ।
ತತಃ ಪ್ರಕಾಶಿತಂ ಸ್ವಾಮಿಕುಮಾರೇಣೈವ ತಸ್ಯ ತತ್ ॥ ೮೨
ತತೋ ವ್ಯಾಡೀಂದ್ರದತ್ತಾಭ್ಯಾಂ ವಿಜ್ಞಪ್ತೋ ದಕ್ಷಿಣಾಂ ಪ್ರತಿ ।
ಗುರುರ್ವರ್ಷೋऽಬ್ರವೀತ್ ಸ್ವರ್ಣಕೋಟಿರ್ಮೇ ದೀಯತಾಮಿತಿ ॥ ೮೩

೯೪. ಗುರುವಿನ ಮಾತನ್ನು ಒಪ್ಪಿಕೊಂಡು ಅವರಿಬ್ಬರೂ ನನಗೆ ಹೇಳಿದರು. "ಮಿತ್ರ ಬಾ. ನಂದರಾಜನಿಂದ ಗುರುದಕ್ಷಿಣೆಯ ಹಣವನ್ನು ಯಾಚಿಸೋಣ.

೯೫. ಬೇರೆ ಯಾರಿಂದಲೂ ನಮಗೆ ಇಷ್ಟು ಹೊನ್ನು ಸಿಗಲಾರದು. ಹೋಗೋಣ. ಆ ನಂದರಾಜನು ತೊಂಬತ್ತೊಂಬತ್ತು ಕೋಟಿ ಹೊನ್ನಿನ ಒಡೆಯ.

೯೬. ಹಿಂದೆ ಅವನು ಉಪಕೋಶೆಯನ್ನು ಧರ್ಮಭಗಿನೀ ಎಂದು ತನ್ನ ಮಾತಿನಲ್ಲೇ ಸ್ವೀಕರಿಸಿದ್ದಾನೆ. ಆದ್ದರಿಂದ ಅವನು ನಿನ್ನ ಶ್ಯಾಲ (ಹೆಂಡತಿಯ ಸೋದರ). ನಿನ್ನ ಗುಣಗಳ ಕಾರಣದಿಂದಲೂ ಸ್ವಲ್ಪ ಸಿಕ್ಕಬಹುದು.'

೯೭. ಹೀಗೆ ನಿಶ್ಚಯಿಸಿದ ನಾವು ಮೂವರು ಸಬ್ರಹ್ಮಚಾರಿಗಳು (ಒಬ್ಬನೇ ಗುರುವಿನ ಶಿಷ್ಯರು) ಅಯೋಧ್ಯೆಯಲ್ಲಿದ್ದ ನಂದರಾಜನ ಸೇನಾನಿವೇಶಕ್ಕೆ ಹೋದೆವು.

೯೮. ನಾವು ಅಲ್ಲಿಗೆ ಹೋದ ಘಳಿಗೆಯಲ್ಲೇ ಆ ರಾಜನು ಮರಣವನ್ನಪ್ಪಿದನು. ನಮಗೆ ವಿಷಾದವೂ ರಾಷ್ಟ್ರದಲ್ಲಿ ಕೋಲಾಹಲವೂ ಉಂಟಾದುವು.

೯೯. ಯೋಗಸಿದ್ಧಿಯನ್ನು ಪಡೆದಿದ್ದ ಇಂದ್ರದತ್ತನು ಆ ಕ್ಷಣವೇ ಹೇಳಿದನು. "ಸತ್ತಿರುವ ರಾಜನ ಶರೀರದೊಳಕ್ಕೆ ನಾನು ಪ್ರವೇಶಿಸುತ್ತೇನೆ.

೧೦೦. ಆಗ ನನ್ನ ಬಳಿಗೆ ವರರುಚಿ ಯಾಚಕನಾಗಿ ಬರಲಿ. ನಾನು ಅವನಿಗೆ ಹೊನ್ನನ್ನು ಕೊಡುತ್ತೇನೆ. ನನ್ನ ದೇಹವನ್ನು ನಾನು ಹಿಂದಿರುಗಿ ಬಂದು ಸೇರಿಕೊಳ್ಳುವವರೆಗೆ ವ್ಯಾಡಿಯು ಕಾಪಾಡಲಿ."

---

ಅಂಗೀಕೃತ್ಯ ಗುರೋರ್ವಾಕ್ಯಂ ತೌ ಚ ಮಾಮಿತ್ಯವೋಚತಾಮ್ ।
ಏಹಿ ರಾಜ್ಞಃ ಸಖೇ ನಂದಾದ್ ಯಾಚಿತುಂ ಗುರುದಕ್ಷಿಣಾಮ್ ॥ ೯೪

ಗಚ್ಛಾಮೋ ನಾನ್ಯತೋಽಸ್ಮಾಭಿರಿಯತ್ ಕಾಂಚನಮಾಪ್ಯತೇ ।
ನವಾಧಿಕಾಯಾ ನವತೇಃ ಕೋಟೀನಾಮಧಿಪೋ ಹಿ ಸಃ ॥ ೯೫

ವಾಚಾ ತೇನೋಪಕೋಶಾ ಚ ಪ್ರಾಗ್ ಧರ್ಮಭಗಿನೀ ಕೃತಾ ।
ಅತಃ ಶ್ಯಾಲಃ ಸ ತೇ ಕಿಂಚಿತ್ ತ್ವದ್ಗುಣೈಃ ಸಮವಾಪ್ಯತೇ ॥ ೯೬

ಇತಿ ನಿಶ್ಚಿತ್ಯ ನಂದಸ್ಯ ಭೂಪತೇಃ ಕಟಕಂ ವಯಮ್ ।
ಅಯೋಧ್ಯಾಸ್ಥಮಗಚ್ಛಾಮ ತ್ರಯಃ ಸಬ್ರಹ್ಮಚಾರಿಣಃ ॥ ೯೭

ಪ್ರಾಪ್ತಮಾತ್ರೇಷು ಚಾಸ್ಮಾಸು ಸ ರಾಜಾ ಪಂಚತಾಂ ಗತಃ ।
ರಾಷ್ಟ್ರೇ ಕೋಲಾಹಲಂ ಜಾತಂ ವಿಷಾದೇನ ಸಹೈವ ನಃ ॥ ೯೮

ಅವೋಚದಿಂದ್ರದತ್ತೋಽಥ ತತ್ಕ್ಷಣಂ ಯೋಗಸಿದ್ಧಿಮಾನ್ ।
ಗತಾಸೋರಸ್ಯ ಭೂಪಸ್ಯ ಶರೀರಂ ಪ್ರವಿಶಾಮ್ಯಹಮ್ ॥ ೯೯

ಅರ್ಥೀ ವರರುಚಿರ್ಮೇಽಸ್ತು ದಾಸ್ಯಾಮ್ಯಸ್ಮೈ ಚ ಕಾಂಚನಮ್ ।
ವ್ಯಾಡೀ ರಕ್ಷತು ಮೇ ದೇಹಂ ತತಃ ಪ್ರತ್ಯಾಗಮಾವಧಿ ॥ ೧೦೦

೧೧೧. ಇಷ್ಟು ಹೇಳಿ ಇಂದ್ರದತ್ತನು ನಂದರಾಜನ ಶರೀರವನ್ನು ಪ್ರವೇಶಿಸಿದನು. ರಾಜನು ಮತ್ತೆ ಬದುಕಿ ಬಂದನೆಂದು ರಾಜ್ಯದಲ್ಲಿ ಉತ್ಸವಗಳು ನಡೆದುವು.

೧೧೨. ನಿರ್ಜನವಾಗಿದ್ದ ಒಂದು ದೇವಾಲಯದಲ್ಲಿ ಇಂದ್ರದತ್ತನ ದೇಹವನ್ನು ವ್ಯಾಡಿಯು ನೋಡಿಕೊಳ್ಳುತ್ತಿರಲು ನಾನು ರಾಜನ ಅರಮನೆಗೆ ಹೋದೆನು.

೧೧೩. ಸಭೆಗೆ ಪ್ರವೇಶಮಾಡಿ ಸ್ವಸ್ತಿಯನ್ನು ಹೇಳಿ ಅನಂತರ ಯೋಗನಂದನನ್ನು ನಾನು ಗುರುದಕ್ಷಿಣೆಗಾಗಿ ಕೋಟಿಹೊನ್ನುಗಳನ್ನು ಕೊಡಬೇಕೆಂದು ಬೇಡಿದೆನು.

೧೧೪. ಆಗ ಯೋಗನಂದನು ಸತ್ಯನಂದನ ಮಂತ್ರಿ ಶಕಟಾಲನನ್ನು ಕುರಿತು "ಇವನಿಗೆ ಕೋಟಿ ಹೊನ್ನುಗಳನ್ನು ಕೊಡಿಸು" ಎಂದು ಆದೇಶಿಸಿದನು.

೧೧೫. ಸತ್ತ ರಾಜನು ಜೀವಿಸಿದ್ದನ್ನೂ, ತತ್ಕ್ಷಣವೇ ಯಾಚಕನು ಬಂದುದನ್ನೂ ನೋಡಿದ ಮಂತ್ರಿಯು ಏನು ನಡೆದಿರಬೇಕೆಂಬುದನ್ನು ಊಹಿಸಿಬಿಟ್ಟನು. ಬುದ್ಧಿವಂತರಿಗೆ ತಿಳಿಯಲಾರದ್ದು ಏನಿದೆ ?

೧೧೬. "ಸ್ವಾಮಿ, ಇವನಿಗೆ ಹಣವನ್ನು ಕೊಡುವೆನು" ಎಂದು ಹೇಳಿದ ಮಂತ್ರಿ ಅನಂತರ ಹೀಗೆ ಆಲೋಚಿಸಿದನು. "ನಂದನ ಮಗನು ಇನ್ನೂ ಮಗು. ರಾಜ್ಯಕ್ಕೆ ಅನೇಕ ಶತ್ರುಗಳಿದ್ದಾರೆ.

೧೧೭. ಆದ್ದರಿಂದ ರಾಜನ ಈ ಶರೀರವನ್ನೇ ರಕ್ಷಿಸುವೆನು." ಹೀಗೆ ನಿಶ್ಚಯಿಸಿ ಅವನು ಕೂಡಲೇ ಊರಿನಲ್ಲಿದ್ದ ಎಲ್ಲ ಹೆಣಗಳನ್ನೂ ಸುಡಿಸಿದನು.

---

ಇತ್ಯುಕ್ತ್ವಾ ನಂದದೇಹಾಂತರಿಂದ್ರದತ್ತಃ ಸಮಾವಿಶತ್ ।
ಪ್ರತ್ಯುಜ್ಜೀವತಿ ಭೂಪೇ ಚ ರಾಷ್ಟ್ರೇ ತತ್ರೋತ್ಸವೋಽಭವತ್ ॥ ೧೧೧
ಶೂನ್ಯೇ ದೇವಗೃಹೇ ದೇಹಮಿಂದ್ರದತ್ತಸ್ಯ ರಕ್ಷಿತುಮ್ ।
ವ್ಯಾಡೌ ಸ್ಥಿತೇ ಗತೋಽಭೂವಮಹಂ ರಾಜಕುಲಂ ತದಾ ॥ ೧೧೨
ಪ್ರವಿಶ್ಯ ಸ್ವಸ್ತಿಕಾರಂ ಚ ವಿಧಾಯ ಗುರುದಕ್ಷಿಣಾಮ್ ।
ಯೋಗನಂದೋ ಮಯಾ ತತ್ರ ಹೇಮಕೋಟಿಂ ಸ ಯಾಚಿತಃ ॥ ೧೧೩
ತತಃ ಸ ಶಕಟಾಲಾಖ್ಯಂ ಸತ್ಯನಂದಸ್ಯ ಮಂತ್ರಿಣಮ್ ।
ಸುವರ್ಣಕೋಟಿಮೇತಸ್ಮೈ ದಾಪಯೇತಿ ಸಮಾದಿಶತ್ ॥ ೧೧೪
ಮೃತಸ್ಯ ಜೀವಿತಂ ದೃಷ್ಟ್ವಾ ಸದ್ಯಶ್ಚ ಪ್ರಾಪ್ತಿಮರ್ಥಿನಃ ।
ಸ ತತ್ತ್ವಂ ಜ್ಞಾತವಾನ್ ಮಂತ್ರೀ ಕಿಮಜ್ಞೇಯಂ ಹಿ ಧೀಮತಾಮ್ ॥ ೧೧೫
ದೇವ ದೀಯತ ಇತ್ಯುಕ್ತ್ವಾ ಸ ಚ ಮಂತ್ರೀತ್ಯಚಿಂತಯತ್ ।
ನಂದಸ್ಯ ತನಯೋ ಬಾಲೋ ರಾಜ್ಯಂ ಚ ಬಹುಶತ್ರುಮತ್ ॥ ೧೧೬
ತತ್ಸಂಪ್ರತ್ಯಸ್ಯ ರಕ್ಷಾಮಿ ತಸ್ಯ ದೇಹಮಪೀದೃಶಮ್ ।
ನಿಶ್ಚಿತ್ಯೈತತ್ ಸ ತತ್ಕಾಲಂ ಶವಾನ್ ಸರ್ವಾನ್ ಅದಾಹಯತ್ ॥ ೧೧೭

೧೦೮. ಹೆಣಗಳನ್ನು ಹುಡುಕುತ್ತಿದ್ದ ಗೂಢಚಾರರು ದೇವಾಲಯದಲ್ಲಿದ್ದ ಇಂದ್ರದತ್ತನ ದೇಹವನ್ನು ನೋಡಿ ವ್ಯಾಡಿಯನ್ನು ಪಕ್ಕಕ್ಕೆ ನೂಕಿ ಅದನ್ನೂ ಸುಟ್ಟು ಹಾಕಿದರು.

೧೦೯. ಈ ಮಧ್ಯದಲ್ಲಿ ಕೋಟಿಸುವರ್ಣದಾನದ ಬಗೆಗೆ ತ್ವರೆ ಪಡುತ್ತಿದ್ದ ರಾಜನಿಗೆ ಶಕಟಾಲನು ವಿಚಾರಪೂರ್ವಕವಾಗಿ ಹೀಗೆ ಹೇಳಿದನು.

೧೧೦. "ಎಲ್ಲ ಸೇವಕರೂ ಈಗ ಉತ್ಸವಾಚರಣೆಯಲ್ಲಿ ಮಗ್ನರಾಗಿದ್ದಾರೆ. ಈ ಬ್ರಾಹ್ಮಣನು ಸ್ವಲ್ಪ ಕಾದಿರಲಿ. ಆಮೇಲೆ ನಾನೇ ಕೊಡುತ್ತೇನೆ.'

೧೧೧–೧೧೨ ಆಮೇಲೆ ವ್ಯಾಡಿಯು ಯೋಗನಂದರಾಜನ ಮುಂದೆ ಬಂದು ಅತ್ತನು. "ಅನ್ಯಾಯವಾಯಿತು. ಯೋಗಸಮಾಧಿಯಲ್ಲಿದ್ದ ಒಬ್ಬ ಬ್ರಾಹ್ಮಣನನ್ನು ಅವನಿಗೆ ಜೀವವು ಇರುವಾಗಲೇ ಇವರು ಅನಾಥಶವವೆಂದು ಬಲಾತ್ಕಾರದಿಂದ ಸುಟ್ಟುಹಾಕಿದರು" ಎಂದು ಅವನು ಹೇಳಿದಾಗ ಯೋಗನಂದನಿಗೆ ದುಃಖದಿಂದ ಅವರ್ಣನೀಯ ಅವಸ್ಥೆಯುಂಟಾಯಿತು.

೧೧೩. ದೇಹವು ಸುಟ್ಟುಹೋದುದರಿಂದ ಯೋಗನಂದನು ಸ್ಥಿರವಾಗಿ ಅಲ್ಲೇ ಇರುವನೆಂದು ನಿಶ್ಚಯವಾದ ಮೇಲೆ ಮಹಾಬುದ್ಧಿಶಾಲಿ ಶಕಟಾಲನು ನನಗೆ ಕೋಟಿ ಸುವರ್ಣಗಳನ್ನು ಕೊಟ್ಟನು.

೧೧೪. ದುಃಖಿತನಾಗಿದ್ದ ಯೋಗನಂದನು ಏಕಾಂತದಲ್ಲಿ ವ್ಯಾಡಿಗೆ ಹೀಗೆ ಹೇಳಿದನು. "ಬ್ರಾಹ್ಮಣನಾದರೂ ಈಗ ಅಬ್ರಾಹ್ಮಣನಂತಾಗಿದ್ದೇನೆ. ಈ ಸ್ಥಿರವಾದ ಸಂಪತ್ತಿನಿಂದ ನನಗೇನು ಪ್ರಯೋಜನ ?'

---

ಚರೈರನ್ವಿಷ್ಯ ತನ್ಮಧ್ಯೇ ಲಬ್ಧ್ವಾ ದೇವಗೃಹಾತ್ ತತಃ ।
ವ್ಯಾಡಿಂ ವಿಧೂಯ ತದ್‌ದಗ್ಧಂ ಇಂದ್ರದತ್ತಕಲೇವರಮ್ ॥ ೧೦೮
ಅತ್ರಾಂತರೇ ಚ ರಾಜಾನಂ ಹೇಮಕೋಟಿಸಮರ್ಪಣೇ ।
ತ್ವರಮಾಣಮಥಾಹ ಸ್ಮ ಶಕಟಾಲೋ ವಿಚಾರಯನ್ ॥ ೧೦೯
ಉತ್ಸವಾಕ್ಷಿಪ್ತಚಿತ್ತೋಽಯಂ ಸರ್ವಃ ಪರಿಜನಃ ಸ್ಥಿತಃ ।
ಕ್ಷಣಂ ಪ್ರತೀಕ್ಷತಾಮೇಷ ವಿಪ್ರೋ ಯಾವದ್ ದದಾಮ್ಯಹಮ್ ॥ ೧೧೦
ಅಥೈತ್ಯ ಯೋಗನಂದಸ್ಯ ವ್ಯಾಡಿನಾ ಕ್ರಂದಿತಂ ಪುರಃ ।
ಅಬ್ರಹ್ಮಣ್ಯಮನುತ್ಕ್ರಾಂತಜೀವೋ ಯೋಗಸ್ಥಿತೋ ದ್ವಿಜಃ ॥ ೧೧೧
ಅನಾಥಶವ ಇತ್ಯದ್ಯ ಬಲಾದ್ ದಗ್ಧಸ್ತ್ವದೋದಯೇ ।
ತಚ್ಛ್ರುತ್ವಾ ಯೋಗನಂದಸ್ಯ ಕಾಪ್ಯವಸ್ಥಾಭವಚ್ಛುಚಾ ॥ ೧೧೨
ದೇಹದಾಹಾತ್ ಸ್ಥಿರೇ ತಸ್ಮಿನ್ ಜಾತೇ ನಿರ್ಗತ್ಯ ಮೇ ದದೌ ।
ಸುವರ್ಣಕೋಟಿಂ ಸ ತತಃ ಶಕಟಾಲೋ ಮಹಾಮತಿಃ ॥ ೧೧೩
ಯೋಗನಂದೋಽಥ ವಿಜನೇ ಸಶೋಕೋ ವ್ಯಾಡಿಮಬ್ರವೀತ್ ।
ಶೂದ್ರೀಭೂತೋಽಸ್ಮಿ ವಿಪ್ರೋಽಪಿ ಕಿಂ ಶ್ರಿಯಾ ಸ್ಥಿರಯಾಪಿ ಮೇ ॥ ೧೧೪

೧೧೫ ಆ ಮಾತನ್ನು ಕೇಳಿ ಅವನಿಗೆ ಆಶ್ವಾಸನೆಯನ್ನು ಕೊಡುವುದಕ್ಕಾಗಿ ವ್ಯಾಡಿಯು ಸಮಯೋಚಿತವಾದ ಮಾತನ್ನು ಹೇಳಿದನು. "ಶಕಟಾಲನು ನಿನ್ನ ವಿಷಯವನ್ನು ಅರಿತಿದ್ದಾನೆ. ಅದಕ್ಕೇನು ಮಾಡಬೇಕೆಂಬುದನ್ನು ಈಗ ಆಲೋಚಿಸು.

೧೧೬. ಈ ಮಹಾಮಂತ್ರಿ ಶಕಟಾಲನು ತನ್ನ ಇಚ್ಛಾನುಸಾರವಾಗಿ ನಿನ್ನನ್ನು ನಾಶಮಾಡಿ ಪೂರ್ವನಂದನ ಮಗ ಚಂದ್ರಗುಪ್ತನನ್ನು ರಾಜನನ್ನಾಗಿ ಮಾಡಬಹುದು.

೧೧೭. ಆದ್ದರಿಂದ ವರರುಚಿಯನ್ನು ನಿನ್ನ ಮುಖ್ಯಮಂತ್ರಿಯನ್ನಾಗಿ ಮಾಡಿಕೋ. ದಿವ್ಯಶಕ್ತಿಯಿರುವ ಅವನ ಬುದ್ಧಿಯಿಂದ ನಿನ್ನ ರಾಜ್ಯ ಸ್ಥಿರವಾಗುವುದು."

೧೧೮. ಇಷ್ಟನ್ನು ಹೇಳಿ ಗುರುದಕ್ಷಿಣೆಯನ್ನು ಕೊಡಲು ವ್ಯಾಡಿಯು ಹೋದನು. ಆಗಲೇ ನನ್ನನ್ನು ಕರೆಸಿ ಯೋಗನಂದನು ನನಗೆ ಮಂತ್ರಿಪದವಿಯನ್ನು ನೀಡಿದನು.

೧೧೯. ಆಮೇಲೆ ರಾಜನಿಗೆ ನಾನು ಹೇಳಿದೆನು– "ನಿನ್ನ ಬ್ರಾಹ್ಮಣ್ಯವು ಕಳೆದುಹೋಗಿದ್ದರೂ ನಿನ್ನ ರಾಜ್ಯ ಸ್ಥಿರವೆಂದು ನಾನು ನಂಬಲಾರೆನು. ಏಕೆಂದರೆ ಶಕಟಾಲನು ಮಂತ್ರಿಸ್ಥಾನದಲ್ಲಿದ್ದಾನೆ.

೧೨೦. ಆದ್ದರಿಂದ ಯುಕ್ತಿಯಿಂದಲೇ ಅವನನ್ನು ನಾಶಪಡಿಸು" ಎಂದು ನಾನು ಗುಟ್ಟಾಗಿ ಹೇಳಲು ಯೋಗನಂದನು ಶಕಟಾಲನನ್ನು ಯಾವುದೋ ಪಾಳುಬಾವಿಯಂತಿದ್ದ ಕತ್ತಲು ತುಂಬಿದ್ದ ನೆಲಮಾಳಿಗೆಯಲ್ಲಿ ತಳ್ಳಿಸಿದನು.

---

ತಚ್ಛ್ರುತ್ವಾಶ್ವಾಸ್ಯ ತಂ ವ್ಯಾಡಿಃ ಕಾಲೋಚಿತಮಭಾಷತ ।
ಜ್ಞಾತೋಽಸಿ ಶಕಟಾಲೇನ ತದೇನಂ ಚಿಂತಯಾಧುನಾ ॥ ೧೧೫

ಮಹಾಮಂತ್ರೀ ಹ್ಯಯಂ ಸ್ವೇಚ್ಛಮಚಿರಾತ್ ತ್ವಾಂ ವಿನಾಶಯೇತ್ ।
ಪೂರ್ವನಂದಸುತಂ ಕುರ್ಯಾಚ್ಚಂದ್ರಗುಪ್ತಂ ಹಿ ಭೂಮಿಪಮ್ ॥ ೧೧೬

ತಸ್ಮಾದ್ವರರುಚಿಂ ಮಂತ್ರಿಮುಖ್ಯತ್ವೇ ಕುರು ಯೇನ ತೇ ।
ಏತದ್ಬುದ್ಧ್ಯಾ ಭವೇದ್ರಾಜ್ಯಂ ಸ್ಥಿರಂ ದಿವ್ಯಾನುಭಾವಯಾ ॥ ೧೧೭

ಇತ್ಯುಕ್ತ್ವೈವ ಗತೇ ವ್ಯಾಡೌ ದಾತುಂ ತಾಂ ಗುರುದಕ್ಷಿಣಾಮ್ ।
ತದೈವಾನೀಯ ದತ್ತಾ ಮೇ ಯೋಗನಂದೇನ ಮಂತ್ರಿತಾ ॥ ೧೧೮

ಅಥೋಕ್ತ ಸ ಮಯಾ ರಾಜಾ ಬ್ರಾಹ್ಮಣ್ಯೇ ಹಾರಿತೇಽಪಿ ತೇ ।
ರಾಜ್ಯಂ ನೈವ ಸ್ಥಿರಂ ಮನ್ಯೇ ಶಕಟಾಲೇ ಪದಸ್ಥಿತೇ ॥ ೧೧೯

ತಸ್ಮಾನ್ನಾಶಯ ಯುಕ್ತ್ಯೈನಂ ಇತಿ ಮಂತ್ರೇ ಮಯೋದಿತೇ ।
ಯೋಗಾನಂದೋಽಂಧಕೂಪಾಂತಃ ಶಕಟಾಲಂ ತಮಕ್ಷಿಪತ್ ॥ ೧೨೦

೧೨೧. ಅಲ್ಲದೆ ಅವನ ನೂರು ಮಕ್ಕಳನ್ನೂ ಅಲ್ಲೇ ತಳ್ಳಿಸಿಬಿಟ್ಟನು. ಬದುಕಿದ್ದ ಬ್ರಾಹ್ಮಣನನ್ನು ಆ ಶಕಟಾಲನು ಸುಡಿಸಿದ್ದ ಎಂಬ ದೋಷವನ್ನು ಎತ್ತಿಹೇಳಲಾಯಿತು.

೧೨೨. ಒಂದು ಬೋಗುಣಿ ಹಿಟ್ಟು, ಒಂದು ಬೋಗುಣಿ ನೀರು ಇಷ್ಟನ್ನು ಮಾತ್ರ ಪುತ್ರಸಹಿತನಾದ ಶಕಟಾಲನಿಗಾಗಿ ಪ್ರತಿದಿನ ಕೊಡಲಾಗುತ್ತಿತ್ತು.

೧೨೩. ಆಗ ಶಕಟಾಲನು ತನ್ನ ಮಕ್ಕಳನ್ನು ಕುರಿತು ಹೀಗೆ ಹೇಳಿದನು. "ಮಕ್ಕಳೇ, ಇಷ್ಟು ಹಿಟ್ಟಿನಿಂದ ಒಬ್ಬನು ಬದುಕಿರುವುದೇ ಕಷ್ಟ ಬಹಳ ಜನರ ವಿಷಯವನ್ನು ಏನು ಹೇಳೋಣ ?

೧೨೪. ಆದ್ದರಿಂದ ನಿಮ್ಮಲ್ಲಿ ಯಾವನಾದರೊಬ್ಬನು ಈ ಹಿಟ್ಟನ್ನು ನೀರಿನಲ್ಲಿ ಕಲಸಿ ತಿನ್ನಲಿ. ಅವನು ಯೋಗನಂದನ ವೈರಕ್ಕೆ ತಕ್ಕ ಪ್ರತೀಕಾರವನ್ನು ಮಾಡಲು ಶಕ್ತನಾಗಿರಬೇಕು.'

೧೨೫. 'ಅದನ್ನು ಮಾಡಲು ನೀನೇ ಶಕ್ತ. ನೀನೇ ತಿನ್ನು' ಎಂದು ಮಕ್ಕಳು ಅವನಿಗೆ ಹೇಳಿದರು. ಧೀರರಿಗೆ ಶತ್ರುಗಳ ಮೇಲೆ ಹಗೆ ತೀರಿಸುವುದು ಪ್ರಾಣಗಳಿಗಿಂತೂ ಹೆಚ್ಚು ಇಷ್ಟವಷ್ಟೆ

೧೨೬. ಅಂದಿನಿಂದ ಶಕಟಾಲನು ತಾನೊಬ್ಬನೇ ಆ ಹಿಟ್ಟು ಹಾಗೂ ನೀರುಗಳಿಂದ ಬದುಕನ್ನು ನಡೆಸತೊಡಗಿದನು. ಕಷ್ಟ! ಶತ್ರುಗಳನ್ನು ಗೆಲ್ಲಬಯಸುವ ಜನರು ಕ್ರೂರರಾಗುತ್ತಾರೆ.

೧೨೭. ಶ್ರೇಯಸ್ಸನ್ನು ಬಯಸುವ ಯಾವನೂ ಮನಸ್ಸನ್ನು ಅರಿತುಕೊಳ್ಳದೆ, ಪ್ರಭುಗಳಲ್ಲಿ ವಿಶ್ವಾಸವನ್ನು ಗಳಿಸದೆ ವ್ಯವಹರಿಸಬಾರದು.

---

ಕಿಂ ಚ ಪುತ್ರಶತಂ ತಸ್ಯ ತತ್ರೈವ ಕ್ಷಿಪ್ತವಾನಸೌ ।
ಜೀವನ್ ದ್ವಿಜೋऽಮುನಾ ದಗ್ಧ ಇತಿ ದೋಷಾನುಕೀರ್ತನಾತ್ ॥ ೧೨೧
ಏಕಃ ಶರಾವಃ ಸಕ್ತೂನಾಮ್ ಏಕಃ ಪ್ರತ್ಯಹಮಂಭಸಃ ।
ಶಕಟಾಲಸ್ಯ ತತ್ರಾಂತಃ ಸಪುತ್ರಸ್ಯ ನ್ಯಧೀಯತ ॥ ೧೨೨
ಸ ಚೋವಾಚ ತತಃ ಪುತ್ರಾನ್ ಅಮೀಭಿಃ ಸಕ್ತುಭಿಃ ಸುತಾಃ ।
ಏಕೋऽಪಿ ಕೃಚ್ಛ್ರಾದ್ ವರ್ತೇತ ಬಹೂನಾಂ ತು ಕಥೈವ ಕಾ ॥ ೧೨೩
ತಸ್ಮಾತ್ ಸಂಭಕ್ಷಯತ್ವೇಕಃ ಪ್ರತ್ಯಹಂ ಸಜಲಾನ್ ಅಮೂನ್ ।
ಯಃ ಶಕ್ತೋ ಯೋಗನಂದಸ್ಯ ಕರ್ತುಂ ವೈರಪ್ರತಿಕ್ರಿಯಾಮ್ ॥ ೧೨೪
ತ್ವಮೇವ ಶಕ್ತೋ ಭುಂಕ್ಷ್ವೈತತ್ ಇತಿ ಪುತ್ರಾಸ್ತಮಬ್ರುವನ್ ।
ಪ್ರಾಣೇಭ್ಯೋऽಪಿ ಹಿ ಧೀರಾಣಾಂ ಪ್ರಿಯಾ ಶತ್ರುಪ್ರತಿಕ್ರಿಯಾ ॥ ೧೨೫
ತತಃ ಸ ಶಕಟಾಲಸ್ತೈಃ ಪ್ರತ್ಯಹಂ ಸಕ್ತುವಾರಿಭಿಃ ।
ಏಕ ಏವಾಕರೋದ್ ವೃತ್ತಿಂ ಕಷ್ಟಂ ಕ್ರೂರಾ ಜಿಗೀಷವಃ ॥ ೧೨೬
ಅಬುದ್ಧ್ವಾ ಚಿತ್ತಮಪ್ರಾಪ್ಯ ವಿಸ್ರಂಭಂ ಪ್ರಭುವಿಷ್ಣುಷು ।
ನ ಸ್ವೇಚ್ಛಂ ವ್ಯವಹರ್ತವ್ಯಮಾತ್ಮನೋ ಭೂತಿಮಿಚ್ಛತಾ ॥ ೧೨೭

೧೨೮. ಹೀಗೆ ಕತ್ತಲೆ ತುಂಬಿದ್ದ ಪಾಳುಬಾವಿ(ನೆಲಮಾಳಿಗೆ)ಯಲ್ಲಿದ್ದ ಶಕಟಾಲನು ಹಸಿವಿನಿಂದ ನರಳಿ ಸಾಯುತ್ತಿದ್ದ ಮಕ್ಕಳ ನೋವನ್ನು ಕಂಡು ಚಿಂತಿಸುತ್ತಿದ್ದನು.

೧೨೯. ಅವನು ನೋಡುತ್ತಿದ್ದಂತೆಯೇ ಅವನ ನೂರು ಮಕ್ಕಳೂ ಸಾವಿಗೀಡಾದರು. ಆ ಹೆಣಗಳ ಮಧ್ಯದಲ್ಲಿ ಅವನೊಬ್ಬನೇ ಜೀವಸಹಿತ ಉಳಿದಿದ್ದನು.

೧೩೦. ಯೋಗನಂದನು ಸಾಮ್ರಾಜ್ಯದಲ್ಲಿ ಬೇರೂರಿದನು. ಗುರುವಿಗೆ ದಕ್ಷಿಣೆಯನ್ನು ಕೊಟ್ಟು ಬಂದ ವ್ಯಾಡಿಯೂ ಅವನನ್ನು ಕಂಡನು.

೧೩೧. ಬರುತ್ತಿದ್ದಂತೆಯೇ ಅವನು ಹೇಳಿದನು. "ಮಿತ್ರ, ನಿನ್ನ ರಾಜ್ಯ ಸ್ಥಿರವಾಗಿರಲಿ. ನಿನಗೆ ಹೇಳಿ ಹೊರಡುತ್ತಿದ್ದೇನೆ. ಎಲ್ಲಾದರೂ ತಪಸ್ಸನ್ನು ಮಾಡಲು ಹೋಗುತ್ತೇನೆ.'

೧೩೨. ಆ ಮಾತನ್ನು ಕೇಳಿ ಕಣ್ಣೀರಿಟ್ಟು ಗದ್ಗದಕಂಠನಾಗಿ ಯೋಗನಂದನು ಅವನಿಗೆ ಹೇಳಿದನು. "ನನ್ನ ರಾಜ್ಯದಲ್ಲಿ ನೀನು ಭೋಗಗಳನ್ನು ಅನುಭವಿಸು. ನನ್ನೊಬ್ಬನನ್ನೇ ಬಿಟ್ಟು ಹೋಗಬೇಡ'

೧೩೩ ಆಗ ವ್ಯಾಡಿ ಹೇಳಿದನು. "ರಾಜನ್, ಶರೀರವು ಕ್ಷಣಮಾತ್ರದಲ್ಲಿ ನಶಿಸುವಂಥದ್ದು. ಹಾಗಿರುವಾಗ ಬುದ್ಧಿಯುಳ್ಳ ಯಾವನು ತಾನೆ ಇಂಥ ನಿಸ್ಸಾರ ಸುಖಗಳಲ್ಲಿ ಮುಳುಗಿರುತ್ತಾನೆ ?

---

ಇತಿ ಚಾಚಿಂತಯತ್ತತ್ರ ಶಕಟಾಲೋಽಂಧಕೂಪಗಃ ।
ತನಯಾನಾಂ ಕ್ಷುಧಾರ್ತಾನಾಂ ಪಶ್ಯನ್ ಪ್ರಾಣೋದ್ಗಮವ್ಯಥಾಮ್ ॥ ೧೨೮
ತತಃ ಸುತಶತಂ ತಸ್ಯ ಪಶ್ಯತಸ್ತದ್ ವ್ಯಪದ್ಯತ ।
ತತ್‌ಕರಂಕೈರ್ವೃತೋ ಜೀವನ್ ಅತಿಷ್ಠತ್ ಸ ಚ ಕೇವಲಃ ॥ ೧೨೯
ಯೋಗನಂದಶ್ಚ ಸಾಮ್ರಾಜ್ಯೇ ಬದ್ಧಮೂಲೋಽಭವತ್ ತತಃ ।
ವ್ಯಾಡಿರಭ್ಯಾಯಯೌ ತಂ ಚ ಗುರವೇ ದತ್ತದಕ್ಷಿಣಃ ॥ ೧೩೦
ಅಭ್ಯೇತ್ಯೈವ ಚ ಸೋಽವಾದೀಚ್ಚಿರಂ ರಾಜ್ಯಂ ಸಖೇಽಸ್ತು ತೇ ।
ಆಮಂತ್ರಿತೋಽಸಿ ಗಚ್ಛಾಮಿ ತಪಸ್ತಪ್ತುಮಹಂ ಕ್ವಚಿತ್ ॥ ೧೩೧
ತಚ್ಛ್ರುತ್ವಾ ಯೋಗನಂದಸ್ತಂ ಬಾಷ್ಪಕಂಠೋಽಭ್ಯಭಾಷತ ।
ರಾಜ್ಯೇ ಮೇ ಭುಂಕ್ಷ್ವ ಭೋಗಾಂಸ್ತ್ವಂ ಮುಕ್ತ್ವಾ ಮಾಂ ಮಾ ಸ್ಮ ಗಾ ಇತಿ॥
೧೩೨
ವ್ಯಾಡಿಸ್ತತೋಽವದದ್ ರಾಜನ್ ಶರೀರೇ ಕ್ಷಣನಶ್ವರೇ ।
ಏವಂಪ್ರಾಯೇಷ್ವಸಾರೇಷು ಧೀಮಾನ್ ಕೋ ನಾಮ ಮಜ್ಜತಿ ॥ ೧೩೩

೧೩೪. ಮರುಭೂಮಿಯ ಮರೀಚಿಕೆಯಂತಿರುವ ಲಕ್ಷ್ಮಿಯು ಪ್ರಾಜ್ಞನಲ್ಲಿ ಮೋಹವನ್ನು ಹುಟ್ಟಿಸಲಾರಳು.' ಇಷ್ಟನ್ನು ಹೇಳಿ ಅವನು ಆಗಲೇ ತಪಸ್ಸನ್ನು ಮಾಡಲು ನಿಶ್ಚಯಿಸಿ ಹೊರಟುಬಿಟ್ಟನು.

೧೩೫ ಕಾಣಭೂತಿಯೇ ! ಅನಂತರ ಯೋಗನಂದನು ತನ್ನ ರಾಜಧಾನಿ ಪಾಟಲಿಪುತ್ರಕ್ಕೆ ಸಕಲಸೈನ್ಯದೊಡನೆ ಭೋಗಗಳನ್ನು ಅನುಭವಿಸಲು ನನ್ನ ಜೊತೆಯಲ್ಲೇ ತೆರಳಿದನು.

೧೩೬ ಅಲ್ಲಿ ಉಪಕೋಶೆಯ ಪರಿಚರ್ಯೆಯ ಸುಖವನ್ನನುಭವಿಸುತ್ತಾ ಯೋಗನಂದನ ಮಂತ್ರಿಪದವಿಯನ್ನು ವಹಿಸಿ, ಸಂಪತ್ತನ್ನು ಗಳಿಸಿ, ತಾಯಿ ಮತ್ತು ಹಿರಿಯರೊಡನೆ ದೀರ್ಘಕಾಲ ನಾನು ವಾಸವಾಗಿದ್ದೆನು.

೧೩೭ ನನ್ನ ತಪಸ್ಸಿನಿಂದ ಪ್ರಸನ್ನಳಾಗಿ ಗಂಗಾನದಿಯು ನನಗೆ ಅಲ್ಲಿ ದಿನದಿನವೂ ಅಪಾರವಾದ ಸ್ವರ್ಣವನ್ನು ಕೊಡುತ್ತಿದ್ದಳು. ಸಶರೀರಳಾಗಿ ಸರಸ್ವತಿಯೂ ಸದಾ ನನಗೆ ಸಾಕ್ಷಾತ್ತಾಗಿ ಕರ್ತವ್ಯಗಳನ್ನು ತಿಳಿಸಿಹೇಳುತ್ತಿದ್ದಳು.

ಮಹಾಕವಿ ಸೋಮದೇವಭಟ್ಟನು ರಚಿಸಿದ

ಕಥಾಸರಿತ್ಸಾಗರದಲ್ಲಿ

ಕಥಾಪೀಠಲಂಬಕದ ನಾಲ್ಕನೆಯ ತರಂಗವು ಮುಗಿಯಿತು

---

ನಹಿ ಮೋಹಯತಿ ಪ್ರಾಜ್ಞಂ ಲಕ್ಷ್ಮೀರ್ಮರುಮರೀಚಿಕಾ ।
ಇತ್ಯುಕ್ತ್ವೈವ ಸ ತತ್ಕಾಲಂ ತಪಸೇ ನಿಶ್ಚಿತೋ ಯಯೌ ॥ ೧೩೪
ಅಗಮದಥ ಯೋಗನಂದಃ ಪಾಟಲಿಪುತ್ರಂ ಸ್ವರಾಜನಗರಂ ಸಃ ।
ಭೋಗಾಯ ಕಾಣಭೂತೇ ಮತ್ಸಹಿತಃ ಸಕಲಸೈನ್ಯಯುತಃ ॥ ೧೩೫
ತತ್ರೋಪಕೋಶಾಪರಿಚರ್ಯಮಾಣಃ ಸಮುದ್ವಹನ್ ಮಂತ್ರಿಧುರಾಂ ಚ ತಸ್ಯ ।
ಅಹಂ ಜನನ್ಯಾ ಗುರುಭಿಶ್ಚ ಸಾಕಮಾಸಾದ್ಯ ಲಕ್ಷ್ಮೀಮವಸಂ ಚಿರಾಯ ॥ ೧೩೬

ಬಹು ತತ್ರ ದಿನೇದಿನೇ ದ್ಯುಸಿಂಧುಃ
ಕನಕಂ ಮಹ್ಯಮದಾತ್ ತಪಃಪ್ರಸನ್ನಾ ।
ವದತಿ ಸ್ಮ ಶರೀರಿಣೀ ಚ ಸಾಕ್ಷಾನ್ –
ಮಮ ಕಾರ್ಯಾಣಿ ಸರಸ್ವತೀ ಸದೈವ ॥ ೧೩೭

ಇತಿ ಮಹಾಕವಿ ಶ್ರೀ ಸೋಮದೇವಭಟ್ಟ ವಿರಚಿತೇ

ಕಥಾಸರಿತ್‌ಸಾಗರೇ

ಕಥಾಪೀಠಲಂಬಕೇ ಚತುರ್ಥಸ್ತರಂಗಃ

---

# ಐದನೆಯ ತರಂಗ

## ವರರುಚಿಯ ಕಥೆ

೧ ಇಷ್ಟು ಹೇಳಿದ ವರರುಚಿಯು ಮತ್ತೆ ಕಥೆಯನ್ನು ಹೀಗೆ ವರ್ಣಿಸಿದನು. ಕಾಲವು ಕಳೆಯುತ್ತಿದ್ದಂತೆ ಯೋಗನಂದನು ಕಾಮಾದಿಗಳಿಗೆ ವಶನಾದನು.

೨ ಮದಿಸಿದ ಆನೆಯಂತೆ ಅವನು ಏನನ್ನೂ ಪರಿಗಣಿಸದವನಾದನು. ಇದ್ದಕ್ಕಿದ್ದಂತೆ ಬಂದೊದಗಿದ ಐಶ್ವರ್ಯವು ಯಾರನ್ನು ತಾನೆ ಮೋಹಗೊಳಿಸುವುದಿಲ್ಲ ?

೩ ಆಗ ನಾನು ಹೀಗೆ ಯೋಚಿಸಿದೆನು "ಈ ರಾಜನಾದರೋ ಸ್ವಚ್ಛಂದಚಾರಿಯಾಗಿದ್ದಾನೆ. ಅವನ ಕೆಲಸಗಳ ಚಿಂತೆಯಿಂದ ಆಕ್ರಾಂತವಾಗಿ ನನ್ನ ಧರ್ಮವೂ ಕೆಡುತ್ತಿದೆ.

೪ ಆದ್ದರಿಂದ ನನ್ನ ನೆರವಿಗಾಗಿ ಶಕಟಾಲನನ್ನು ಕಷ್ಟದಿಂದ ಮೇಲೆತ್ತುತ್ತೇನೆ. ಅವನು ವಿರುದ್ಧವಾಗಿ ನಡೆದುಕೊಂಡರೂ ನಾನಿರುವಾಗ ಯಾವ ಹಾನಿಯನ್ನು ಮಾಡಬಲ್ಲನು ?'

೫ ಹೀಗೆ ನಿಶ್ಚಯಿಸಿ ನಾನು ರಾಜನನ್ನು ಪ್ರಾರ್ಥಿಸಿ ಶಕಟಾಲನನ್ನು ಕತ್ತಲೆಯ ಕೂಪವಾಗಿದ್ದ ನೆಲಮಾಳಿಗೆಯಿಂದ ಮೇಲೆ ಎತ್ತಿಸಿದೆನು. ಬ್ರಾಹ್ಮಣರು ಎಷ್ಟಾದರೂ ಮೃದುಹೃದಯದವರಲ್ಲವೆ ?

---

# ಪಂಚಮಸ್ತರಂಗಃ

ಏವಮುಕ್ತ್ವಾ ವರರುಚಿಃ ಪುನರೇತದವರ್ಣಯತ್ ।
ಕಾಲೇನ ಯೋಗನಂದೋಽಥ ಕಾಮಾದಿವಶಮಾಯಯೌ ॥ ೧
ಗಜೇಂದ್ರ ಇವ ಮತ್ತಶ್ಚ ನಾಪ್ಯೈಕ್ಷತ ಸ ಕಿಂಚನ ।
ಅಕಾಂಡಪಾತೋಪನತಾ ಕಂ ನ ಲಕ್ಷ್ಮೀರ್ವಿಮೋಹಯೇತ್ ॥ ೨
ಅಚಿಂತಯಂ ತತಶ್ಚಾಹಂ ರಾಜಾ ತಾವದ್ ವಿಶೃಂಖಲಃ ।
ತತ್ಕಾರ್ಯಚಿಂತಯಾಕ್ರಾಂತಃ ಸ್ವಧರ್ಮೋ ಮೇಽವಸೀದತಿ ॥ ೩
ತಸ್ಮಾದ್ ವರಂ ಸಹಾಯಂ ತಂ ಶಕಟಾಲಂ ಸಮುದ್ಧರೇ ।
ಕ್ರಿಯೇತ ಚೇದ್ ವಿರುದ್ಧಂ ಚ ಕಿಂ ಸ ಕುರ್ಯಾನ್ಮಯಿ ಸ್ಥಿತೇ ॥ ೪
ನಿಶ್ಚಿತ್ಯೈತನ್ಮಯಾಭ್ಯರ್ಥ್ಯ ರಾಜಾನಂ ಸೋಽಂಧಕೂಪತಃ ।
ಉದ್ಧೃತಃ ಶಕಟಾಲೋಽಥ ಮೃದವೋ ಹಿ ದ್ವಿಜಾತಯಃ ॥ ೫

೬-೭ "ಈ ವರರುಚಿ ಇರುವಾಗ ಯೋಗನಂದನನ್ನು ಸೋಲಿಸಲಾಗದು. ಆದ್ದರಿಂದ ಸರಿಯಾದ ಸಮಯಕ್ಕಾಗಿ ಕಾಯುವ ವೈತಸೀ ನೀತಿಯನ್ನು ಈಗ ಆಶ್ರಯಿಸುತ್ತೇನೆ ಎಂದು ಆಲೋಚಿಸಿದ ಪ್ರಾಜ್ಞ ಶಕಟಾಲನು ನನ್ನ ಇಷ್ಟದಂತೆ ಮಂತ್ರಿಪದವಿಯನ್ನು ಮತ್ತೆ ಒಪ್ಪಿಕೊಂಡು ರಾಜಕಾರ್ಯಗಳನ್ನು ಮಾಡತೊಡಗಿದನು.'

೮. ಒಮ್ಮೆ ರಾಜ ಯೋಗನಂದನು ನಗರದ ಆಚೆ ತೆರಳಿದ್ದಾಗ ಗಂಗೆಯ ಮಧ್ಯದಲ್ಲಿ ಐದುಬೆರಳುಗಳೂ ಕೂಡಿಕೊಂಡಿದ್ದ ಕೈಯೊಂದನ್ನು ಕಂಡನು.

೯. ಆ ಕ್ಷಣದಲ್ಲೇ ಅವನು ನನ್ನನ್ನು ಕರೆಸಿ 'ಇದೇನು ?' ಎಂದು ಕೇಳಿದನು. ನಾನು ಅದೇ ದಿಕ್ಕಿಗೆ ನನ್ನ ಎರಡು ಬೆರಳುಗಳನ್ನು ತೋರಿಸಿದೆನು.

೧೦. ಆಗ ನದಿಯಲ್ಲಿದ್ದ ಕೈ ಕಣ್ಮರೆಯಾಗಲು ರಾಜನಿಗೆ ಆಶ್ಚರ್ಯವಾಯಿತು. ಅವನು ಮತ್ತೆ ಆ ಬಗೆಗೆ ಕೇಳಿದಾಗ ನಾನು ಹೀಗೆ ಹೇಳಿದೆನು.

೧೧. ತನ್ನ ಐದುಬೆರಳುಗಳನ್ನು ತೋರಿಸಿದ ಹಸ್ತವು 'ಐದು ಜನರು ಒಟ್ಟಿಗೆ ಸೇರಿ ಮಾಡಲಾಗದುದು ಈ ಜಗತ್ತಿನಲ್ಲಿ ಏನಿದೆ ?' ಎಂದು ಹೇಳಿತು.

೧೨. ರಾಜನ್, ಆಗ ನಾನು ನನ್ನೆರಡು ಬೆರಳುಗಳನ್ನು ಅದಕ್ಕೆ ತೋರಿಸಿದೆನು. ಒಂದು ಮನಸ್ಸಿದ್ದಾಗ ಇಬ್ಬರಿಗೆ ಕೂಡ ಅಸಾಧ್ಯವಾದುದು ಏನಿದೆ ? ಎಂದು ಅದರ ಅಭಿಪ್ರಾಯ.

---

ಆಶ್ರಯೇ ವೈತಸೀಂ ವೃತ್ತಿಂ ಕಾಲಂ ತಾವತ್ ಪ್ರತೀಕ್ಷಿತುಮ್ ॥ ೬
ಇತಿ ಸಂಚಿಂತ್ಯ ಸ ಪ್ರಾಜ್ಞಃ ಶಕಟಾಲೋ ಮದಿಚ್ಛಯಾ ।
ಅಕರೋದ್ ರಾಜಕಾರ್ಯಾಣಿ ಪುನಃ ಸಂಪ್ರಾಪ್ಯ ಮಂತ್ರಿತಾಮ್ ॥ ೭
ಕದಾಚಿದ್ ಯೋಗನಂದೋಽಥ ನಿರ್ಗತೋ ನಗರಾದ್ ಬಹಿಃ ।
ಶ್ಲಿಷ್ಯತ್ಪಂಚಾಂಗುಲಿಂ ಹಸ್ತಂ ಗಂಗಾಮಧ್ಯೇ ವ್ಯಲೋಕಯತ್ ॥ ೮
ಕಿಮೇತದಿತಿ ಪಪ್ರಚ್ಛ ಮಾಮಾಹೂಯ ಸ ತತ್‌ಕ್ಷಣಾಮ್ ।
ಅಹಂ ಚ ದ್ವೇ ನಿಜಾಂಗುಲ್ಯೌ ದಿಶಿ ತಸ್ಯಾಮದರ್ಶಯಮ್ ॥ ೯
ತೇನ ತಸ್ಮಿಂಸ್ತಿರೋಭೂತೇ ಹಸ್ತೇ ರಾಜಾತಿವಿಸ್ಮಯಾತ್ ।
ಭೂಯೋಽಪಿ ತದಪೃಚ್ಛನ್ಮಾಂ ತತಶ್ಚಾಹಂ ತಮಬ್ರವಮ್ ॥ ೧೦
ಪಂಚಭಿರ್ಮಿಲಿತೈಃ ಕಿಂ ಯಜ್ಜಗತೀಹ ನ ಸಾಧ್ಯತೇ ।
ಇತ್ಯುಕ್ತವಾನಸೌ ಹಸ್ತಃ ಸ್ವಾಂಗುಲೀಃ ಪಂಚ ದರ್ಶಯನ್ ॥ ೧೧
ತತೋಽಸ್ಯ ರಾಜನ್ನಂಗುಲ್ಯೌ ಏತೇ ದ್ವೇ ದರ್ಶಿತೇ ಮಯಾ ।
ಐಕಚಿತ್ತ್ಯೇ ದ್ವಯೋರೇವ ಕಿಮಸಾಧ್ಯಂ ಭವೇದಿತಿ ॥ ೧೨

೧೩. ಹೀಗೆ ಗೂಢವಾದ ವಿಜ್ಞಾನವನ್ನು ನಾನು ವಿವರಿಸಿದಾಗ ರಾಜನು ಸಂತೋಷಪಟ್ಟನು. ಗೆಲ್ಲಲಸಾಧ್ಯವಾದ ನನ್ನ ಬುದ್ಧಿಯನ್ನು ಕಂಡು ಶಕಟಾಲನು ವಿಷಾದಪಟ್ಟನು.

೧೪. ಒಮ್ಮೆ ಅರಮನೆಯ ಕಿಟಕಿಯಿಂದ ರಾಜನ ಪತ್ನಿಯು ಮೇಲುಮುಖವಾಗಿ ನೋಡುತ್ತಿದ್ದ ಅತಿಥಿಬ್ರಾಹ್ಮಣನೊಬ್ಬನನ್ನು ನೋಡುತ್ತಿದ್ದುದು ನಂದರಾಜನ ಕಣ್ಣಿಗೆ ಬಿದ್ದಿತು.

೧೫. ಅಷ್ಟು ಮಾತ್ರದಿಂದಲೇ ಕೋಪಗೊಂಡ ರಾಜನು ಆ ಬ್ರಾಹ್ಮಣನಿಗೆ ಮರಣದಂಡನೆಯನ್ನು ವಿಧಿಸಿದನು. ಈರ್ಷ್ಯೆ ಯಾವಾಗಲೂ ವಿವೇಚನೆಯ ಶತ್ರು.

೧೬. ಆ ಬ್ರಾಹ್ಮಣನನ್ನು ವಧಸ್ಥಾನಕ್ಕೆ ಒಯ್ಯುತ್ತಿರುವಾಗ ಮಾರುಕಟ್ಟೆಯಲ್ಲಿದ್ದ ಒಂದು ಸತ್ತ ಮೀನು ನಕ್ಕಿತು.

೧೭. ಆಗ ರಾಜನು, ಅದರ ಬಗೆಗೆ ತಿಳಿದುಕೊಂಡು ಆ ಬ್ರಾಹ್ಮಣನ ವಧೆಯನ್ನು ತಡೆದನು. "ಮೀನಿನ ನಗೆಯ ಕಾರಣವೇನು' ಎಂದು ನನ್ನನ್ನು ಕೇಳಿದನು.

೧೮. "ಆಲೋಚಿಸಿ ಅದನ್ನು ಹೇಳುವೆನು' ಎಂದು ಹೇಳಿ ನಾನು ಹೊರಟೆನು. ಏಕಾಂತದಲ್ಲಿದ್ದಾಗ ನೆನೆದೊಡನೆಯೇ ಬಂದ ಸರಸ್ವತಿಯು ನನಗೆ ಹೀಗೆ ಹೇಳಿದಳು.

೧೯. "ಇಂದು ರಾತ್ರಿ ಯಾರಿಗೂ ಕಾಣದಂತೆ ಈ ತಾಳೆಮರದ ಹಿಂದೆ ನಿಂತಿರು. ಆಗ ನಿಸ್ಸಂಶಯವಾಗಿ ಮೀನಿನ ನಗೆಯ ಕಾರಣವನ್ನು ಕೇಳಿಸಿಕೊಳ್ಳುವೆ."

---

ಇತ್ಯುಕ್ತೇ ಗೂಢವಿಜ್ಞಾನೇ ಸಮತುಷ್ಯತ್ ತತೋ ನೃಪಃ ।
ಶಕಟಾಲೋ ವ್ಯಷೀದಚ್ಚ ಮದ್‌ಬುದ್ಧಿಂ ವೀಕ್ಷ್ಯ ದುರ್ಜಯಾಮ್ ॥ ೧೩
ಏಕದಾ ಯೋಗನಂದಶ್ಚ ದೃಷ್ಟವಾನ್ ಮಹಿಷೀಂ ನಿಜಾಮ್ ।
ವಾತಾಯನಾಗ್ರಾತ್ ಪಶ್ಯಂತೀಂ ಬ್ರಾಹ್ಮಣಾತಿಥಿಮುನ್ಮುಖಮ್ ॥ ೧೪
ತನ್ಮಾತ್ರಾದೇವ ಕುಪಿತೋ ರಾಜಾ ವಿಪ್ರಸ್ಯ ತಸ್ಯ ಸಃ ।
ಆದಿಶದ್ ವಧಮ್, ಈರ್ಷ್ಯಾ ಹಿ ವಿವೇಕಪರಿಪಂಥಿನೀ ॥ ೧೫
ಹಂತುಂ ವಧ್ಯಭುವಂ ತಸ್ಮಿನ್ನೀಯಮಾನೇ ದ್ವಿಜೇ ತದಾ ।
ಅಹಸದ್ ಗತಜೀವೋಽಪಿ ಮತ್ಸ್ಯೋ ವಿಪಣಿಮಧ್ಯಗಃ ॥ ೧೬
ತದೈವ ರಾಜಾ ತದ್ ಬುದ್ಧ್ವಾ ವಧಂ ತಸ್ಯ ನ್ಯವಾರಯತ್ ।
ವಿಪ್ರಸ್ಯ ಮಾಮಪೃಚ್ಛಚ್ಚ ಮತ್ಸ್ಯಹಾಸಸ್ಯ ಕಾರಣಮ್ ॥ ೧೭
ನಿರೂಪ್ಯ ಕಥಯಾಮ್ಯೇತದಿತ್ಯುಕ್ತ್ವಾ ನಿರ್ಗತಂ ಚ ಮಾಮ್ ।
ಚಿಂತಿತೋಪಸ್ಥಿತೈಕಾಂತೇ ಸರಸ್ವತ್ಯೇವಮಬ್ರವೀತ್ ॥ ೧೮
ಅಸ್ಯ ತಾಲತರೋಃ ಪೃಷ್ಠೇ ತಿಷ್ಠ ರಾತ್ರಾವಲಕ್ಷಿತಃ ।
ಅತ್ರ ಶ್ರೋಷ್ಯಸಿ ಮತ್ಸ್ಯಸ್ಯ ಹಾಸಹೇತುಮಸಂಶಯಮ್ ॥ ೧೯

೨೦. ಅದನ್ನು ಕೇಳಿ ರಾತ್ರಿಯಲ್ಲಿ ನಾನು ತಾಳೆಮರದ ಬಳಿ ಹೋಗಿ ನಿಂತೆ. ಅಲ್ಲಿಗೆ ಭಯಂಕರಿಯಾದ ರಾಕ್ಷಸಿಯೊಬ್ಬಳು ತನ್ನ ಮಕ್ಕಳೊಡನೆ ಬಂದಳು.

೨೧. ಆ ಮಕ್ಕಳು ತಿನ್ನಲು ಏನಾದರೂ ಬೇಕೆಂದು ಕೇಳಿದಾಗ ಆ ರಾಕ್ಷಸಿಯು ಹೀಗೆಂದಳು. "ಸ್ವಲ್ಪ ಕಾದಿರಿ. ಬೆಳಿಗ್ಗೆ ನಿಮಗೆ ಬ್ರಾಹ್ಮಣನ ಮಾಂಸವನ್ನು ಕೊಡುವೆನು. ಇಂದು ಅವನನ್ನು ಅವರು ಕೊಲ್ಲಲಿಲ್ಲ."

೨೨. "ಅವನನ್ನು ಇಂದು ಏಕೆ ಕೊಲ್ಲಲಿಲ್ಲ ?' ಎಂದು ಮಕ್ಕಳು ಕೇಳಿದುದಕ್ಕೆ ರಾಕ್ಷಸಿ "ಆ ಬ್ರಾಹ್ಮಣನನ್ನು ನೋಡಿ ಸತ್ತ ಮೀನು ನಕ್ಕಿತು ಎಂಬ ಕಾರಣದಿಂದ ಅವನನ್ನು ಇಂದು ಕೊಲ್ಲಲಿಲ್ಲ ' ಎಂದು ಹೇಳಿದಳು.

೨೩. ಮತ್ತೆ ಮಕ್ಕಳು ಅವಳನ್ನು 'ಮೀನು ನಕ್ಕಿದ್ದೇಕೆ ?' ಎಂದು ಕೇಳಿದರು. ಆಗ ರಾಕ್ಷಸಿಯು "ರಾಜನ ಎಲ್ಲ ರಾಣಿಯರೂ ನೀತಿಗೆಟ್ಟಿದ್ದಾರೆ.

೨೪. ಅಂತಃಪುರದಲ್ಲಿ ಎಲ್ಲೆಲ್ಲೂ ಹೆಣ್ಣುವೇಷ ಧರಿಸಿದ ಗಂಡಸರು ಸೇರಿಕೊಂಡಿದ್ದಾರೆ. ಯಾವ ಅಪರಾಧವನ್ನೂ ಮಾಡದ ಬ್ರಾಹ್ಮಣನ ವಧೆಯಾಗುತ್ತಿದೆ ಎಂದು ಮೀನು ನಕ್ಕಿತು" ಎಂದು ಹೇಳಿದಳು.

೨೫. ಎಲ್ಲೆಲ್ಲೋ ಓಡಾಡುತ್ತಿರುವ ಪ್ರಾಣಿಗಳು ರಾಜನ ಅತ್ಯಂತ ಅವಿವೇಕವನ್ನು ಕಂಡು ನಕ್ಕಾಗ ಅವುಗಳಿಗೆ ಇಂತಹ ವಿಕ್ರಿಯೆಗಳು ಉಂಟಾಗುತ್ತವೆ.

---

ತಚ್ಛ್ರುತ್ವಾ ನಿಶಿ ತತ್ರಾಹಂ ಗತ್ವಾ ತಾಲೋಪರಿ ಸ್ಥಿತಃ ।
ಅಪಶ್ಯಂ ರಾಕ್ಷಸೀಂ ಘೋರಾಂ ಬಾಲೈಃ ಪುತ್ರೈಃ ಸಹಾಗತಾಮ್ ॥ ೨೦
ಸಾ ಭಕ್ಷ್ಯಂ ಯಾಚಮಾನಾಂಸ್ತಾನ್ ಅವಾದೀತ್ ಪ್ರತಿಪಾಲ್ಯತಾಮ್ ।
ಪ್ರಾತರ್ವೋ ವಿಪ್ರಮಾಂಸಾನಿ ದಾಸ್ಯಾಮ್ಯದ್ಯ ಹತೋ ನ ಸಃ ॥ ೨೧
ಕಸ್ಮಾತ್ ಸ ನ ಹತೋಽದ್ಯೇತಿ ಪೃಷ್ಟಾ ತೈರಬ್ರವೀತ್ ಪುನಃ ।
ತಂ ಹಿ ದೃಷ್ಟ್ವಾ ಮೃತೋಽಪೀಹ ಮತ್ಸ್ಯೋ ಹಸಿತವಾನಿತಿ ॥ ೨೨
ಹಸಿತಂ ಕಿಮು ತೇನೇತಿ ಪೃಷ್ಟಾ ಭೂಯಃ ಸುತೈಶ್ಚ ಸಾ ।
ಅವೋಚದ್ ರಾಕ್ಷಸೀ ರಾಜ್ಞಃ ಸರ್ವಾ ರಾಜ್ಞ್ಯೋಽಪಿ ವಿಪ್ಲುತಾಃ ॥ ೨೩
ಸರ್ವತ್ರಾಂತಃಪುರೇ ಹ್ಯತ್ರ ಸ್ತ್ರೀರೂಪಾಃ ಪುರುಷಾಃ ಸ್ಥಿತಾಃ ।
ಹನ್ಯತೇಽನಪರಾಧಸ್ತು ವಿಪ್ರ ಇತ್ಯಹಸೀತ್ ತಿಮಿಃ ॥ ೨೪
ಭೂತಾನಾಂ ಪಾರ್ಥಿವಾತ್ಯರ್ಥನಿರ್ವಿವೇಕತ್ವಹಾಸಿನಾಮ್ ।
ಸರ್ವಾಂತಶ್ಚಾರಿಣಾಂ ಹ್ಯೇತಾ ಭವಂತ್ಯೇವ ಚ ವಿಕ್ರಿಯಾಃ ॥ ೨೫

೨೬. ಅವಳ ಆ ಮಾತುಗಳನ್ನು ಕೇಳಿ ನಾನು (ವರರುಚಿಯು) ಅಲ್ಲಿಂದ ಹಿಂದೆ ಬಂದೆನು. ಬೆಳಗಾದ ಮೇಲೆ ಮೀನಿನ ನಗೆಯ ಕಾರಣವನ್ನು ರಾಜನಿಗೆ ತಿಳಿಸಿದೆನು.

೨೭. ರಾಜನು ಅಂತಃಪುರದಲ್ಲಿ ಸೇರಿಕೊಂಡಿದ್ದ ಹೆಣ್ಣುವೇಷದಲ್ಲಿದ್ದ ಪುರುಷರನ್ನು ಹಿಡಿದು ತರಿಸಿ ನನ್ನನ್ನು ಬಹುಮಾನಿಸಿದ್ದಲ್ಲದೆ ಆ ಬ್ರಾಹ್ಮಣನನ್ನು ಮರಣದಂಡನೆಯಿಂದ ಮುಕ್ತಗೊಳಿಸಿದನು.

೨೮. ಈ ಪ್ರಕಾರವಾದ ರಾಜನ ಸ್ವಚ್ಛಂದ ಚೇಷ್ಟೆಗಳನ್ನು ನೋಡಿ ನಾನು ಖಿನ್ನನಾಗಿರಲು ಒಮ್ಮೆ ಅಲ್ಲಿಗೆ ಹೊಸ ಚಿತ್ರಕಲಾವಿದನೊಬ್ಬನು ಬಂದನು.

೨೯. ಅವನು ಚಿತ್ರಪಟದಲ್ಲಿ ಯೋಗನಂದರಾಜನನ್ನೂ ಮಹಾರಾಣಿಯನ್ನೂ ಬರೆದನು. ಆ ಚಿತ್ರವು ಮಾತು ಚಲನವಲನಗಳಿಲ್ಲದಿದ್ದರೂ ಜೀವಸಹಿತವಾಗಿದ್ದಂತೆ ಇತ್ತು.

೩೦. ಸಂತುಷ್ಟನಾದ ರಾಜನು ಆ ಚಿತ್ರಕಾರನನ್ನು ಸಂಪತ್ತುಗಳಿಂದ ತುಂಬಿಸಿದನು. ನಿವಾಸದಲ್ಲಿ ಆ ಚಿತ್ರಪಟವನ್ನು ಗೋಡೆಗೆ ತೂಗುಹಾಕಿಸಿದನು.

೩೧. ಒಮ್ಮೆ ಆ ನಿವಾಸದಲ್ಲಿ ನಾನು ಪ್ರವೇಶಿಸಿದಾಗ ಚಿತ್ರದಲ್ಲಿದ್ದ ಆ ಮಹಾರಾಣಿಯು ಸರ್ವಲಕ್ಷಣಸಂಪನ್ನೆ ಎಂದು ನನಗೆ ಅನಿಸಿತು.

೩೨. ನನಗಿದ್ದ ಪ್ರತಿಭೆಯಿಂದ ನಾನು ಅವಳ ಉಳಿದ ಲಕ್ಷಣಗಳ ಆಧಾರದ ಮೇಲೆ ಅವಳ ನಡುವಿನ ಮೇಲೆ ಒಂದು ಕಪ್ಪು ಮಚ್ಚೆ ಇರಬೇಕೆಂದು ಊಹಿಸಿ ಚಿತ್ರದಲ್ಲಿ ಅದನ್ನು ಬರೆದೆನು.

---

ಏತತ್ತಸ್ಯಾ ವಚಃ ಶ್ರುತ್ವಾ ತತೋಽಪಕ್ರಾಂತವಾನಹಮ್ ।
ಪ್ರಾತಶ್ಚ ಮತ್ಸ್ಯಹಾಸಸ್ಯ ಹೇತುಂ ರಾಜ್ಞೇ ನ್ಯವೇದಯಮ್ ॥ ೨೬
ಪ್ರಾಪ್ಯ ಚಾಂತಃಪುರೇಭ್ಯಸ್ತಾನ್ ಸ್ತ್ರೀರೂಪಾನ್ ಪುರುಷಾಂಸ್ತತಃ ।
ಬಹ್ವಮನ್ಯತ ಮಾಂ ರಾಜಾ ವಧಾದ್ ವಿಪ್ರಂ ಚ ಮುಕ್ತವಾನ್ ॥ ೨೭
ಇತ್ಯಾದಿ ಚೇಷ್ಟಿತಂ ದೃಷ್ಟ್ವಾ ತಸ್ಯ ರಾಜ್ಞೋ ವಿಶೃಂಖಲಮ್ ।
ಖಿನ್ನೇ ಮಯಿ ಕದಾಚಿಚ್ಚ ತತ್ರಾಗಾಚ್ಚಿತ್ರಕೃನ್ನವಃ ॥ ೨೮
ಅಲಿಖತ್ ಸ ಮಹಾದೇವೀಂ ಯೋಗನಂದಂ ಚ ತಂ ಪಟೇ ।
ಸಜೀವಮಿವ ತಚ್ಚಿತ್ರಂ ವಾಕ್ಚೇಷ್ಟಾರಹಿತಂ ತ್ವಭೂತ್ ॥ ೨೯
ತಂ ಚ ಚಿತ್ರಕರಂ ರಾಜಾ ತುಷ್ಟೋ ವಿತ್ತೈರಪೂರಯತ್ ।
ತಂ ಚ ವಾಸಗೃಹೇ ಚಿತ್ರಪಟಂ ಭಿತ್ತಾವಕಾರಯತ್ ॥ ೩೦
ಏಕದಾ ಚ ಪ್ರವಿಷ್ಟಸ್ಯ ವಾಸಕೇ ತತ್ರ ಸಾ ಮಮ ।
ಸಂಪೂರ್ಣಲಕ್ಷಣಾ ದೇವೀ ಪ್ರತಿಭಾತಿ ಸ್ಮ ಚಿತ್ರಗಾ ॥ ೩೧
ಲಕ್ಷಣಾಂತರಸಂಬಂಧಾದಭ್ಯೂಹ್ಯ ಪ್ರತಿಭಾವಶಾತ್ ।
ಅಥಾಕಾರ್ಷಮಹಂ ತಸ್ಯಾಸ್ತಿಲಕಂ ಮೇಖಲಾಪದೇ ॥ ೩೨

೩೩. ಅದರಿಂದ ಅವಳನ್ನು ಸಕಲ ಲಕ್ಷಣವುಳ್ಳವಳನ್ನಾಗಿ ಮಾಡಿ ನಾನು ಹೊರಟುಹೋದೆನು. ಆಮೇಲೆ ಅಲ್ಲಿಗೆ ಬಂದ ಯೋಗನಂದನು ಆ ಮಚ್ಚೆಯನ್ನು ನೋಡಿದನು.

೩೪. "ಇದನ್ನು ಇಲ್ಲಿ ಬರೆದವರಾರು ?' ಎಂದು ಅವನು ಅಲ್ಲಿದ್ದ ಹಿರಿಯರನ್ನು ಕೇಳಿದನು. ಆ ಮಚ್ಚೆಯನ್ನು ಬರೆದವನು ವರರುಚಿ ಎಂದು ಅವರು ನನ್ನ ಬಗೆಗೆ ಹೇಳಿದರು.

೩೫. "ದೇವಿಯ ಗುಪ್ತಸ್ಥಾನದಲ್ಲಿರುವ ಈ ಮಚ್ಚೆ ನನ್ನನ್ನು ಬಿಟ್ಟು ಬೇರಾರಿಗೂ ತಿಳಿಯದು. ಹಾಗಿದ್ದರೂ ಈ ವರರುಚಿ ಇದನ್ನು ತಿಳಿದುಕೊಂಡಿದ್ದು ಹೇಗೆ ?

೩೬. ಇವನು ಬಚ್ಚಿಟ್ಟುಕೊಂಡು ನನ್ನ ಅಂತಃಪುರವನ್ನು ಕೆಡಿಸಿದ್ದಾನೆ. ಅದರಿಂದಲೇ ಅಲ್ಲಿದ್ದ ಹೆಣ್ಣುವೇಷದ ಗಂಡಸರನ್ನೂ ನೋಡಿದ್ದಾನೆ."

೩೭. ಕೋಪದಿಂದ ಕುದಿದ ಯೋಗನಂದನು ಹೀಗೆ ಯೋಚಿಸಿದನು. ಮೂಢರಿಗೂ ಪರಸ್ಪರ ಹೊಂದುವ ಇಂತಹ ಘಟನೆಗಳು ಒದಗಿ ಬರುತ್ತವೆ.

೩೮. ಕೂಡಲೇ ಅವನು ಶಕಟಾಲನನ್ನು ಕರೆದು 'ದೇವಿಯನ್ನೇ ಕೆಡಿಸಿರುವ ಕಾರಣದಿಂದ ವರರುಚಿಯನ್ನು ನೀನು ವಧಿಸಬೇಕು' ಎಂದು ತನ್ನ ಮನಸ್ಸಿಗೆ ಬಂದಂತೆ ಆಜ್ಞಾಪಿಸಿದನು.

---

ಸಂಪೂರ್ಣಲಕ್ಷಣಾಂ ತೇನ ಕೃತ್ವೈನಾಂ ಗತವಾನಹಮ್ ।
ಪ್ರವಿಷ್ಟೋ ಯೋಗನಂದೋಽಥ ತಿಲಕಂ ತಂ ವ್ಯಲೋಕಯತ್ ॥ ೩೩
ಕೇನಾಯಂ ರಚಿತೋಽತ್ರೇತಿ ಸೋಽಪೃಚ್ಛಚ್ಚ ಮಹತ್ತರಾನ್ ।
ತೇ ಚ ನ್ಯವೇದಯಂಸ್ತಸ್ಮೈ ಕರ್ತಾರಂ ತಿಲಕಸ್ಯ ಮಾಮ್ ॥ ೩೪
ದೇವ್ಯಾ ಗುಪ್ತಪ್ರದೇಶಸ್ಥಮಿಮಂ ನಾನ್ಯೋ ಮಯಾ ವಿನಾ ।
ವೇತ್ತಿ ತಜ್ಜ್ಞಾತವಾನೇವಮ್ ಅಸೌ ವರರುಚಿಃ ಕಥಮ್ ॥ ೩೫
ಛನ್ನಃ ಕೃತೋಽಮುನಾ ನೂನಂ ಮಮಾಂತಃಪುರವಿಪ್ಲವಃ ।
ದೃಷ್ಟವಾನತ ಏವಾಯಂ ಸ್ತ್ರೀರೂಪಾಂಸ್ತತ್ರ ತಾನ್ ನರಾನ್ ॥ ೩೬
ಇತಿ ಸಂಚಿಂತಯಾಮಾಸ ಯೋಗನಂದಃ ಕ್ರುಧಾ ಜ್ವಲನ್ ।
ಜಾಯಂತೇ ಬತ ಮೂಢಾನಾಂ ಸಂವಾದಾ ಅಪಿ ತಾದೃಶಾಃ ॥ ೩೭
ತತಃ ಸ್ವೈರಂ ಸಮಾಹೂಯ ಶಕಟಾಲಂ ಸಮಾದಿಶತ್ ।
ತ್ವಯಾ ವರರುಚಿರ್ವಧ್ಯೋ ದೇವೀವಿಧ್ವಂಸನಾದಿತಿ ॥ ೩೮

೩೯. 'ಪ್ರಭುಗಳು ಆಜ್ಞಾಪಿಸಿದಂತೆ ಮಾಡುತ್ತೇನೆ' ಎಂದು ಹೇಳಿ ಶಕಟಾಲನು ಹೊರಗೆ ಬಂದನು. ವರರುಚಿಯನ್ನು ಕೊಲ್ಲಲು ತನಗೆ ಶಕ್ತಿ ಇಲ್ಲ ಎಂದು ಅವನು ಯೋಚಿಸಿದನು.

೪೦. "ವರರುಚಿ ದಿವ್ಯಬುದ್ಧಿಪ್ರಭಾವವನ್ನುಳ್ಳವನು. ನನ್ನನ್ನು ಆಪತ್ತಿನಿಂದ ಮೇಲೆತ್ತಿ ಉಳಿಸಿದವನು, ಬ್ರಾಹ್ಮಣ ಬೇರೆ. ಆದ್ದರಿಂದ ಅವನನ್ನು ಗುಟ್ಟಾಗಿ ಕಾಪಾಡುತ್ತೇನೆ."

೪೧. ಹೀಗೆ ನಿಶ್ಚಯಿಸಿ ಶಕಟಾಲನು ನನ್ನ ಬಳಿಗೆ ಬಂದು ರಾಜನ ನಿಷ್ಕಾರಣವಾದ ಕೋಪದ ಬಗ್ಗೆಯೂ, ನನ್ನ ವಧೆಯಲ್ಲಿ ಅದು ಈಗ ಪರಿಣಮಿಸಿರುವುದನ್ನೂ ತಿಳಿಸಿ ಮತ್ತಿಂತೆಂದನು.

೪೨. ""ವಂಚಿಸುವುದಕ್ಕಾಗಿ ಬೇರೆ ಯಾವನೋ ಒಬ್ಬನನ್ನು ನಾನು ಕೊಲ್ಲುತ್ತೇನೆ. ನೀನು ನನ್ನ ಮನೆಯಲ್ಲಿ ಗುಟ್ಟಾಗಿ ಇದ್ದುಬಿಡು. ರಾಜನ ಕೋಪದಿಂದ ನನ್ನನ್ನು ಕಾಪಾಡಿಕೊಳ್ಳುವುದಕ್ಕಾಗಿ ಹೀಗೆ ಮಾಡಬೇಕು."

೪೩. ಅವನ ಮಾತಿನಂತೆ ನಾನು ಅವನ ಮನೆಯಲ್ಲಿ ಗುಟ್ಟಾಗಿ ಇದ್ದುಬಿಟ್ಟೆನು. ನನ್ನನ್ನು ಕೊಂದಂತೆ ವಾರ್ತೆಯನ್ನು ಹಬ್ಬಿಸುವ ಸಲುವಾಗಿ ಶಕಟಾಲನು ಬೇರೆ ಯಾವನೋ ಒಬ್ಬನನ್ನು ರಾತ್ರಿವೇಳೆಯಲ್ಲಿ ಕೊಂದನು.

೪೪. ಹೀಗೆ ರಾಜನೀತಿಯನ್ನು ಅನುಷ್ಠಾನ ಮಾಡಿದ ಅವನಿಗೆ ನಾನು ಪ್ರೀತಿಯಿಂದ ಹೇಳಿದೆನು. "'ಮಂತ್ರಿ ಎಂದರೆ ನೀನೇ. ಏಕೆಂದರೆ ನನ್ನನ್ನು ಕೊಲ್ಲದೆ ಇರಲು ನೀನು ನಿಶ್ಚಯಿಸಿದೆ.

---

ಯಥಾಜ್ಞಾಪಯಸೀತ್ಯುಕ್ತ್ವಾ ಶಕಟಾಲೋಽಗಮದ್ ಬಹಿಃ ।
ಅಚಿಂತಯಚ್ಚ ಶಕ್ತಿಃ ಸ್ಯಾದ್ಧಂತುಂ ವರರುಚಿಂ ನ ಮೇ ॥ ೩೯
ದಿವ್ಯಬುದ್ಧಿಪ್ರಭಾವೋಽಸಾವುದ್ಧರ್ತಾ ಚ ಮಮಾಪದಃ ।
ವಿಪ್ರಶ್ಚ ತದ್ವರಂ ಗುಪ್ತಂ ಸಂಪ್ರತಿ ಸ್ವೀಕರೋಮಿ ತಮ್ ॥ ೪೦
ಇತಿ ನಿಶ್ಚಿತ್ಯ ಸೋಽಭ್ಯೇತ್ಯ ರಾಜ್ಞಃ ಕೋಪಮಕಾರಣಮ್ ।
ವಧಾಂತಂ ಕಥಯಿತ್ವಾ ಮೇ ಶಕಟಾಲೋಽಬ್ರವೀತ್ ತತಃ ॥ ೪೧
ಅನ್ಯಂ ಕಂಚಿತ್ ಪ್ರವಾದಾಯ ಹನ್ಮ್ಯಹಂ ತ್ವಂ ಚ ಮದ್ಗೃಹೇ ।
ಪ್ರಚ್ಛನ್ನಸ್ತಿಷ್ಠ ಮಾಮಸ್ಮಾದ್ ರಕ್ಷಿತುಂ ಕೋಪನಾನ್ನೃಪಾತ್ ॥ ೪೨
ಇತಿ ತದ್ವಚನಾಚ್ಛನ್ನಸ್ತದ್‌ಗೃಹೇಽವಸ್ಥಿತೋಽಭವಮ್ ।
ಸ ಚಾನ್ಯಂ ಹತವಾನ್ ಕಂಚಿನ್ಮದ್ವಧಖ್ಯಾತಯೇ ನಿಶಿ ॥ ೪೩
ಏವಂ ಪ್ರಯುಕ್ತನೀತಿಂ ತಂ ಪ್ರೀತ್ಯಾವೋಚಮಹಂ ತದಾ ।
ಏಕೋ ಮನ್ತ್ರೀ ಭವಾನ್ ಯೇನ ಹಂತುಂ ಮಾಂ ನ ಕೃತಾ ಮತಿಃ ॥ ೪೪

೪೫. ಆದರೆ ನನ್ನನ್ನು ಕೊಲ್ಲಲು ಯಾರಿಗೂ ಸಾಧ್ಯವಿಲ್ಲ. ನನಗೊಬ್ಬ ರಾಕ್ಷಸಮಿತ್ರನಿದ್ದಾನೆ. ನಾನು ಇಷ್ಟಪಟ್ಟರೆ ಅವನು ಪ್ರಪಂಚವನ್ನೇ ನುಂಗಿ ಹಾಕುತ್ತಾನೆ. ನೆನೆಸಿಕೊಂಡರೆ ಸಾಕು, ಅವನು ಬಂದುಬಿಡುತ್ತಾನೆ.

೪೬. ಇಲ್ಲಿರುವ ಇಂದ್ರದತ್ತನೆಂಬ ರಾಜನನ್ನು ಕೊಲ್ಲಬೇಕು, ನನ್ನ ಮಿತ್ರನಾದ ದ್ವಿಜನನ್ನಲ್ಲ." ಈ ಮಾತನ್ನು ಕೇಳಿದ ಶಕಟಾಲನು "ನನಗೆ ಆ ರಾಕ್ಷಸನನ್ನು ತೋರಿಸು" ಎಂದು ಕೇಳಿದನು.

೪೭. ಆಗ ಧ್ಯಾನಮಾತ್ರದಿಂದಲೇ ಪ್ರತ್ಯಕ್ಷನಾದ ರಾಕ್ಷಸನನ್ನು ಅವನಿಗೆ ತೋರಿಸಿದೆನು. ರಾಕ್ಷಸನ ದರ್ಶನದಿಂದ ಶಕಟಾಲನು ಹೆದರಿಕೊಂಡನು. ಅವನಿಗೆ ಆಶ್ಚರ್ಯವೂ ಆಯಿತು.

೪೮. ಆ ರಾಕ್ಷಸನು ಅದೃಶ್ಯನಾದ ಮೇಲೆ ಶಕಟಾಲನು ನನ್ನನ್ನು ಕುರಿತು "ನಿನಗೆ ರಾಕ್ಷಸನು ಮಿತ್ರನಾದುದು ಹೇಗೆ ?" ಎಂದು ಕೇಳಿದನು.

## ವರರುಚಿಗೆ ರಾಕ್ಷಸನು ಮಿತ್ರನಾದ ಕಥೆ

೪೯. ಆಗ ನಾನು "ಹಿಂದೆ ಕಾವಲಿಗಾಗಿ ನಗರದಲ್ಲಿ ಸುತ್ತುತ್ತಿದ್ದ ನಗರಾಧಿಪರು ಒಂದೊಂದು ರಾತ್ರಿ ಒಬ್ಬೊಬ್ಬರಂತೆ ನಾಶವಾಗುತ್ತಿದ್ದರು.

೫೦. ಆ ವಿಷಯವನ್ನು ಕೇಳಿ ಯೋಗನಂದನು ನನ್ನನ್ನು ನಗರಾಧಿಪನನ್ನಾಗಿ ನಿಯಮಿಸಿದನು. ರಾತ್ರಿ ನಗರದಲ್ಲಿ ಸುತ್ತುತ್ತಿದ್ದ ನಾನು ಅಲ್ಲಿ ಅಲೆಯುತ್ತಿದ್ದ ರಾಕ್ಷಸನನ್ನು ಕಂಡೆನು.

---

ನ ಹಿ ಹಂತುಮಹಂ ಶಕ್ಯೋ ರಾಕ್ಷಸೋ ಮಿತ್ರಮಸ್ತಿ ಮೇ ।
ಧ್ಯಾತಮಾತ್ರಾಗತೋ ವಿಶ್ವಂ ಗ್ರಸತೇ ಸ ಮದಿಚ್ಛಯಾ ॥ ೪೫
ರಾಜಾ ತ್ವಿಹೇಂದ್ರದತ್ತಾಖ್ಯಃ ಸಖಾ ವಧ್ಯೋ ನ ಮೇ ದ್ವಿಜಃ ।
ತಚ್ಛ್ರುತ್ವಾ ಸೋಽಬ್ರವೀನ್ಮಂತ್ರೀ ರಕ್ಷೋ ಮೇ ದರ್ಶ್ಯತಾಮಿತಿ ॥ ೪೬
ತತೋ ಧ್ಯಾನಾಗತಂ ತಸ್ಮೈ ತದ್ರಕ್ಷೋಽಹಮದರ್ಶಯಮ್ ।
ತದ್ದರ್ಶನಾಚ್ಚ ವಿತ್ರಸ್ತೋ ವಿಸ್ಮಿತಶ್ಚ ಬಭೂವ ಸಃ ॥ ೪೭
ರಕ್ಷಸ್ಯಂತರ್ಹಿತೇ ತಸ್ಮಿನ್ ಶಕಟಾಲಃ ಸ ಮಾಂ ಪುನಃ ।
ಕಥಂ ತೇ ರಾಕ್ಷಸೋ ಮಿತ್ರಂ ಸಂಜಾತ ಇತಿ ಪೃಷ್ಟವಾನ್ ॥ ೪೮
ತತೋಽಹಮವದಂ ಪೂರ್ವಂ ರಕ್ಷಾರ್ಥಂ ನಗರೇ ಭ್ರಮನ್ ।
ರಾತ್ರೌ ರಾತ್ರೌ ಕ್ಷಯಂ ಪ್ರಾಪದ್ ಏಕೈಕೋ ನಗರಾಧಿಪಃ ॥ ೪೯
ತಚ್ಛ್ರುತ್ವಾ ಯೋಗನಂದೋ ಮಾಮಕರೋನ್ನಗರಾಧಿಪಮ್ ।
ಭ್ರಮಂಶ್ಚಾಪಶ್ಯಮತ್ರಾಹಂ ಭ್ರಮಂತಂ ರಾಕ್ಷಸಂ ನಿಶಿ ॥ ೫೦

೫೧. ಆ ರಾಕ್ಷಸನು ನನ್ನನ್ನು ಉದ್ದೇಶಿಸಿ "ಈ ನಗರದೊಳಗೆ ಇರುವ ಅತ್ಯಂತ ಸುಂದರಿ ಸ್ತ್ರೀ ಯಾರು ?" ಎಂದು ಕೇಳಿದನು. ಅದನ್ನು ಕೇಳಿ ಜೋರಾಗಿ ನಕ್ಕು ನಾನಿಂತೆಂದೆನು.

೫೨. "ಮೂರ್ಖ, ಯಾವನಿಗೆ ಯಾವಳು ಇಷ್ಟಳೋ ಅವಳೇ ಅವನಿಗೆ ಸುಂದರಿ." ಆ ಉತ್ತರವನ್ನು ಕೇಳಿದ ರಾಕ್ಷಸನು "ನೀನೊಬ್ಬನು ನನ್ನನ್ನು ಗೆದ್ದೆ." ಎಂದು ನನಗೆ ಹೇಳಿದನು.

೫೩. ಪ್ರಶ್ನೆಗೆ ಸರಿಯಾದ ಉತ್ತರವನ್ನು ಕೊಟ್ಟು ವಧೆಯಿಂದ ತಪ್ಪಿಸಿಕೊಂಡ ನನಗೆ ಅವನು ಮತ್ತೆ ಹೇಳಿದನು. "ನಿನ್ನಿಂದ ನನಗೆ ಸಂತೋಷವಾಗಿದೆ. ಈಗ ನೀನು ನನ್ನ ಮಿತ್ರ ನೀನು ನೆನಪಿಸಿಕೊಂಡಾಗ ನಿನ್ನ ಬಳಿ ಬರುತ್ತೇನೆ."

೫೪. ಇಷ್ಟು ಹೇಳಿ ರಾಕ್ಷಸನು ಅಂತರ್ಧಾನವನ್ನು ಹೊಂದಿದನು. ನನ್ನ ದಾರಿಯನ್ನು ಹಿಡಿದು ನಾನು ಬಂದೆನು. ಹೀಗೆ ರಾಕ್ಷಸನು ಆಪತ್ತಿನಲ್ಲಿ ಸಹಾಯ ಮಾಡುವವನಾಗಿ ನನ್ನ ಮಿತ್ರನಾಗಿದ್ದಾನೆ."

೫೫. ನಾನು ಹೀಗೆ ಹೇಳಿದ ಮೇಲೆ ಮತ್ತೆ ಶಕಟಾಲನು ನನ್ನನ್ನು ಬೇಡಿಕೊಂಡಾಗ ಧ್ಯಾನದಿಂದ ನನ್ನ ಎದುರಿಗೆ ಪ್ರತ್ಯಕ್ಷಳಾದ ಗಂಗೆಯನ್ನೂ ಅವನಿಗೆ ತೋರಿಸಿದೆನು.

೫೬. ನಾನು ಮಾಡಿದ ಸ್ತೋತ್ರಗಳಿಂದ ಸಂತುಷ್ಟಳಾದ ಮೇಲೆ ಗಂಗಾದೇವಿ ಅಂತರ್ಧಾನವನ್ನು ಹೊಂದಿದಳು. ನನಗೆ ವಿಧೇಯನಾಗಿ ಶಕಟಾಲನು ನನ್ನ ಸಹಾಯಕನಾದನು.

---

ಸ ಚ ಮಾಮವದದ್ ಬ್ರೂಹಿ ವಿದ್ಯತೇ ನಗರೇಽತ್ರ ಕಾ ।
ಸುರೂಪಾ ಸ್ತ್ರೀತಿ ತಚ್ಛ್ರುತ್ವಾ ವಿಹಸ್ಯಾಹಂ ತಮಬ್ರವಮ್ ॥ ೫೧
ಯಾ ಯಸ್ಯಾಭಿಮತಾ ಮೂರ್ಖ ಸುರೂಪಾ ತಸ್ಯ ಸಾ ಭವೇತ್ ।
ತಚ್ಛ್ರುತ್ವೈವ ತ್ವಯೈಕೇನ ಜಿತೋಽಸ್ಮೀತ್ಯವದತ್ ಸ ಮಾಮ್ ॥ ೫೨
ಪ್ರಶ್ನಮೋಕ್ಷಾದ್ ವಧೋತ್ತೀರ್ಣಂ ಮಾಂ ಪುನಶ್ಚಾಬ್ರವೀದಸೌ ।
ತುಷ್ಟೋಽಸ್ಮೀತಿ ಸುಹೃನ್ಮೇ ತ್ವಂ ಸಂನಿಧಾಸ್ಯೇ ಚ ತೇ ಸ್ಮೃತಃ ॥ ೫೩
ಇತ್ಯುಕ್ತ್ವಾಂತರ್ಹಿತೇ ತಸ್ಮಿನ್ ಯಥಾಗತಮಗಾಮಹಮ್ ।
ಏವಮಾಪತ್ಸಹಾಯೋ ಮೇ ರಾಕ್ಷಸೋ ಮಿತ್ರತಾಂ ಗತಃ ॥ ೫೪
ಇತ್ಯುಕ್ತವಾನಹಂ ಭೂಯಃ ಶಕಟಾಲೇನ ಚಾರ್ಥಿತಃ ।
ಗಂಗಾಮದರ್ಶಯಂ ತಸ್ಮೈ ಮೂರ್ತಾಂ ಧ್ಯಾನಾದುಪಸ್ಥಿತಾಮ್ ॥ ೫೫
ಸ್ತುತಿಭಿಸ್ತೋಷಿತಾ ಸಾ ಚ ಮಯಾ ದೇವೀ ತಿರೋದಧೇ ।
ಬಭೂವ ಶಕಟಾಲಶ್ಚ ಸಹಾಯಃ ಪ್ರಣತೋ ಮಯಿ ॥ ೫೬

೫೭ – ೫೮ ಗುಪ್ತ ಸ್ಥಾನದಲ್ಲಿದ್ದು ಬೇಸರಗೊಂಡಿದ್ದ ನನ್ನನ್ನು ಉದ್ದೇಶಿಸಿ ಒಮ್ಮೆ ಮಂತ್ರಿ ಶಕಟಾಲನಿಂತೆಂದನು. "ಎಲ್ಲವನ್ನೂ ತಿಳಿದವನಾಗಿರುವ ನೀನು ಮನಸ್ಸನ್ನು ಬೇಸರಕ್ಕೆ ಈಡುಮಾಡುವುದೇಕೆ ? ರಾಜರ ಬುದ್ಧಿಗಳು ಅವಿವೇಕದಲ್ಲೇ ತೊಡಗಿರುತ್ತವೆ ಎಂಬುದು ನಿನಗೆ ತಿಳಿಯದೆ ? ಬೇಗನೆ ಅದರ ಶುದ್ಧಿಯೂ ಉಂಟಾಗುವುದು. ಈ ವಿಷಯದಲ್ಲೊಂದು ಕಥೆಯನ್ನು ಕೇಳು.

## ಆದಿತ್ಯವರ್ಮನ ಕಥೆ

೫೯. ಹಿಂದೆ ಇಲ್ಲಿ ಆದಿತ್ಯವರ್ಮನೆಂಬ ರಾಜನಿದ್ದನು. ಶಿವವರ್ಮ ಎಂಬ ಬುದ್ಧಿಶಾಲಿ ಅವನ ಮಂತ್ರಿ.

೬೦. ಒಮ್ಮೆ ಆ ರಾಜನ ರಾಣಿಯೊಬ್ಬಳು ಗರ್ಭಿಣಿಯಾದಳು. ಅದನ್ನು ತಿಳಿದುಕೊಂಡ ರಾಜನು ಅಂತಃಪುರದ ಕಾವಲುಗಾರರನ್ನು ಪ್ರಶ್ನಿಸಿದನು.

೬೧. ನಾನು ಇವಳ ಅಂತಃಪುರದೊಳಗೆ ಕಾಲಿಟ್ಟು ಎರಡು ವರ್ಷಗಳೇ ಕಳೆದಿವೆ. ಹಾಗಿರುವಾಗ ಇವಳು ಈಗ ಗರ್ಭ ಧರಿಸಿರುವುದು ಹೇಗೆ ಎಂದು ಹೇಳಿರಿ, ಎಂದ.

೬೨. ಅಂತಃಪುರಚಾರಿಗಳು "ಪ್ರಭು, ನಿಮ್ಮನ್ನು ಬಿಟ್ಟರೆ ಮತ್ತೆ ಯಾವ ಗಂಡಸಿಗೂ ಅಂತಃಪುರದೊಳಗೆ ಪ್ರವೇಶವೇ ಇಲ್ಲ. ಆದರೆ ನಿಮ್ಮ ಮಂತ್ರಿ ಶಿವವರ್ಮ ಮಾತ್ರ ಯಾವ ಅಡ್ಡಿಯೂ ಇಲ್ಲದೆ ಅಂತಃಪುರದೊಳಕ್ಕೆ ಪ್ರವೇಶಿಸುತ್ತಿರುತ್ತಾನೆ.

---

ಏಕದಾ ಚ ಸ ಮಂತ್ರೀ ಮಾಂ ಗುಪ್ತಸ್ಥಂ ಖಿನ್ನಮಬ್ರವೀತ್ ।
ಸರ್ವಜ್ಞೇನಾಪಿ ಖೇದಾಯ ಕಿಮಾತ್ಮಾ ದೀಯತೇ ತ್ವಯಾ ॥ ೫೭
ಕಿಂ ನ ಜಾನಾಸಿ ಯದ್ರಾಜ್ಞಾಮ್ ಅವಿಚಾರರತಾ ಧಿಯಃ ।
ಅಚಿರಾಚ್ಚ ಭವೇಚ್ಛುದ್ಧಿಸ್ತಥಾ ಚಾತ್ರ ಕಥಾಂ ಶೃಣು ॥ ೫೮
ಆದಿತ್ಯವರ್ಮನಾಮಾತ್ರ ಬಭೂವ ನೃಪತಿಃ ಪುರಾ ।
ಶಿವವರ್ಮಾಭಿಧಾನೋಽಸ್ಯ ಮಂತ್ರೀ ಚಾಭೂನ್ಮಹಾಮತಿಃ ॥ ೫೯
ರಾಜ್ಞಸ್ತಸ್ಯೈಕದಾ ಚೈಕಾ ರಾಜ್ಞೀ ಗರ್ಭಮಧಾರಯತ್ ।
ತದ್ ಬುದ್ಧ್ವಾ ಸ ನೃಪೋಽಪೃಚ್ಛದ್ ಇತ್ಯಂತಃಪುರಚಾರಿಣಃ ॥ ೬೦
ವರ್ಷದ್ವಯಂ ಪ್ರವಿಷ್ಟಸ್ಯ ವರ್ತತೇಽಂತಃಪುರೇಽತ್ರ ಮೇ ।
ತದೇಷಾ ಗರ್ಭಸಂಭೂತಿಃ ಕುತಃ ಸಂಪ್ರತಿ ಕಥ್ಯತಾಮ್ ॥ ೬೧
ಅಥೋಚುಸ್ತೇ ಪ್ರವೇಶೋಽತ್ರ ಪುಂಸೋಽನ್ಯಸ್ಯಾಸ್ತಿ ನ ಪ್ರಭೋ ।
ಶಿವವರ್ಮಾ ತು ತೇ ಮಂತ್ರೀ ಪ್ರವಿಶತ್ಯನಿವಾರಿತಃ ॥ ೬೨

೬೩. ಇದನ್ನು ಕೇಳಿದ ರಾಜನು, 'ನಿಜವಾಗಿ ಅವನೇ ದ್ರೋಹಿ. ಎಲ್ಲರಿಗೂ ತಿಳಿಯುವಂತೆ ಅವನನ್ನು ಕೊಲ್ಲಿಸಿದರೆ ತನಗೇ ಅಪವಾದ ಬರುತ್ತದೆ' ಎಂದು ಆಲೋಚಿಸಿದನು.

೬೪. ಹೀಗೆ ಆಲೋಚಿಸಿ ರಾಜನು ಜಾಣತನದಿಂದ ಶಿವವರ್ಮನನ್ನು ತನ್ನ ಸಾಮಂತ ಮಿತ್ರ ಭೋಗವರ್ಮನ ಬಳಿಗೆ ಕಳುಹಿಸಿದನು.

೬೫. ಶಿವವರ್ಮನ ವಧೆಯನ್ನು ಮಾಡಬೇಕೆಂದು ಸಂದೇಶಪತ್ರವನ್ನು ಬರೆದು ಗೂಢವಾಗಿ ಒಬ್ಬ ಪತ್ರವಾಹಕನೊಡನೆ ಕಳುಹಿಸಿದನು.

೬೬. ಮಂತ್ರಿಯು ಹೋದಮೇಲೆ ಒಂದು ವಾರದಲ್ಲಿ ಆ ರಾಣಿಯು ಹೆದರಿ ಪಲಾಯನ ಮಾಡಿದಳು. ಆಗ ರಾಜಭಟರು ಅವಳನ್ನು ಹಿಡಿದರು. ಅವಳೊಡನೆ ಹೆಣ್ಣುವೇಷವನ್ನು ಧರಿಸಿದ್ದ ಒಬ್ಬ ಗಂಡಸೂ ಇದ್ದನು.

೬೭. ಈ ವಿಷಯವನ್ನು ತಿಳಿದುಕೊಂಡ ಆದಿತ್ಯವರ್ಮನಿಗೆ ಅಂಥ ಮಂತ್ರಿಯನ್ನು ನಿಷ್ಕಾರಣವಾಗಿ ಕೊಲ್ಲಿಸಿದೆನಲ್ಲ ಎಂದು ಪಶ್ಚಾತ್ತಾಪ ಉಂಟಾಯಿತು.

೬೮. ಈ ಸಂದರ್ಭದಲ್ಲಿ ಶಿವವರ್ಮನು ಭೋಗವರ್ಮನ ಬಳಿ ಬಂದು ಸೇರಿದನು. ಪತ್ರವಾಹಕನೂ ಅಲ್ಲಿಗೆ ತಲುಪಿದನು.

೬೯. ಆ ಪತ್ರವನ್ನು ಏಕಾಂತದಲ್ಲಿ ಓದಿದ ಭೋಗವರ್ಮನು ಶಿವವರ್ಮನಿಗೆ ವಿಧಿವಶದಿಂದ ರಾಜನು ಮಾಡಿದ್ದ ಮರಣದ ಆಜ್ಞೆಯನ್ನು ತಿಳಿಸಿದನು.

---

ತಚ್ಛ್ರುತ್ವಾಚಿಂತಯದ್ ರಾಜಾ ನೂನಂ ದ್ರೋಹೀ ಸ ಏವ ಮೇ ।
ಪ್ರಕಾಶಂ ಚ ಹತೇ ತಸ್ಮಿನ್ನಪವಾದೋ ಭವೇನ್ಮಮ ॥ ೬೩
ಇತ್ಯಾಲೋಚ್ಯ ಸ ತಂ ಯುಕ್ತ್ಯಾ ಶಿವವರ್ಮಾಣಮೀಶ್ವರಃ ।
ಸಾಮಂತಸ್ಯಾಂತಿಕಂ ಸಖ್ಯುಃ ಪ್ರಾಹಿಣೋದ್ ಭೋಗವರ್ಮಣಃ ॥ ೬೪
ತದ್ವಧಂ ತಸ್ಯ ಲೇಖೇನ ಸಂದಿಶ್ಯ ತದನಂತರಮ್ ।
ನಿಗೂಢಂ ಸ ನೃಪಸ್ತತ್ರ ಲೇಖಹಾರಂ ವ್ಯಸರ್ಜಯತ್ ॥ ೬೫
ಯಾತೇ ಮಂತ್ರಿಣಿ ಸಪ್ತಾಹೇ ಗತೇ ಭೀತ್ಯಾ ಪಲಾಯಿತಾ ।
ಸಾ ರಾಜ್ಞೀ ರಕ್ಷಿಭಿರ್ಬದ್ಧಾ ಪುಂಸಾ ಸ್ತ್ರೀರೂಪಿಣಾ ಸಹ ॥ ೬೬
ಆದಿತ್ಯವರ್ಮಾ ತದ್ ಬುದ್ಧ್ವಾ ಸಾನುತಾಪೋಽಭವತ್ತದಾ ।
ಕಿಂ ಮಯಾ ತಾದೃಶೋ ಮಂತ್ರೀ ಘಾತಿತೋಽಕಾರಣಾದಿತಿ ॥ ೬೭
ಅತ್ರಾಂತರೇ ಸ ಚ ಪ್ರಾಪ ನಿಕಟಂ ಭೋಗವರ್ಮಣಃ ।
ಶಿವವರ್ಮಾ ಸ ಚೋಪಾಗಾಲ್ಲೇಖಮಾದಾಯ ಪೂರುಷಃ ॥ ೬೮
ವಾಚಯಿತ್ವಾ ಚ ತಂ ಲೇಖಮೇಕಾಂತೇ ಶಿವವರ್ಮಣೇ ।
ಶಶಂಸ ವಧನಿರ್ದೇಶಂ ಭೋಗವರ್ಮಾ ವಿಧೇರ್ವಶಾತ್ ॥ ೬೯

೭೦. ಮಂತ್ರಿಶ್ರೇಷ್ಠನಾದ ಶಿವವರ್ಮನು "ನೀನು ಈಗಲೇ ನನ್ನನ್ನು ಕೊಂದುಬಿಡು. ಇಲ್ಲದಿದ್ದರೆ ನಾನೇ ನನ್ನನ್ನು ಕೊಂದುಕೊಳ್ಳುತ್ತೇನೆ" ಎಂದು ಭೋಗವರ್ಮನಿಗೆ ಹೇಳಿದನು.

೭೧. ಆ ಮಾತನ್ನು ಕೇಳಿ ವಿಸ್ಮಿತನಾದ ಭೋಗವರ್ಮನು "ಬ್ರಾಹ್ಮಣಶ್ರೇಷ್ಠನೆ, ನೀನು ಹೀಗೆ ಹೇಳಲು ಕಾರಣವೇನೆಂದು ಹೇಳು, ಹೇಳದಿದ್ದರೆ ನನ್ನಾಣೆ" ಎಂದನು.

೭೨. ಆಗ ಮಂತ್ರಿಯು, 'ರಾಜನೆ, ಎಲ್ಲಿ ನನ್ನನ್ನು ಕೊಂದು ಹಾಕುತ್ತಾರೋ, ಆ ದೇಶದಲ್ಲಿ ಹನ್ನೆರಡುವರ್ಷ ಮಳೆ ಬೀಳುವುದಿಲ್ಲ' ಎಂದು ಹೇಳಿದನು.

೭೩–೭೪ ಅದನ್ನು ಕೇಳಿ ಭೋಗವರ್ಮನು ತನ್ನ ಮಂತ್ರಿಗಳೊಡನೆ ಆ ವಿಷಯವನ್ನು ಆಲೋಚಿಸಿದನು. "ರಾಜ ಆದಿತ್ಯವರ್ಮನು ದುಷ್ಟ. ನಮ್ಮ ದೇಶವು ನಾಶಹೊಂದಲೆಂದು ಅವನ ಇಷ್ಟ. ಅವನ ದೇಶದಲ್ಲಿ ಗುಪ್ತವಾಗಿ ಕೊಲ್ಲುವವರಿಲ್ಲವೆ ? ಆದ್ದರಿಂದ ಈ ಮಂತ್ರಿಯನ್ನು ಕೊಲ್ಲಬಾರದು. ಅವನು ಆತ್ಮಹತ್ಯೆಯನ್ನೂ ಮಾಡಿಕೊಳ್ಳದಂತೆ ತಡೆಯಬೇಕು."

೭೫. ಹೀಗೆ ಮಂತ್ರಾಲೋಚನೆಯನ್ನು ಮಾಡಿದ ಮೇಲೆ ಭೋಗವರ್ಮನು ಶಿವವರ್ಮನಿಗೆ ಹಲವರು ರಕ್ಷಕರನ್ನು ಒದಗಿಸಿ ತನ್ನ ದೇಶದಿಂದ ಅವನನ್ನು ಕಳುಹಿಸಿಕೊಟ್ಟನು.

---

ಶಿವವರ್ಮಾಪ್ಯವೋಚತ್ತಂ ಸಾಮಂತಂ ಮಂತ್ರಿಸತ್ತಮಃ ॥
ತ್ವಂ ವ್ಯಾಪಾದಯ ಮಾಂ ನೋ ಚೇನ್ನಿಹನ್ಮ್ಯಾತ್ಮಾನಮಾತ್ಮನಾ ॥ ೭೦
ತಚ್ಛ್ರುತ್ವಾ ವಿಸ್ಮಯಾವಿಷ್ಟೋ ಭೋಗವರ್ಮಾ ಜಗಾದ ತಮ್ ।
ಕಿಮೇತದ್ ಬ್ರೂಹಿ ಮೇ ವಿಪ್ರ ಶಾಪಿತೋऽಸಿ ನ ವಕ್ಷಿ ಚೇತ್ ॥ ೭೧
ಅಥ ವಕ್ತಿ ಸ್ಮ ತಂ ಮಂತ್ರೀ ಹನ್ಯೇऽಹಂ ಯತ್ರ ಭೂಪತೇ ।
ತತ್ರ ದ್ವಾದಶ ವರ್ಷಾಣಿ ದೇಶೇ ದೇವೋ ನ ವರ್ಷತಿ ॥ ೭೨
ತಚ್ಛ್ರುತ್ವಾ ಮಂತ್ರಿಭಿಃ ಸಾರ್ಧಂ ಭೋಗವರ್ಮಾ ವ್ಯಚಿಂತಯತ್ ।
ದುಷ್ಟಃ ಸ ರಾಜಾ ದೇಶಸ್ಯ ನಾಶಮಸ್ಮಾಕಮಿಚ್ಛತಿ ॥ ೭೩
ಕಿಂ ಹಿ ತತ್ರ ನ ಸಂತ್ಯೇವ ವಧಕಾ ಗುಪ್ತಗಾಮಿನಃ ।
ತಸ್ಮಾನ್ಮಂತ್ರೀ ನ ವಧ್ಯೋऽಸೌ ರಕ್ಷ್ಯಃ ಸ್ವಾತ್ಮವಧಾದಪಿ ॥ ೭೪
ಇತಿ ಸಂಮಂತ್ರ್ಯ ದತ್ವಾ ಚ ರಕ್ಷಕಾನ್ ಭೋಗವರ್ಮಣಾ ।
ಶಿವವರ್ಮಾ ತತೋ ದೇಶಾತ್ ಪ್ರೇಷಿತೋऽಭೂತ್ತತಃ ಕ್ಷಣಾತ್ ॥ ೭೫

೭೬. ಹೀಗೆ ಮಂತ್ರಿ ಶಿವವರ್ಮನು ತನ್ನ ಬುದ್ಧಿಕೌಶಲ್ಯದಿಂದ ಸಜೀವವಾಗಿ ಹಿಂದಿರುಗಿ ಬಂದನು. ಅವನ ಶುದ್ಧಿ (ನಿರಪರಾಧತ್ವ ಸಾಧನೆ)ಯೂ ಬೇರೆಯ ರೀತಿಯಲ್ಲಿ ಆಯಿತು. ಎಂದೂ ಧರ್ಮವು ತಪ್ಪುವುದಿಲ್ಲ.

೭೭. ಹೀಗೆ ನಿನಗೂ ಶುದ್ಧಿಯು ಸಿದ್ಧಿಸುವುದು. ಅದುವರೆಗೂ ನನ್ನ ಮನೆಯಲ್ಲಿರು. ಕಾತ್ಯಾಯನ! ಈ ರಾಜನೂ ಮುಂದೆ ಪಶ್ಚಾತ್ತಾಪ ಪಡುತ್ತಾನೆ."

೭೮. ಹೀಗೆ ಶಕಟಾಲನು ಹೇಳಿದ ಮೇಲೆ ನಾನು ಗುಪ್ತವಾಗಿ ಅವನ ಮನೆಯಲ್ಲೇ ವಾಸಮಾಡುತ್ತಾ ಒಳ್ಳೆಯ ಕಾಲಕ್ಕಾಗಿ ಕಾಯುತ್ತಾ ದಿನಗಳನ್ನು ಕಳೆದೆನು.

## ಹಿರಣ್ಯಗುಪ್ತನ ಕಥೆ

೭೯. ಕಾಣಭೂತಿಯೇ! ಒಮ್ಮೆ ಯೋಗನಂದನ ಮಗ ಹಿರಣ್ಯಗುಪ್ತನು ಬೇಟೆಗೆ ಹೋದನು.

೮೦. ಕುದುರೆ ವೇಗವಾಗಿ ಓಡುತ್ತಿದ್ದ ಕಾರಣ ಹೇಗೋ ಬಹಳ ದೂರ ಅವನೊಬ್ಬನೇ ಹೋಗಿಬಿಟ್ಟನು. ಆಗ ದಿನಕಳೆದು ರಾತ್ರಿಯಾಯಿತು.

೮೧. ಇರುಳನ್ನು ಕಳೆಯಲು ಹಿರಣ್ಯಗುಪ್ತನು ಒಂದು ಮರವನ್ನೇರಿದನು. ಮುಂದಿನ ಕ್ಷಣದಲ್ಲೇ ಸಿಂಹಕ್ಕೆ ಹೆದರಿದ ಒಂದು ಕರಡಿಯೂ ಆ ಮರವನ್ನು ಹತ್ತಿತು.

---

ಏವಂ ಪ್ರತ್ಯಾಯಯೌ ಜೀವನ್ ಸ ಮಂತ್ರೀ ಪ್ರಜ್ಞಯಾ ಸ್ವಯಾ ।
ಶುದ್ಧಿಶ್ಚಾಸ್ಯಾನ್ಯತೋ ಜಾತಾ ನ ಹಿ ಧರ್ಮೋಽನ್ಯಥಾ ಭವೇತ್ ॥ ೭೬
ಇತ್ಥಂ ತವಾಪಿ ಶುದ್ಧಿಃಸ್ಯಾತ್ ತಿಷ್ಠ ತಾವದ್ ಗೃಹೇ ಮಮ ।
ಕಾತ್ಯಾಯನ ನೃಪೋಽಪ್ಯೇಷ ಸಾನುತಾಪೋ ಭವಿಷ್ಯತಿ ॥ ೭೭
ಇತ್ಯುಕ್ತ ಶಕಟಾಲೇನ ಛನ್ನೋಽಹಂ ತಸ್ಯ ವೇಶ್ಮನಿ ।
ಪ್ರತೀಕ್ಷಮಾಣೋಽವಸರಂ ತಾನ್ಯಹಾನ್ಯತ್ಯವಾಹಯಮ್ ॥ ೭೮
ತಸ್ಯಾಥ ಯೋಗನಂದಸ್ಯ ಕಾಣಭೂತೇ ಕದಾಚನ ।
ಪುತ್ರೋ ಹಿರಣ್ಯಗುಪ್ತಾಖ್ಯೋ ಮೃಗಯಾಯೈ ಗತೋಽಭವತ್ ॥ ೭೯
ಅಶ್ವವೇಗಾತ್ ಪ್ರಯಾತಸ್ಯ ಕಥಂಚಿದ್ ದೂರಮಂತರಮ್ ।
ಏಕಾಕಿನೋ ವನೇ ತಸ್ಯ ವಾಸರಃ ಪರ್ಯಹೀಯತ ॥ ೮೦
ತತಶ್ಚ ತಾಂ ನಿಶಾಂ ನೇತುಂ ವೃಕ್ಷಮಾರೋಹತಿ ಸ್ಮ ಸಃ ।
ಕ್ಷಣಾತ್ ತತ್ರೈವ ಚಾರೋಹದೃಕ್ಷಃ ಸಿಂಹೇನ ಭೀಷಿತಃ ॥ ೮೧

೮೨. ರಾಜಪುತ್ರನು ಆ ಕರಡಿಯನ್ನು ನೋಡಿ ಹೆದರಿಕೊಂಡುದನ್ನು ಕಂಡು ಆ ಕರಡಿಯು ಮನುಷ್ಯರ ಭಾಷೆಯಲ್ಲಿ ಮಾತನಾಡಿ 'ಹೆದರಬೇಡ, ನೀನು ನನ್ನ ಮಿತ್ರ' ಎಂದು ಹೇಳಿ ಅವನ ಭಯವನ್ನು ಹೋಗಲಾಡಿಸಿತು.

೮೩. ಕರಡಿಯ ಮಾತಿನಲ್ಲಿ ನಂಬಿಕೆಯನ್ನಿಟ್ಟು ರಾಜಪುತ್ರನು ನಿದ್ದೆ ಮಾಡಿದನು. ಕರಡಿ ಎಚ್ಚರದಲ್ಲಿತ್ತು. ಕೆಳಗಿದ್ದ ಸಿಂಹವು ಅದಕ್ಕೆ ಹೀಗೆ ಹೇಳಿತು.

೮೪. "ಕರಡಿಯೇ, ಆ ಮನುಷ್ಯನನ್ನು ಕೆಳಗೆ ಬೀಳಿಸು. (ಅವನನ್ನು ತಿಂದು) ನಾನು ಹೊರಟು ಹೋಗುತ್ತೇನೆ." ಅದಕ್ಕೆ ಕರಡಿಯು, "ಪಾಪಿ, ನಾನು ಮಿತ್ರದ್ರೋಹವನ್ನು ಮಾಡುವುದಿಲ್ಲ' ಎಂದಿತು.

೮೫. ಆಮೇಲೆ ಸರದಿಯ ಪ್ರಕಾರ ಕರಡಿಯು ನಿದ್ರಿಸಿದಾಗ, ರಾಜಪುತ್ರನು ಎಚ್ಚರಗೊಂಡನು. ಆಗ ಮತ್ತೆ ಸಿಂಹವು "ಮನುಷ್ಯನೇ, ನನಗಾಗಿ ಆ ಕರಡಿಯನ್ನು ತಳ್ಳು" ಎಂದು ಹೇಳಿತು.

೮೬. ಆ ಮಾತನ್ನು ಕೇಳಿ ಭೀತನಾಗಿದ್ದ ರಾಜಕುಮಾರನು ಸಿಂಹವನ್ನು ಸಂತೋಷಪಡಿಸಲು ಕರಡಿಯನ್ನು ತಳ್ಳಿದನು. ಸುದೈವದಿಂದ ಎಚ್ಚರಗೊಂಡ ಕರಡಿಯು ತಳ್ಳಿದರೂ ಕೆಳಗೆ ಬೀಳಲಿಲ್ಲ. ಆಶ್ಚರ್ಯ !

೮೭. "ಮಿತ್ರದ್ರೋಹಿ, ನೀನು ಹುಚ್ಚನಾಗು' ಎಂದು ಕರಡಿಯು ರಾಜಪುತ್ರನಿಗೆ ಶಾಪವನ್ನು ಕೊಟ್ಟಿತು. ಆ ಶಾಪಕ್ಕೆ ಅವಧಿ ಅವನ ವೃತ್ತಾಂತವು ಜನರಿಗೆ ತಿಳಿಯುವವರೆಗೆ ಎಂದೂ ಹೇಳಿತು.

---

ಸ ದೃಷ್ಟ್ವಾ ರಾಜಪುತ್ರಂ ತಂ ಭೀತಂ ಮಾನುಷಭಾಷಯಾ ।
ಮಾ ಭೈಷೀರ್ಮಮ ಮಿತ್ರಂ ತ್ವಮಿತ್ಯುಕ್ತ್ವಾ ನಿರ್ಭಯಂ ವ್ಯಧಾತ್ ॥ ೮೨
ವಿಸ್ರಂಭಾದ್ ಯಕ್ಷವಾಕ್ಯೇನ ರಾಜಪುತ್ರೋಽಥ ಸುಪ್ತವಾನ್ ।
ಋಕ್ಷಸ್ತು ಜಾಗ್ರದೇವಾಸೀದಧಃ ಸಿಂಹೋಽಥ ಸೋಽಬ್ರವೀತ್ ॥ ೮೩
ಋಕ್ಷ ಮಾನುಷಮೇತಂ ಮೇ ಕ್ಷಿಪ ಯಾವದ್ ವ್ರಜಾಮ್ಯಹಮ್ ।
ಋಕ್ಷಸ್ತತೋಽಬ್ರವೀತ್ ಪಾಪ ನ ಮಿತ್ರಂ ಘಾತಯಾಮ್ಯಹಮ್ ॥ ೮೪
ಕ್ರಮಾದೃಕ್ಷೇ ಪ್ರಸುಪ್ತೇ ಚ ರಾಜಪುತ್ರೇ ಚ ಜಾಗ್ರತಿ ।
ಪುನಃ ಸಿಂಹೋಽಬ್ರವೀದೇತಮೃಕ್ಷಂ ಮೇ ಕ್ಷಿಪ ಮಾನುಷ ॥ ೮೫
ತಚ್ಛ್ರುತ್ವಾತ್ಮಭಯಾತ್ತೇನ ಸಿಂಹಸ್ಯಾರಾಧನಾಯ ಸಃ ।
ಕ್ಷಿಪ್ತೋಽಪಿ ನಾಪತಚ್ಚಿತ್ರಮೃಕ್ಷೋ ದೈವಪ್ರಬೋಧಿತಃ ॥ ೮೬
ಮಿತ್ರದ್ರೋಹಿನ್ ಭವೋನ್ಮತ್ತ ಇತಿ ಶಾಪಮದಾಚ್ಚ ಸಃ ।
ತಸ್ಯ ರಾಜಸುತಸ್ಯೈತದ್‌ವೃತ್ತಾಂತಾವಗಮಾವಧಿಮ್ ॥ ೮೭

೮೮. ಬೆಳಗಾಗಲು ತನ್ನ ಮನೆಗೆ ಹೋದ ರಾಜಕುಮಾರನು ಹುಚ್ಚನಾದನು. ಅದನ್ನು ನೋಡಿದ ಕೂಡಲೇ ರಾಜ ಯೋಗನಂದನು ಅತ್ಯಂತ ವಿಷಣ್ಣನಾದನು.

೮೯. "ಈ ಕಾಲದಲ್ಲಿ ವರರುಚಿಯು ಜೀವಂತನಾಗಿದ್ದಿದ್ದರೆ ಇದರ ಕಾರಣವೆಲ್ಲ ತಿಳಿಯುತ್ತಿತ್ತು. ಅವನನ್ನು ಕೊಂದು ಹಾಕಿದ ನನ್ನ ಬುದ್ಧಿಗೆ ಧಿಕ್ಕಾರ' ಎಂದು ರಾಜನು ಹಲುಬಿದನು.

೯೦–೯೧ ರಾಜನ ಆ ಮಾತನ್ನು ಕೇಳಿ ಶಕಟಾಲನು, "ಕಾತ್ಯಾಯನನನ್ನು ಬೆಳಕಿಗೆ ತರುವ ಕಾಲವು ಈಗ ಬಂದಿತು. ಅಭಿಮಾನಿಯಾದ ಕಾತ್ಯಾಯನನು ಇಲ್ಲಿ ಮುಂದೆ ಇರಲಾರನು. ರಾಜನೂ ನನ್ನಲ್ಲಿ ನಂಬಿಕೆಯನ್ನಿಡಬಹುದು' ಎಂದು ಆಲೋಚಿಸಿ ರಾಜನಿಂದ ಅಭಯದಾನವನ್ನು ಪಡೆದು ಹೀಗೆ ಹೇಳಿದನು.

೯೨. "ಪ್ರಭು, ನೀವು ವಿಷಾದಿಸುವುದು ಬೇಡ. ವರರುಚಿ ಇಂದೂ ಜೀವಿಸಿದ್ದಾನೆ." ಆಗ ಯೋಗನಂದನು "ಅವನನ್ನು ಕೂಡಲೇ ಕರೆದುಕೊಂಡು ಬಾ" ಎಂದು ಹೇಳಿದನು.

೯೩ ಆಗ ಶಕಟಾಲನು ಒತ್ತಾಯಮಾಡಿ ನನ್ನನ್ನು ಯೋಗನಂದನ ಬಳಿಗೆ ಕರೆದೊಯ್ದನು. ಉನ್ಮತ್ತಾವಸ್ಥೆಯಲ್ಲಿದ್ದ ರಾಜಪುತ್ರನನ್ನು ನಾನು ನೋಡಿದೆನು.

೯೪. "ದೇವ, ಇವನು ಮಿತ್ರದ್ರೋಹವನ್ನೆಸಗಿದ್ದಾನೆ" ಎಂದು ಹೇಳಿ ಆ ವೃತ್ತಾಂತವೆಲ್ಲವನ್ನೂ ನಾನು ಸರಸ್ವತಿಯ ಅನುಗ್ರಹದಿಂದ ಹೇಳಿದೆನು.

---

ಪ್ರಾಪ್ಯೈವ ಸ್ವಗೃಹಂ ಪ್ರಾತರುನ್ಮತ್ತೋಽಭೂನ್ನೃಪಾತ್ಮಜಃ ।
ಯೋಗನಂದಶ್ಚ ತದ್‌ದೃಷ್ಟ್ವಾ ವಿಷಾದಂ ಸಹಸಾಗಮತ್ ॥ ೮೮
ಅಬ್ರವೀಚ್ಚ ಸ ಕಾಲೇಽಸ್ಮಿನ್ ಜೀವೇದ್ ವರರುಚಿರ್ಯದಿ ।
ಇದಂ ಜ್ಞಾಯೇತ ತತ್ಸರ್ವಂ ಧಿಙ್ ಮೇ ತದ್‌ವಧಪಾಟವಮ್ ॥ ೮೯
ತಚ್ಛ್ರುತ್ವಾ ವಚನಂ ರಾಜ್ಞಃ ಶಕಟಾಲೋ ವ್ಯಚಿಂತಯತ್ ।
ಹಂತ ಕಾತ್ಯಾಯನಸ್ಯಾಯಂ ಲಬ್ಧಃ ಕಾಲಃ ಪ್ರಕಾಶನೇ ॥ ೯೦
ನ ಸೋಽತ್ರ ಮಾನೀ ತಿಷ್ಠೇಚ್ಚ ರಾಜಾ ಮಯಿ ಚ ವಿಶ್ವಸೇತ್ ।
ಇತ್ಯಾಲೋಚ್ಯ ಸ ರಾಜಾನಮಬ್ರವೀದ್ ಯಾಚಿತಾಭಯಃ ॥ ೯೧
ರಾಜನ್ನಲಂ ವಿಷಾದೇನ ಜೀವನ್‌ವರರುಚಿಃ ಸ್ಥಿತಃ ।
ಯೋಗನಂದಸ್ತತೋಽವಾದೀದ್ ದ್ರುತಮಾನೀಯತಾಮಿತಿ ॥ ೯೨
ಅಥಾಹಂ ಶಕಟಾಲೇನ ಯೋಗನಂದಾಂತಿಕಂ ಹಠಾತ್ ।
ಆನೀತಸ್ತಂ ತಥಾಭೂತಂ ರಾಜಪುತ್ರಂ ವ್ಯಲೋಕಯಮ್ ॥ ೯೩
ಮಿತ್ರದ್ರೋಹಃ ಕೃತೋಽನೇನ ದೇವೇತ್ಯುಕ್ತ್ವಾ ತಥೈವ ಸಃ ।
ಸರಸ್ವತೀಪ್ರಸಾದೇನ ವೃತ್ತಾಂತಃ ಕಥಿತೋ ಮಯಾ ॥ ೯೪

೯೫. ಅನಂತರ ಶಾಪಮುಕ್ತನಾದ ರಾಜಪುತ್ರನು ನನ್ನನ್ನು ಕೊಂಡಾಡಿದನು. "ನಿನಗೆ ಇದೆಲ್ಲ ಹೇಗೆ ಗೊತ್ತಾಯಿತು ?" ಎಂದು ಯೋಗನಂದರಾಜನು ಕೇಳಿದನು.

೯೬. "ರಾಜನ್, ಪ್ರಜ್ಞಾಶಾಲಿಗಳ ಬುದ್ಧಿಗಳು ಲಕ್ಷಣಗಳಿಂದಲೂ, ಅನುಮಾನವೆಂಬ ಪ್ರಮಾಣದಿಂದಲೂ, ಪ್ರತಿಭೆಯಿಂದಲೂ ಸಮಸ್ತವನ್ನೂ ನೋಡಬಲ್ಲವು" ಎಂದು ನಾನು ಹೇಳಿದೆನು.

೯೭. "ಆ ಮಚ್ಚೆಯ ಬಗೆಗೆ ಹೇಗೆ ತಿಳಿದುಕೊಂಡೆನೋ ಹಾಗೆಯೇ ಇದೆಲ್ಲವನ್ನೂ ತಿಳಿದುಕೊಂಡೆನು" ಎಂದು ನಾನು ಹೇಳಿದಾಗ ರಾಜನಿಗೆ ನಾಚಿಕೆಯೂ ಪಶ್ಚಾತ್ತಾಪವೂ ಉಂಟಾದುವು.

೯೮. ಅವನ ಸತ್ಕಾರವನ್ನು ನಾನು ತಿರಸ್ಕರಿಸಿದೆನು. ಅಪರಾಧದ ಶುದ್ಧಿಯೇ ಲಾಭವೆಂದು ಪರಿಗಣಿಸಿ ನನ್ನ ಮನೆಗೆ ಹೋದೆನು. ವಿದ್ವಾಂಸರಿಗೆ ಶೀಲವೇ ಧನವಲ್ಲವೆ ?

೯೯. ನಾನು ಬರುತ್ತಿದ್ದಂತೆಯೇ ಮನೆಯಲ್ಲಿದ್ದವರೆಲ್ಲರೂ ನನ್ನೆದುರಿನಲ್ಲಿ ಅಳಲಾರಂಭಿಸಿದರು. ನನಗೆ ದಿಕ್ಕುತೋಚದಂತೆ ಆಯಿತು. ಆಗ ಉಪವರ್ಷನು ನನ್ನ ಬಳಿ ಬಂದು ಹೇಳಿದನು.

೧೦೦. 'ರಾಜನು ನಿನ್ನನ್ನು ಕೊಲ್ಲಿಸಿದನೆಂಬ ವಾರ್ತೆಯನ್ನು ಕೇಳಿ ಉಪಕೋಶಾ ಬೆಂಕಿಯಲ್ಲಿ ಹಾರಿ ಪ್ರಾಣಬಿಟ್ಟಳು. ಆಮೇಲೆ ಶೋಕದಿಂದ ನಿನ್ನ ತಾಯಿಯ ಹೃದಯವೂ ಒಡೆದು ಹೋಯಿತು.'

---

ತತಸ್ತಚ್ಛಾಪಮುಕ್ತೇನ ಸ್ತುತೋऽಹಂ ರಾಜಸೂನುನಾ ।
ತ್ವಯಾ ಕಥಮಿದಂ ಜ್ಞಾತಮಿತ್ಯಪೃಚ್ಛತ್ ಸ ಭೂಪತಿಃ ॥ ೯೫
ಅಥಾಹಮವದಂ ರಾಜನ್ ಲಕ್ಷ್ಮೈರನುಮಾನತಃ ।
ಪ್ರತಿಭಾತಶ್ಚ ಪಶ್ಯಂತಿ ಸರ್ವಂ ಪ್ರಜ್ಞಾವತಾಂ ಧಿಯಃ ॥ ೯೬
ತದ್ಯಥಾ ತಿಲಕೋ ಜ್ಞಾತಸ್ತಥಾ ಸರ್ವಮಿದಂ ಮಯಾ ।
ಇತಿ ಮದ್ವಚನಾತ್ ಸೋऽಭೂದ್ ರಾಜಾ ಲಜ್ಜಾನುತಾಪವಾನ್ ॥ ೯೭
ಅಥಾನಾದೃತಸತ್ಕಾರಃ ಪರಿಶುದ್ಧ್ಯೈವ ಲಾಭವಾನ್ ।
ಸ್ವಗೃಹಂ ಗತವಾನಸ್ಮಿ ಶೀಲಂ ಹಿ ವಿದುಷಾಂ ಧನಮ್ ॥ ೯೮
ಪ್ರಾಪ್ತಸ್ಯೈವ ಸ ತತ್ರತ್ಯೋ ಜನೋऽರೋದೀತ್ ಪುರೋ ಮಮ ।
ಅಭ್ಯೇತ್ಯ ಮಾಂ ಸಮುದ್ಭ್ರಾಂತಮುಪವರ್ಷೋऽಬ್ರವೀತ್ತತಃ ॥ ೯೯
ರಾಜ್ಞಾ ಹತಂ ನಿಶಮ್ಯ ತ್ವಾಮುಪಕೋಶಾಗ್ನಿಸಾದ್ವಪುಃ ।
ಅಕರೋದಥ ಮಾತುಸ್ತೇ ಶುಚಾ ಹೃದಯಮಸ್ಫುಟತ್ ॥ ೧೦೦

೧೧೧. ಅದನ್ನು ಕೇಳಿ ಈ ಹೊಸದಾದ ಶೋಕದ ರಭಸದಿಂದ ಜ್ಞಾನತಪ್ಪಿದ ನಾನು ಗಾಳಿಯ ವೇಗದಿಂದ ಮರವು ಮುರಿದು ಬೀಳುವಂತೆ ಕೂಡಲೇ ನೆಲಕ್ಕೆ ಉರುಳಿ ಬಿದ್ದೆನು.

೧೧೨. ಒಂದು ಕ್ಷಣದಲ್ಲೇ ಶೋಕರಸವೆಂತಹುದೆಂಬುದನ್ನು ತಿಳಿದವನಾದೆನು. ಪ್ರಿಯಬಂಧುಗಳ ಸಾವಿನಿಂದ ಉಂಟಾಗುವ ಶೋಕದ ಬೆಂಕಿ ಯಾರನ್ನು ತಾನೆ ಸುಡದು ?

೧೧೩. "ಇಡೀ ಜಗತ್ತಿನಲ್ಲೆಲ್ಲ ಶಾಶ್ವತವಾಗಿರುವುದು ಅಶಾಶ್ವತತ್ವ ಒಂದೇ. ಈ ದೇವಮಾಯೆಯನ್ನು ತಿಳಿದುಕೊಂಡವನಾಗಿದ್ದೂ ನೀನು ಮೋಹ ಗೊಳ್ಳುವುದೇಕೆ?'

೧೧೪. ಇತ್ಯಾದಿ ಮಾತುಗಳಿಂದ ವರ್ಷೋಪಾಧ್ಯಾಯನು ನನಗೆ ತತ್ತ್ವವನ್ನು ಬೋಧಿಸಿದ ಮೇಲೆ ಹೇಗೋ ಧೈರ್ಯವನ್ನು ಪಡೆದುಕೊಂಡೆನು.

೧೧೫. ಆಮೇಲೆ ವಿರಕ್ತನಾಗಿ ಎಲ್ಲ ಬಂಧಗಳನ್ನೂ ಕಳಚಿ ಶಾಂತಿಯೊಂದನ್ನೇ ಸಹಾಯವನ್ನಾಗಿ ಮಾಡಿಕೊಂಡು ತಪೋವನವನ್ನು ಆಶ್ರಯಿಸಿದೆನು.

೧೧೬. ಹೀಗೆ ದಿನಗಳು ಕಳೆಯುತ್ತಿರಲು, ಒಮ್ಮೆ ಅಯೋಧ್ಯೆಯಿಂದ ಒಬ್ಬ ಬ್ರಾಹ್ಮಣನು ನಾನು ತಪೋವನದಲ್ಲಿದ್ದಾಗ ಬಂದನು.

೧೧೭. ನಾನು ಅವನನ್ನು ಯೋಗನಂದನ ರಾಜ್ಯಭಾರದ ಬಗೆಗೆ ಕೇಳಿದೆನು. ಆಗ ನನ್ನನ್ನು ಗುರುತು ಹಿಡಿದ ಆ ಬ್ರಾಹ್ಮಣನು ದುಃಖದಿಂದ ಹೀಗೆ ಹೇಳಿದನು.

---

ತಚ್ಛ್ರುತ್ವಾಭಿನವೋದ್ಭೂತಶೋಕಾವೇಗವಿಚೇತನಃ ।
ಸದ್ಯೋಽಹಮಪತಂ ಭೂಮೌ ವಾತರುಗ್ಣ ಇವ ದ್ರುಮಃ ॥ ೧೧೧
ಕ್ಷಣಾಚ್ಚ ಗತವಾನಸ್ಮಿ ಪ್ರಲಾಪಾನಾಂ ರಸಜ್ಞತಾಮ್ ।
ಪ್ರಿಯಬಂಧುವಿನಾಶೋತ್ಥಃ ಶೋಕಾಗ್ನಿಃ ಕಂ ನ ತಾಪಯೇತ್ ॥ ೧೧೨
ಆಸಂಸಾರಂ ಜಗತ್ಯಸ್ಮಿನ್ನೇಕಾ ನಿತ್ಯಾ ಹ್ಯನಿತ್ಯತಾ ।
ತದೇತಾಮೈಶ್ವರೀಂ ಮಾಯಾಂ ಕಿಂ ಜಾನನ್ನಪಿ ಮುಹ್ಯಸಿ ॥ ೧೧೩
ಇತ್ಯಾದಿಭಿರುಪಾಗತ್ಯ ವರ್ಷೇಣ ವಚನೈರಹಮ್ ।
ಬೋಧಿತೋಽಥ ಯಥಾತತ್ತ್ವಂ ಕಥಂಚಿದ್ ಧೃತಿಮಾಪ್ತವಾನ್ ॥ ೧೧೪
ತತೋ ವಿರಕ್ತಹೃದಯಸ್ತ್ಯಕ್ತ್ವಾ ಸರ್ವಂ ನಿಬಂಧನಮ್ ।
ಪ್ರಶಮೈಕಸಹಾಯೋಽಹಂ ತಪೋವನಮಶಿಶ್ರಿಯಮ್ ॥ ೧೧೫
ದಿವಸೇಷ್ವಥ ಗಚ್ಛತ್ಸು ತತ್ತಪೋವನಮೇಕದಾ ।
ಅಯೋಧ್ಯಾತ ಉಪಾಗಚ್ಛದ್ ವಿಪ್ರ ಏಕೋ ಮಯಿ ಸ್ಥಿತೇ ॥ ೧೧೬
ಸ ಮಯಾ ಯೋಗನಂದಸ್ಯ ರಾಜ್ಯವಾರ್ತಾಮಪೃಚ್ಛ್ಯತ ।
ಪ್ರತ್ಯಭಿಜ್ಞಾಯ ಮಾಂ ಸೋಽಥ ಸಶೋಕಮಿದಮಬ್ರವೀತ್ ॥ ೧೧೭

## ಚಾಣಕ್ಯನ ಕಥೆ

೧೦೮. '"ನಂದನ ವಾರ್ತೆಯನ್ನು ಕೇಳು. ಅವನ ಬಳಿಯಿಂದ ನೀನು ಹೊರಟು ಹೋದಮೇಲೆ ಶಕಟಾಲನಿಗೆ ಸಾಕಷ್ಟು ಅವಕಾಶ ಸಿಕ್ಕಿತು.

೧೦೯. ಯುಕ್ತಿಯಿಂದ ಯೋಗನಂದನನ್ನು ಕೊಲ್ಲಲು ಉಪಾಯವನ್ನು ಹುಡುಕುತ್ತಿದ್ದ ಶಕಟಾಲನು ಒಮ್ಮೆ ದಾರಿಯಲ್ಲಿ ಭೂಮಿಯನ್ನು ಅಗೆಯುತ್ತಿದ್ದ ಚಾಣಕ್ಯನೆಂಬ ಬ್ರಾಹ್ಮಣನನ್ನು ಕಂಡನು.

೧೧೦. ನೆಲವನ್ನೇಕೆ ಅಗೆಯುತ್ತಿದ್ದೀಯೆ ಎಂದು ಕೇಳಿದಾಗ ಆ ಬ್ರಾಹ್ಮಣನಿಂತೆಂದನು. 'ನನ್ನ ಕಾಲಿಗೆ ಗಾಯಮಾಡಿದ ದರ್ಭೆಯನ್ನು ಬುಡಸಹಿತವಾಗಿ ಕಿತ್ತುಹಾಕುತ್ತಿದ್ದೇನೆ.'

೧೧೧. ಅದನ್ನು ಕೇಳಿ ಕೋಪಶೀಲನೂ ಕಠಿಣಮನಸ್ಸಿನವನೂ ಆದ ಈ ಬ್ರಾಹ್ಮಣನು ಯೋಗನಂದನನ್ನು ಕೊಲ್ಲುವ ಸಾಧನವಾಗುತ್ತಾನೆ ಎಂದು ಶಕಟಾಲನು ಭಾವಿಸಿದನು.

೧೧೨ – ೧೧೩. ಅವನ ಹೆಸರನ್ನು ಕೇಳಿದ ಮೇಲೆ ಶಕಟಾಲನು ಅವನಿಗೆ "ಬ್ರಾಹ್ಮಣೋತ್ತಮನೆ, ನಿನಗೆ ನಂದರಾಜನ ಮನೆಯಲ್ಲಿ ತ್ರಯೋದಶೀಶ್ರಾದ್ಧವನ್ನು ಕೊಡಿಸುವೆನು. ದಕ್ಷಿಣೆಯಾಗಿ ನಿನಗೆ ಒಂದು ಲಕ್ಷ ಸುವರ್ಣನಾಣ್ಯಗಳು ಸಿಗುವುವು. ಬ್ರಾಹ್ಮಣಸಮೂಹದ ಅಗ್ರಸ್ಥಾನದಲ್ಲಿ ನಿನ್ನ ಭೋಜನವಾಗುವುದು. ನನ್ನ ಮನೆಗೆ ಈಗ ಬಾ" ಎಂದು ಹೇಳಿದನು.

---

ಶೃಣು ನಂದಸ್ಯ ಯದ್‌ವೃತ್ತಂ ತತ್ಸಕಾಶಾದ್ ಗತೇ ತ್ವಯಿ ।
ಲಬ್ಧಾವಕಾಶಸ್ತತ್ರಾಭೂಚ್ಛಕಟಾಲಶ್ಚಿರೇಣ ಸಃ ॥ ೧೦೮
ಸ ಚಿಂತಯನ್ ವಧೋಪಾಯಂ ಯೋಗನಂದಸ್ಯ ಯುಕ್ತಿತಃ ।
ಕ್ಷಿತಿಂ ಖನಂತಮದ್ರಾಕ್ಷೀಚ್ಚಾಣಕ್ಯಾಖ್ಯಂ ದ್ವಿಜಂ ಪಥಿ ॥ ೧೦೯
ಕಿಂ ಭುವಂ ಖನಸೀತ್ಯುಕ್ತೇ ತೇನ ವಿಪ್ರೋಽಥ ಸೋಽಬ್ರವೀತ್ ।
ದರ್ಭಮುನ್ಮೂಲಯಾಮ್ಯತ್ರ ಪಾದೋ ಹ್ಯೇತೇನ ಮೇ ಕ್ಷತಃ ॥ ೧೧೦
ತಚ್ಛ್ರುತ್ವಾ ಸಹಸಾ ಮಂತ್ರೀ ಕೋಪನಂ ಕ್ರೂರನಿಶ್ಚಯಮ್ ।
ತಂ ವಿಪ್ರಂ ಯೋಗನಂದಸ್ಯ ವಧೋಪಾಯಮಮನ್ಯತ ॥ ೧೧೧
ನಾಮ ಪೃಷ್ಟ್ವಾಬ್ರವೀತ್ತಂ ಚ ಹೇ ಬ್ರಹ್ಮನ್ ದಾಪಯಾಮಿ ತೇ ।
ಅಹಂ ತ್ರಯೋದಶೀಶ್ರಾದ್ಧಂ ಗೃಹೇ ನಂದಸ್ಯ ಭೂಪತೇಃ ॥ ೧೧೨
ದಕ್ಷಿಣಾತಃ ಸುವರ್ಣಸ್ಯ ಲಕ್ಷಂ ತವ ಭವಿಷ್ಯತಿ ।
ಭೋಕ್ಷ್ಯಸೇ ಧುರಿ ಚಾನ್ಯೇಷಾಮೇಹಿ ತಾವದ್ ಗೃಹಂ ಮಮ ॥ ೧೧೩

೧೧೩. ಹೀಗೆ ಹೇಳಿ ಶಕಟಾಲನು ಚಾಣಕ್ಯನನ್ನು ತನ್ನ ಮನೆಗೆ ಕರೆದೊಯ್ದನು. ಶ್ರಾದ್ಧದ ದಿನದಂದು ಅವನನ್ನು ರಾಜನಿಗೆ ತೋರಿಸಿದನು. ರಾಜನು ಅವನನ್ನು ನಂಬಿದನು.

೧೧೪. ಅನಂತರ ಚಾಣಕ್ಯನು ಹೋಗಿ ಶ್ರಾದ್ಧದ ಅಗ್ರಪಂಕ್ತಿಯಲ್ಲಿ ಕುಳಿತುಕೊಂಡನು. ಆ ಸ್ಥಾನವು ತನಗೆ ಬೇಕೆಂದು ಸುಬಂಧು ಎಂಬ ಬ್ರಾಹ್ಮಣನು ಆಶೆಪಟ್ಟಿದ್ದನು.

೧೧೫. ಶಕಟಾಲನು ಹೋಗಿ ನಂದರಾಜನಿಗೆ ವಿಷಯವನ್ನು ಹೇಳಿದಾಗ ಅವನು 'ಆ ಸ್ಥಾನಕ್ಕೆ ಬೇರೆ ಯಾವನೂ ಯೋಗ್ಯನಲ್ಲ. ಸುಬಂಧು ಅಗ್ರಪಂಕ್ತಿಯಲ್ಲಿ ಕುಳಿತುಕೊಳ್ಳಲಿ' ಎಂದು ಹೇಳಿದನು.

೧೧೬. ಶಕಟಾಲನು ಭಯದಿಂದ ಕುಗ್ಗಿ ಅಲ್ಲಿಗೆ ಹೋಗಿ ರಾಜಾಜ್ಞೆಯನ್ನು ಚಾಣಕ್ಯನಿಗೆ ತಿಳಿಸಿ 'ಇದರಲ್ಲಿ ನನ್ನದೇನೂ ಅಪರಾಧವಿಲ್ಲ' ಎಂದನು.

೧೧೭. ಆಗ ಕೋಪದಿಂದ ಚಾಣಕ್ಯನು ಉರಿದು ಜ್ವಲಿಸುತ್ತಿರುವಂತೆ ನಿಂತು ತನ್ನ ಶಿಖೆಯನ್ನು ಬಿಚ್ಚಿ ಈ ಪ್ರತಿಜ್ಞೆಯನ್ನು ಮಾಡಿದನು.

೧೧೮. 'ನಿಶ್ಚಿತವಾಗಿ ಏಳು ದಿನಗಳಲ್ಲಿ ಈ ನಂದನನ್ನು ಕೊಂದು ಕೋಪವನ್ನು ತೀರಿಸಿಕೊಂಡ ಮೇಲೆ ಈ ಶಿಖೆಯನ್ನು ಮತ್ತೆ ಕಟ್ಟುತ್ತೇನೆ.'

೧೧೯. ಅವನು ಹೀಗೆ ಹೇಳಿದಾಗ ಯೋಗನಂದನಿಗೆ ಸಿಟ್ಟು ಬಂತು. ಚಾಣಕ್ಯನು ಯಾರಿಗೂ ಕಾಣಿಸದಂತೆ ಪಲಾಯನ ಮಾಡಿದನು. ಶಕಟಾಲನು ಅವನನ್ನು ತನ್ನ ಮನೆಯಲ್ಲಿರಿಸಿಕೊಂಡನು.

---

ಇತ್ಯುಕ್ತ್ವಾ ಶಕಟಾಲಸ್ತಂ ಚಾಣಕ್ಯಮನಯದ್ ಗೃಹಮ್ ।
ಶ್ರಾದ್ಧಾಹೇಽದರ್ಶಯತ್ತಂ ಚ ರಾಜ್ಞೇ ಸ ಶ್ರದ್ದಧೇ ಚ ತಮ್ ॥ ೧೧೩
ತತಃ ಸ ಗತ್ವಾ ಚಾಣಕ್ಯೋ ಧುರಿ ಶ್ರಾದ್ಧ ಉಪಾವಿಶತ್ ।
ಸುಬಂಧುನಾಮಾ ವಿಪ್ರಶ್ಚ ತಾಮೈಚ್ಛದ್ ಧುರಮಾತ್ಮನಃ ॥ ೧೧೪
ತದ್‌ಗತ್ವಾ ಶಕಟಾಲೇನ ವಿಜ್ಞಪ್ತೋ ನಂದಭೂಪತಿಃ ।
ಅವಾದೀನ್ನಾಪರೋ ಯೋಗ್ಯಃ ಸುಬಂಧುರ್ಧುರಿ ತಿಷ್ಠತು ॥ ೧೧೫
ಆಗತ್ಯೈನಾಂ ಚ ರಾಜಾಜ್ಞಾಂ ಶಕಟಾಲೋ ಭಯಾನತಃ ।
ನ ಮೇಽಪರಾಧ ಇತ್ಯುಕ್ತ್ವಾ ಚಾಣಕ್ಯಾಯ ನ್ಯವೇದಯತ್ ॥ ೧೧೬
ಸೋಽಥ ಕೋಪೇನ ಚಾಣಕ್ಯೋ ಜ್ವಲನ್ನಿವ ಸಮಂತತಃ ।
ನಿಜಾಂ ಮುಕ್ತ್ವಾ ಶಿಖಾಂ ತತ್ರ ಪ್ರತಿಜ್ಞಾಮಕರೋದಿಮಾಮ್ ॥ ೧೧೭
ಅವಶ್ಯಂ ಹಂತ ನಂದೋಽಯಂ ಸಪ್ತಭಿರ್ದಿವಸೈರ್ಮಯಾ ।
ವಿನಾಶ್ಯೋ ಬಂಧನೀಯಾ ಚ ತತೋ ನಿರ್ಮನ್ಯುನಾ ಶಿಖಾ ॥ ೧೧೮
ಇತ್ಯುಕ್ತವಂತಂ ಕುಪಿತೇ ಯೋಗನಂದೇ ಪಲಾಯಿತಮ್ ।
ಅಲಕ್ಷಿತಂ ಸ್ವಗೇಹೇ ತಂ ಶಕಟಾಲೋ ನ್ಯವೇಶಯತ್ ॥ ೧೧೯

೧೨೧. ಮಂತ್ರಿ ಶಕಟಾಲನು ಗುಟ್ಟಾಗಿ ಚಾಣಕ್ಯನಿಗೆ ಉಪಕರಣಗಳನ್ನು ಒದಗಿಸಲು ಚಾಣಕ್ಯನು ಎಲ್ಲಿಗೋ ಹೋಗಿ 'ಕೃತ್ಯಾ' (ದುಷ್ಟ ಮಾಟದ ಶಕ್ತಿ) ಎಂಬ ಮಾಯೆಯನ್ನು ಸಾಧಿಸಿಕೊಂಡನು.

೧೨೨. ಅದರ ಬಲದಿಂದ ಯೋಗನಂದನಿಗೆ ದಾಹಜ್ವರ ಎಂಬ ರೋಗ ಬಂದಿತು. ಏಳನೆಯ ದಿನವೇ ಅವನು ಮರಣವನ್ನಪ್ಪಿದನು.

೧೨೩. ಶಕಟಾಲನು ಯೋಗನಂದನ ಮಗನಾದ ಹಿರಣ್ಯಗುಪ್ತನನ್ನೂ ಕೊಂದು ಪೂರ್ವನಂದನ ಮಗ ಚಂದ್ರಗುಪ್ತನಲ್ಲಿ ರಾಜ್ಯಲಕ್ಷ್ಮಿಯನ್ನು ನೆಲೆಗೊಳಿಸಿದನು.

೧೨೪-೧೨೫. ಬುದ್ಧಿಯಲ್ಲಿ ಬೃಹಸ್ಪತಿಗೆ ಸಮಾನನಾಗಿದ್ದ ಚಾಣಕ್ಯನನ್ನು ಆ ಚಂದ್ರಗುಪ್ತನ ಮಂತ್ರಿಯ ಸ್ಥಾನದಲ್ಲಿ ನಿಲ್ಲಲು ಪ್ರಾರ್ಥಿಸಿ ಅವನನ್ನು ಮಂತ್ರಿಪದವಿಯಲ್ಲಿ ದೃಢವಾಗಿ ಸ್ಥಾಪಿಸಿ ಕೃತಕೃತ್ಯನಾದ ಶಕಟಾಲನು ಯೋಗನಂದನ ಮೇಲೆ ಹೀಗೆ ಸೇಡನ್ನು ತೀರಿಸಿಕೊಂಡು ಪುತ್ರಶೋಕದಿಂದ ನಿರ್ವಿಣ್ಣನಾಗಿ ದಟ್ಟವಾದ ಕಾಡಿಗೆ ತೆರಳಿದನು.

೧೨೬. ಕಾಣಭೂತಿಯೇ, ಹೀಗೆ ಆ ಬ್ರಾಹ್ಮಣನ ಮುಖದಿಂದ ಸಂಪೂರ್ಣವಾಗಿ ಅಯೋಧ್ಯೆಯ ವಾರ್ತೆಯನ್ನು ಕೇಳಿ ಎಲ್ಲವೂ ಅಶಾಶ್ವತ ಎಂಬುದನ್ನು ಕಂಡುಕೊಂಡು ಖಿನ್ನನಾದೆನು.

---

ತತ್ತೋಪಕರಣೇ ದತ್ತೇ ಗುಪ್ತಂ ತೇನೈವ ಮಂತ್ರಿಣಾ ।
ಸ ಚಾಣಕ್ಯೋ ದ್ವಿಜಃ ಕ್ವಾಪಿ ಗತ್ವಾ ಕೃತ್ಯಾಮಸಾಧಯತ್ ॥ ೧೨೧
ತದ್ವಶಾದ್ ಯೋಗನಂದೋಽಥ ದಾಹಜ್ವರಮವಾಪ್ಯ ಸಃ ।
ಸಪ್ತಮೇ ದಿವಸೇ ಪ್ರಾಪ್ತೇ ಪಂಚತ್ವಂ ಸಮುಪಾಗಮತ್ ॥ ೧೨೨
ಹತ್ವಾ ಹಿರಣ್ಯಗುಪ್ತಂ ಚ ಶಕಟಾಲೇನ ತತ್ಸುತಮ್ ।
ಪೂರ್ವನಂದಸುತೇ ಲಕ್ಷ್ಮೀಶ್ಚಂದ್ರಗುಪ್ತೇ ನಿವೇಶಿತಾ ॥ ೧೨೩
ಮಂತ್ರಿತ್ವೇ ತಸ್ಯ ಚಾಭ್ಯರ್ಥ್ಯ ಬೃಹಸ್ಪತಿಸಮಂ ಧಿಯಾ ।
ಚಾಣಕ್ಯಂ ಸ್ಥಾಪಯಿತ್ವಾ ತಂ ಸ ಮಂತ್ರೀ ಕೃತಕೃತ್ಯತಾಮ್ ॥ ೧೨೪
ಮನ್ವಾನೋ ಯೋಗನಂದಸ್ಯ ಕೃತವೈರಪ್ರತಿಕ್ರಿಯಃ ।
ಪುತ್ರಶೋಕೇನ ನಿರ್ವಿಣ್ಣಃ ಪ್ರವಿವೇಶ ಮಹದ್‌ವನಮ್ ॥ ೧೨೫
ಇತಿ ತಸ್ಯ ಮುಖಾಚ್ಛ್ರುತ್ವಾ ವಿಪ್ರಸ್ಯ ಸುತರಾಮಹಮ್ ।
ಕಾಣಭೂತೇ ಗತಃ ಖೇದಂ ಸರ್ವಮಾಲೋಕ್ಯ ಚಂಚಲಮ್ ॥ ೧೨೬

೧೨೭. ಆ ಬೇಸರದಿಂದ ನಾನು ವಿಂಧ್ಯವಾಸಿನಿಯ ದರ್ಶನಕ್ಕಾಗಿ ಬಂದೆನು. ಮಿತ್ರ, ಅವಳ ಅನುಗ್ರಹದಿಂದ ನಿನ್ನನ್ನು ನೋಡಿದ ಕೂಡಲೇ ನನಗೆ ಪೂರ್ವಜನ್ಮದ ಸ್ಮರಣೆ ಉಂಟಾಯಿತು.

೧೨೮. ಅದರಿಂದ ದಿವ್ಯಜ್ಞಾನವೂ ಹುಟ್ಟಿತು. ನಿನಗೆ ಬೃಹತ್ಕಥೆಯನ್ನು ಹೇಳಿದ್ದೇನೆ. ನನ್ನ ಪಾಪ ಕರಗಿಹೋಯಿತು. ಈಗ ಈ ದೇಹವನ್ನು ಬಿಡಲು ಯತ್ನಿಸುತ್ತೇನೆ.

129. ಮೂರು ಭಾಷೆಗಳನ್ನು ತ್ಯಜಿಸಿದ ಗುಣಾಢ್ಯನೆಂಬ ದ್ವಿಜನು ಶಿಷ್ಯಸಹಿತನಾಗಿ ನಿನ್ನ ಬಳಿಗೆ ಬರುವವರೆಗೂ ನೀನು ಇಲ್ಲೇಇರು.

130. ಅವನೂ ನನ್ನಂತೆ ಪಾರ್ವತಿಯು ಕೋಪದಿಂದ ನೀಡಿದ ಶಾಪಕ್ಕೆ ತುತ್ತಾದ ಗಣೋತ್ತಮನು. ನನ್ನ ಪಕ್ಷಪಾತಿಯಾಗಿದ್ದ ಅವನ ಹೆಸರು ಮಾಲ್ಯವಾನ್ ಎಂದು. ಈಗ ಅವನೂ ಮಾನವನಾಗಿಬಿಟ್ಟಿದ್ದಾನೆ.

131. ಮಹೇಶ್ವರನು ಹೇಳಿದ ಈ ಬೃಹತ್ಕಥೆಯನ್ನು ನೀನು ಅವನಿಗೆ ಹೇಳಬೇಕು. ಅದರಿಂದ ನಿನಗೂ ಅವನಿಗೂ ಶಾಪದಿಂದ ವಿಮೋಚನೆಯು ಆಗುವುದು."

132. ಹೀಗೆ ವರರುಚಿಯು ಕಾಣಭೂತಿಗೆ ಎಲ್ಲವನ್ನೂ ಹೇಳಿ ದೇಹವನ್ನು ತ್ಯಜಿಸುವುದಕ್ಕಾಗಿ ಪವಿತ್ರವಾದ ಬದರಿಕಾಶ್ರಮಕ್ಕೆ ಹೊರಟನು.

---

ಖೇದಾಚ್ಚಾಹಮಿಮಾಂ ದ್ರಷ್ಟುಮಾಗತೋ ವಿಂಧ್ಯವಾಸಿನೀಮ್ ।
ತತ್ಪ್ರಸಾದೇನ ದೃಷ್ಟ್ವಾ ತ್ವಾಂ ಸ್ಮೃತಾ ಜಾತಿರ್ಮಯಾ ಸಖೇ ॥ ೧೨೭
ಪ್ರಾಪ್ತಂ ದಿವ್ಯಂ ಚ ವಿಜ್ಞಾನಂ ಮಯೋಕ್ತಾ ತೇ ಮಹಾಕಥಾ ।
ಇದಾನೀಂ ಕ್ಷೀಣಶಾಪೋಽಹಂ ಯತಿಷ್ಯೇ ದೇಹಮುಜ್ಝಿತುಮ್ ॥ ೧೨೮
ತ್ವಂ ಚ ಸಂಪ್ರತಿ ತಿಷ್ಠೇಹ ಯಾವದಾಯಾತಿ ತೇಽಂತಿಕಮ್ ।
ಶಿಷ್ಯಯುಕ್ತೋ ಗುಣಾಢ್ಯಾಖ್ಯಸ್ತ್ಯಕ್ತಭಾಷಾತ್ರಯೋ ದ್ವಿಜಃ ॥ 129
ಸೋಽಪಿ ಹ್ಯಹಮಿವ ಕ್ರೋಧಾದ್ದೇವ್ಯಾ ಶಪ್ತೋ ಗಣೋತ್ತಮಃ ।
ಮಾಲ್ಯವಾನ್ನಾಮ ಮತ್ಪಕ್ಷಪಾತೀ ಮರ್ತ್ಯತ್ವಮಾಗತಃ ॥ 130
ತಸ್ಮೈ ಮಹೇಶ್ವರೋಕ್ತೈಷಾ ಕಥನೀಯಾ ಮಹಾಕಥಾ ।
ತತಸ್ತೇ ಶಾಪನಿರ್ಮುಕ್ತಿಸ್ತಸ್ಯ ಚಾಪಿ ಭವಿಷ್ಯತಿ॥ 131
ಏವಂ ವರರುಚಿಸ್ತತ್ರ ಕಾಣಭೂತೇರ್ನಿವೇದ್ಯ ಸಃ ।
ಪ್ರತಸ್ಥೇ ದೇಹಮೋಕ್ಷಾಯ ಪುಣ್ಯಂ ಬದರಿಕಾಶ್ರಮಮ್ ॥ 132

## ಅಹಂಕಾರಿ ಋಷಿಯ ಕಥೆ

133. ಹಾಗೆ ಹೋಗುತ್ತಿರುವಾಗ ಅವನು ಗಂಗೆಯಲ್ಲಿ ಶಾಕಗಳನ್ನು ತಿನ್ನುತ್ತಿದ್ದ ಋಷಿಯೊಬ್ಬನನ್ನು ಕಂಡನು. ಅವನ ಎದುರಿನಲ್ಲೇ ಆ ಋಷಿಗೆ ಕೈಯಲ್ಲಿ ದರ್ಭೆಯಿಂದ ಗಾಯವಾಯಿತು.

134. ಆ ಋಷಿಯ ಅಹಂಕಾರವನ್ನು ಪರೀಕ್ಷಿಸುವುದಕ್ಕಾಗಿ ಕುತೂಹಲದಿಂದ ವರರುಚಿಯು ಋಷಿಯ ಕೈಯಿಂದ ಒಸರುತ್ತಿದ್ದ ರಕ್ತವನ್ನು ಶಾಕರಸ (ತರಕಾರಿಯ ರಸ) ವನ್ನಾಗಿ ತನ್ನ ಪ್ರಭಾವದಿಂದ ಮಾಡಿದನು.

135. ಆ ಋಷಿಯು ಅದನ್ನು ನೋಡಿ 'ಆಹಾ ! ನಾನು ಸಿದ್ಧನಾಗಿಬಿಟ್ಟೆ' ಎಂದು ದರ್ಪತಾಳಿದನು. ಆಗ ವರರುಚಿಯು ಸ್ವಲ್ಪ ನಕ್ಕು ಅವನಿಗೆ ಹೀಗೆ ಹೇಳಿದನು.

136. "ನಿನ್ನ ಯೋಗ್ಯತೆಯನ್ನು ಅರಿಯುವ ಇಚ್ಛೆಯಿಂದ ನಾನು ನಿನ್ನ ರಕ್ತವನ್ನು ಶಾಕರಸವನ್ನಾಗಿ ಮಾಡಿದೆನು. ಮುನಿಯೇ, ನೀನಿನ್ನೂ ನಿನ್ನ ಅಹಂಕಾರವನ್ನು ಬಿಟ್ಟಿಲ್ಲ.

137. ಜ್ಞಾನದ ಹಾದಿಯಲ್ಲಿ ಅಹಂಕಾರವೆಂಬುದು ದೊಡ್ಡ ಅಡ್ಡಿ. ಅದನ್ನು ದಾಟುವುದು ಕಷ್ಟ. ಜ್ಞಾನವಿಲ್ಲದೆ ನೂರಾರು ವ್ರತಗಳನ್ನು ಮಾಡಿದರೂ ಮೋಕ್ಷವು ಸಿದ್ಧಿಸುವುದಿಲ್ಲ.

138. ಅಶಾಶ್ವತವಾದ ಸ್ವರ್ಗವು ಮೋಕ್ಷಾಪೇಕ್ಷಿಗಳ ಮನಸ್ಸನ್ನು ಆಕರ್ಷಿಸಬಾರದು. ಋಷಿಯೇ, ಅಹಂಕಾರವನ್ನು ತ್ಯಜಿಸಿ ಜ್ಞಾನವನ್ನು ಗಳಿಸುವುದಕ್ಕೆ ಯತ್ನಮಾಡು."

---

ಗಚ್ಛನ್ ದದರ್ಶ ಗಂಗಾಯಾಂ ಸೋಽಥ ಶಾಕಾಶಿನಂ ಮುನಿಮ್ ।
ತತ್ಸಮಕ್ಷಂ ಚ ತಸ್ಯರ್ಷೇಃ ಕುಶೇನಾಭೂತ್ ಕರಕ್ಷತಿಃ ॥ 133
ತತೋಽಸ್ಯ ರುಧಿರಂ ನಿರ್ಯತ್ ತೇನ ಶಾಕರಸೀಕೃತಮ್।
ಅಹಂಕಾರಪರೀಕ್ಷಾರ್ಥಂ ಕೌತುಕಾತ್ ಸ್ವಪ್ರಭಾವತಃ ॥ 134
ತದ್‌ದೃಷ್ಟ್ವಾ ಹಂತ ಸಿದ್ಧೋಽಸ್ಮೀತ್ಯಗಾದ್ ದರ್ಪಮಸೌ ಮುನಿಃ ।
ತತೋ ವರರುಚಿಃ ಕಿಂಚಿದ್ ವಿಹಸ್ಯೈವ ಜಗಾದ ತಮ್ ॥ 135
ಜಿಜ್ಞಾಸನಾಯ ರಕ್ತಂ ತೇ ಮಯಾ ಶಾಕರಸೀಕೃತಮ್ ।
ಯಾವನ್ನಾದ್ಯಾಪ್ಯಹಂಕಾರಃ ಪರಿತ್ಯಕ್ತಸ್ತ್ವಯಾ ಮುನೇ ॥ 136
ಜ್ಞಾನಮಾರ್ಗೇ ಹ್ಯಹಂಕಾರಃ ಪರಿಘೋ ದುರತಿಕ್ರಮಃ ।
ಜ್ಞಾನಂ ವಿನಾ ಚ ನಾಸ್ತ್ಯೇವ ಮೋಕ್ಷೋ ವ್ರತಶತೈರಪಿ ॥ 137
ಸ್ವರ್ಗಸ್ತು ನ ಮುಮುಕ್ಷೂಣಾಂ ಕ್ಷಯೀ ಚಿತ್ತಂ ವಿಲೋಭಯೇತ್ ।
ತಸ್ಮಾದಹಂಕೃತಿತ್ಯಾಗಾಜ್ಜ್ಞಾನೇ ಯತ್ನಂ ಮುನೇ ಕುರು ॥ 138

139. ಹೀಗೆ ಋಷಿಗೆ ವರರುಚಿಯು ವಿನಯವನ್ನು ಕಲಿಸಿದಾಗ ಅವನು ನಮಸ್ಕರಿಸಿ ಸ್ತುತಿಸಿದನು. ವರರುಚಿಯು ಪ್ರಶಾಂತವಾದ ಬದರಿಕಾಶ್ರಮದ ಪ್ರದೇಶಕ್ಕೆ ತೆರಳಿದನು.

140. ಮನುಷ್ಯದೇಹವನ್ನು ತ್ಯಜಿಸಲು ಅಪೇಕ್ಷಿಸಿದ ವರರುಚಿಯು ದೃಢವಾದ ಭಕ್ತಿಯಿಂದ, ಶರಣಾಗತರನ್ನು ರಕ್ಷಿಸುವ ದೇವಿಯ ಆಶ್ರಮಕ್ಕೆ ಹೋದನು. ಆ ದೇವಿಯೂ ತನ್ನ ಸ್ವರೂಪದಿಂದ ಪ್ರತ್ಯಕ್ಷಳಾಗಿ ದೇಹತ್ಯಾಗಕ್ಕೆ ಸ್ವತಃ ಅಗ್ನಿಧಾರಣೆಯನ್ನು ತಿಳಿಸಿಕೊಟ್ಟಳು.

141. ಆ ಧಾರಣೆಯಿಂದ ಶರೀರವನ್ನು ಅಗ್ನಿಯಲ್ಲಿ ದಹಿಸಿದ ವರರುಚಿಯು ತನ್ನ ನಿಜವಾದ ದಿವ್ಯಸ್ಥಿತಿಯನ್ನು ಪಡೆದುಕೊಂಡನು. ಕಾಣಭೂತಿಯು ಗುಣಾಢ್ಯನ ಬರುವಿಕೆಗಾಗಿ ಉತ್ಕಂಠೆಯಿಂದ ವಿಂಧ್ಯಾಟವಿಯ ಪ್ರದೇಶದಲ್ಲೇ ಕಾಯುತ್ತಿದ್ದನು.

ಮಹಾಕವಿ ಸೋಮದೇವಭಟ್ಟನು ರಚಿಸಿದ

ಕಥಾಸರಿತ್ಸಾಗರದ ಕಥಾಪೀಠಲಂಬಕದಲ್ಲಿ

ಐದನೆಯ ತರಂಗವು ಮುಗಿಯಿತು.

---

ವಿನೀಯೈವಂ ಮುನಿಂ ತೇನ ಪ್ರಣತೇನ ಕೃತಸ್ತುತಿಃ ।
ತಂ ಬದರ್ಯಾಶ್ರಮೋದ್ದೇಶಂ ಶಾಂತಂ ವರರುಚಿರ್ಯಯೌ ॥ 139

ಅಥ ಸ ನಿಬಿಡಭಕ್ತ್ಯಾ ತತ್ರ ದೇವೀಂ ಶರಣ್ಯಾಂ
ಶರಣಮುಪಗತೋಽಸೌ ಮರ್ತ್ಯಭಾವಂ ಮುಮುಕ್ಷುಃ ।
ಪ್ರಕಟಿತನಿಜಮೂರ್ತಿಃ ಸಾಪಿ ತಸ್ಮೈ ಶಶಂಸ
ಸ್ವಯಮನಲಸಮುತ್ಥಾಂ ಧಾರಣಾಂ ದೇಹಮುಕ್ತ್ಯೈ ॥ 140

ದಗ್ಧ್ವಾ ಶರೀರಮಥ ಧಾರಣಯಾ ತಯಾ ತದ್
ದಿವ್ಯಾಂ ಗತಿಂ ವರರುಚಿಃ ಸ ನಿಜಾಂ ಪ್ರಪೇದೇ ।
ವಿಂಧ್ಯಾಟವೀಭುವಿ ತತಃ ಸ ಚ ಕಾಣಭೂತಿ —
ರಾಸೀದಭೀಪ್ಸಿತಗುಣಾಢ್ಯಸಮಾಗಮೋತ್ಕಃ ॥ 141

ಇತಿ ಮಹಾಕವಿ ಶ್ರೀ ಸೋಮದೇವಭಟ್ಟವಿರಚಿತೇ

ಕಥಾಸರಿತ್ಸಾಗರೇ

ಕಥಾಪೀಠಲಂಬಕೇ ಪಂಚಮಸ್ತರಂಗಃ ।

# ಆರನೆಯ ತರಂಗ

೧-೨ ಮನುಷ್ಯಶರೀರವನ್ನು ಧರಿಸಿ ಕಾಡಿನಲ್ಲಿ ಅಲೆದಾಡುತ್ತಿದ್ದ ಮಾಲ್ಯವಂತನು ಗುಣಾಢ್ಯನೆಂಬ ಹೆಸರಿನಿಂದ ಸಾತವಾಹನಭೂಪಾಲನನ್ನು ಆಶ್ರಯಿಸಿ ಅವನ ಎದುರಿನಲ್ಲೇ ಸಂಸ್ಕೃತ ಮುಂತಾದ ಮೂರು ಭಾಷೆಗಳನ್ನು ತ್ಯಜಿಸುವೆನೆಂದು ಪ್ರತಿಜ್ಞೆಮಾಡಿ ಖಿನ್ನವಾದ ಮನಸ್ಸಿನಿಂದ ವಿಂಧ್ಯವಾಸಿನಿಯ ದರ್ಶನಕ್ಕಾಗಿ ಬಂದನು.

೩ ವಿಂಧ್ಯವಾಸಿನಿಯ ಆದೇಶದಿಂದ ಅವನು ಹೋಗಿ ಕಾಣಭೂತಿಯನ್ನು ಕಂಡನು. ಆಗ ತನ್ನ ಪೂರ್ವಜನ್ಮದ ಸ್ಮರಣೆಯನ್ನು ಪಡೆದು ಕೂಡಲೇ ಎಚ್ಚೆತ್ತನು.

೪. ಮೂರು ಭಾಷೆಗಳಿಗಿಂತಲೂ ಬೇರೆಯಾದ ಪೈಶಾಚೀಭಾಷೆಯಲ್ಲಿ ತನ್ನ ಹೆಸರನ್ನು ಹೇಳಿ ಅವನು ಕಾಣಭೂತಿಗೆ ಹೀಗೆ ಹೇಳಿದನು.

೫ "ಮಿತ್ರನೆ, ಪುಷ್ಪದಂತನಿಂದ ನೀನು ಕೇಳಿದ ದಿವ್ಯವಾದ ಕಥೆಯನ್ನು ಬೇಗನೆ ನನಗೆ ಹೇಳು. ಆಗ ನೀನೂ ನಾನೂ ಒಟ್ಟಿಗೆ ಶಾಪಮುಕ್ತರಾಗೋಣ."

---

# ಷಷ್ಠಸ್ತರಂಗಃ

ತತಃ ಸ ಮರ್ತ್ಯವಪುಷಾ ಮಾಲ್ಯವಾನ್ ವಿಚರನ್ ವನೇ ।
ನಾಮ್ನಾ ಗುಣಾಢ್ಯಃ ಸೇವಿತ್ವಾ ಸಾತವಾಹನಭೂಪತಿಮ್ ॥ ೧
ಸಂಸ್ಕೃತಾದ್ಯಾಸ್ತದಗ್ರೇ ಚ ಭಾಷಾಸ್ತಿಸ್ರಃ ಪ್ರತಿಜ್ಞಯಾ ।
ತ್ಯಕ್ತ್ವಾ ಖಿನ್ನಮನಾ ದ್ರಷ್ಟುಮಾಯಯೌ ವಿಂಧ್ಯವಾಸಿನೀಮ್ ॥ ೨
ತದಾದೇಶೇನ ಗತ್ವಾ ಚ ಕಾಣಭೂತಿಂ ದದರ್ಶ ಸಃ ।
ತತೋ ಜಾತಿಂ ನಿಜಾಂ ಸ್ಮೃತ್ವಾ ಪ್ರಬುದ್ಧಃ ಸಹಸಾಭವತ್ ॥ ೩
ಆಶ್ರಿತ್ಯ ಭಾಷಾಂ ಪೈಶಾಚೀಂ ಭಾಷಾತ್ರಯವಿಲಕ್ಷಣಾಮ್ ।
ಶ್ರಾವಯಿತ್ವಾ ನಿಜಂ ನಾಮ ಕಾಣಭೂತಿಂ ಚ ಸೋಽಬ್ರವೀತ್ ॥ ೪
ಪುಷ್ಪದಂತಾಚ್ಛ್ರುತಾಂ ದಿವ್ಯಾಂ ಶೀಘ್ರಂ ಕಥಯ ಮೇ ಕಥಾಮ್ ।
ಯೇನ ಶಾಪಂ ತರಿಷ್ಯಾವಸ್ತ್ವಂ ಚಾಹಂ ಚ ಸಮಂ ಸಖೇ ॥ ೫

೬ ಆ ಮಾತನ್ನು ಕೇಳಿ ಸಂತುಷ್ಟನಾದ ಕಾಣಭೂತಿಯು ನಮಸ್ಕರಿಸಿ ಹೀಗೆ ಹೇಳಿದನು. "ಪ್ರಭು, ಕಥೆಯನ್ನೇನೋ ನಾನು ಹೇಳುವೆನು. ಆದರೆ ನನಗೆ ತುಂಬ ಕುತೂಹಲ.

೭ ಹುಟ್ಟಿನಿಂದ ಆರಂಭಿಸಿ ನಿನ್ನ ಚರಿತ್ರೆಯನ್ನು ಹೇಳಿ ಅನುಗ್ರಹಿಸು." ಎಂದು ಅವನು ಪ್ರಾರ್ಥಿಸಿದಾಗ ಗುಣಾಢ್ಯನು ಹೇಳಲು ಪ್ರಾರಂಭಿಸಿದನು.

## ಗುಣಾಢ್ಯನ ಕಥೆ

೮ ಪ್ರತಿಷ್ಠಾನದೇಶದಲ್ಲಿ ಸುಪ್ರತಿಷ್ಠಿತ ಎಂಬ ನಗರವಿದೆ. ಅಲ್ಲಿ ಸೋಮಶರ್ಮನೆಂಬ ಬ್ರಾಹ್ಮಣೋತ್ತಮನಿದ್ದನು.

೯. ಮಿತ್ರನೆ, ಅವನಿಗೆ ವತ್ಸ ಗುಲ್ಮಕ ಎಂಬ ಇಬ್ಬರು ಪುತ್ರರು ಮತ್ತು ಶ್ರುತಾರ್ಥಾ ಎಂಬ ಒಬ್ಬ ಹೆಣ್ಣುಮಗಳೂ ಹುಟ್ಟಿದರು.

೧೦. ಕಾಲವು ಕಳೆದಂತೆ ಆ ಬ್ರಾಹ್ಮಣನೂ ಅವನ ಪತ್ನಿಯೂ ಮೃತರಾದರು. ಅವರ ಗಂಡುಮಕ್ಕಳು ತಂಗಿಯನ್ನು ಸಾಕುತ್ತಿದ್ದರು.

೧೧. ಅಕಸ್ಮಾತ್ ಆಕೆ ಗರ್ಭಿಣಿಯಾದಳು. ಅದನ್ನು ತಿಳಿದ ವತ್ಸಗುಲ್ಮಕರಿಗೆ ಪರಸ್ಪರ ಸಂಶಯವು ಹುಟ್ಟಿತು. ಏಕೆಂದರೆ ಅಲ್ಲಿ ಬೇರೆ ಯಾವ ಪುರುಷರೂ ಇರಲಿಲ್ಲ.

---

ತಚ್ಛ್ರುತ್ವಾ ಪ್ರಣತೋ ಹೃಷ್ಟಃ ಕಾಣಭೂತಿರುವಾಚ ತಮ್ ।
ಕಥಯಾಮಿ ಕಥಾಂ ಕಿಂತು ಕೌತುಕಂ ಮೇ ಮಹತ್ಪ್ರಭೋ ॥ ೬
ಆಜನ್ಮಚರಿತಂ ತಾವತ್ತ್ವಂಸ ಮೇ ಕುರ್ವನುಗ್ರಹಮ್ ।
ಇತಿ ತೇನಾರ್ಥಿತೋ ವಕ್ತುಂ ಗುಣಾಢ್ಯೋಽಥ ಪ್ರಚಕ್ರಮೇ ॥ ೭
ಪ್ರತಿಷ್ಠಾನೇಽಸ್ತಿ ನಗರಂ ಸುಪ್ರತಿಷ್ಠಿತಸಂಜ್ಞಕಮ್ ।
ತತ್ರಾಭೂತ್ ಸೋಮಶರ್ಮಾಖ್ಯಃ ಕೋಽಪಿ ಬ್ರಾಹ್ಮಣಸತ್ತಮಃ ॥ ೮
ವತ್ಸಶ್ಚ ಗುಲ್ಮಕಶ್ಚೈವ ತಸ್ಯ ದ್ವೌ ತನಯೌ ಸಖೇ ।
ಜಾಯೇತೇ ಸ್ಮ ತೃತೀಯಾ ಚ ಶ್ರುತಾರ್ಥಾ ನಾಮ ಕನ್ಯಕಾ ॥ ೯
ಕಾಲೇನ ಬ್ರಾಹ್ಮಣಃ ಸೋಽಥ ಸಭಾರ್ಯಃ ಪಂಚತಾಂ ಗತಃ ।
ತತ್ಪುತ್ರೌ ತೌ ಸ್ವಸಾರಂ ತಾಂ ಪಾಲಯಂತಾವತಿಷ್ಠತಾಮ್ ॥ ೧೦
ಸಾ ಚಾಕಸ್ಮಾತ್ ಸಗರ್ಭಾಭೂತ್ ತದ್‌ದೃಷ್ಟ್ವಾ ವತ್ಸಗುಲ್ಮಯೋಃ ।
ತತ್ರಾನ್ಯಪುರುಷಾಭಾವಾಚ್ಛಂಕಾನ್ಯೋನ್ಯಮಜಾಯತ ॥ ೧೧

೧೨. ಅವರ ಮನಸ್ಸನ್ನು ಅರಿತುಕೊಂಡ ಶ್ರುತಾರ್ಥೆಯು ಅವರನ್ನು ಕುರಿತು ಹೇಳಿದಳು. "ನೀವು ಪಾಪವನ್ನು ಶಂಕಿಸಬೇಡಿ. ವಿಷಯವನ್ನು ನಾನು ಹೇಳುತ್ತೇನೆ, ಕೇಳಿರಿ.

೧೩. ಸ್ನಾನಕ್ಕೆಂದು ನಾನು ಹೋಗಿದ್ದಾಗ ಸರ್ಪಗಳ ರಾಜನಾದ ವಾಸುಕಿಯ ಸೋದರನ ಪುತ್ರ ಕೀರ್ತಿಸೇನ ಎಂಬುವನು ನನ್ನನ್ನು ನೋಡಿದನು.

೧೪. ಆಗ ಅವನು ಕಾಮವಶನಾಗಿ ತನ್ನ ವಂಶವನ್ನೂ ಹೆಸರನ್ನೂ ಹೇಳಿ ಗಾಂಧರ್ವವಿಧಿಯಿಂದ ನನ್ನನ್ನು ಭಾರ್ಯೆಯನ್ನಾಗಿ ಮಾಡಿಕೊಂಡನು.

೧೫. ಆದ್ದರಿಂದ ನನ್ನ ಈ ಗರ್ಭವು ವಿಪ್ರಜಾತಿಯದೇ' ಎಂದು ತಂಗಿಯು ಹೇಳಿದುದನ್ನು ಕೇಳಿದ ವತ್ಸ–ಗುಲ್ಮಕರು "ನಿನ್ನ ಮಾತಿಗೆ ಪ್ರಮಾಣವೇನು ?" ಎಂದು ಕೇಳಿದರು.

೧೬. ಆಗ ಅವಳು ಏಕಾಂತಕ್ಕೆ ಹೋಗಿ ಆ ನಾಗಕುಮಾರನನ್ನು ಸ್ಮರಿಸಿದಳು. ಅಷ್ಟರಿಂದಲೇ ಅಲ್ಲಿಗೆ ಬಂದ ಕೀರ್ತಿಸೇನನು ವತ್ಸ–ಗುಲ್ಮಕರನ್ನು ಕುರಿತು ಹೇಳಿದನು.

೧೭. "ಇವಳು ಶಾಪಭ್ರಷ್ಟಳಾದ ಅಪ್ಸರೆ. ಇವಳನ್ನು ನಾನು ಪತ್ನಿಯನ್ನಾಗಿ ಸ್ವೀಕರಿಸಿದ್ದೇನೆ. ನಿಮ್ಮ ತಂಗಿಯಾದ ಇವಳೂ ನೀವಿಬ್ಬರೂ ಶಾಪದಿಂದ ಭೂಲೋಕಕ್ಕೆ ಜಾರಿಬಿದ್ದಿದ್ದೀರಿ.

೧೮. ಇವಳಿಗೆ ಪುತ್ರನು ಖಂಡಿತವಾಗಿಯೂ ಹುಟ್ಟುತ್ತಾನೆ. ಆಮೇಲೆ ಇವಳಿಗೂ ಮತ್ತು ನಿಮ್ಮಿಬ್ಬರಿಗೂ ಶಾಪದಿಂದ ವಿಮೋಚನೆ ಸಿಗುವುದು.'

---

ತತಃ ಶ್ರುತಾರ್ಥಾ ಚಿತ್ತಜ್ಞಾ ಭ್ರಾತರೌ ತಾವಭಾಷತ ।
ಪಾಪಶಂಕಾ ನ ಕರ್ತವ್ಯಾ ಶೃಣುತಂ ಕಥಯಾಮಿ ವಾಮ್ ॥ ೧೨
ಕುಮಾರಃ ಕೀರ್ತಿಸೇನಾಖ್ಯೋ ನಾಗರಾಜಸ್ಯ ವಾಸುಕೇಃ ।
ಭ್ರಾತುಃ ಪುತ್ರೋಽಸ್ತಿ ತೇನಾಹಂ ದೃಷ್ಟಾ ಸ್ನಾತುಂ ಗತಾ ಸತೀ ॥ ೧೩
ತತಃ ಸ ಮದನಾಕ್ರಾಂತೋ ನಿವೇದ್ಯಾನ್ವಯನಾಮನೀ ।
ಗಾಂಧರ್ವೇಣ ವಿವಾಹೇನ ಮಾಂ ಭಾರ್ಯಾಮಕರೋತ್ತದಾ ॥ ೧೪
ವಿಪ್ರಜಾತೇರಯಂ ತಸ್ಮಾನ್ಮಮ ಗರ್ಭ ಇತಿ ಸ್ವಸುಃ ।
ಶ್ರುತ್ವಾ ಕಃ ಪ್ರತ್ಯಯೋಽತ್ರೇತಿ ವತ್ಸಗುಲ್ಮಾವವೋಚತಾಮ್ ॥ ೧೫
ತತೋ ರಹಸಿ ಸಸ್ಮಾರ ಸಾ ತಂ ನಾಗಕುಮಾರಕಮ್ ।
ಸ್ಮೃತಮಾತ್ರಾಗತಃ ಸೋಽಥ ವತ್ಸಗುಲ್ಮಾವಭಾಷತ ॥ ೧೬
ಭಾರ್ಯಾ ಕೃತಾ ಮಯೈವೇಯಂ ಶಾಪಭ್ರಷ್ಟಾ ವರಾಪ್ಸರಾಃ ।
ಯುಷ್ಮತ್ಸ್ವಸಾ ಯುವಾಂ ಚೈವ ಶಾಪೇನೈವ ಚ್ಯುತೌ ಭುವಿ ॥ ೧೭
ಪುತ್ರೋ ಜನಿಷ್ಯತೇ ಚಾತ್ರ ಯುಷ್ಮತ್ಸ್ವಸುರಸಂಶಯಮ್ ।
ತತೋಽಸ್ಯಾ : ಶಾಪನಿರ್ಮುಕ್ತಿರ್ಯುವಯೋಶ್ಚ ಭವಿಷ್ಯತಿ ॥ ೧೮

೧೯. ಇಷ್ಟು ಹೇಳಿ ಅವನು ಕಣ್ಮರೆಯಾದನು. ಅನಂತರ ಕೆಲವೇ ದಿನಗಳಲ್ಲಿ ಶ್ರುತಾರ್ಥೆಗೆ ಮಗನು ಹುಟ್ಟಿದನು. ಮಿತ್ರನೆ, ಅವನೇ ನಾನು.

೨೦. "ಗಣದ ಅವತಾರವಾಗಿ ಈ ಗುಣಾಢ್ಯನೆಂಬ ಬ್ರಾಹ್ಮಣನು ಹುಟ್ಟಿದ್ದಾನೆ" ಎಂದು ಆ ಸಮಯದಲ್ಲಿ ಆಕಾಶದಿಂದ ವಾಣಿಯ ಕೇಳಿಸಿತು.

೨೧. ಶಾಪವಿಮೋಚನೆಯನ್ನು ಹೊಂದಿದ ನನ್ನ ತಾಯಿಯೂ, ಸೋದರಮಾವಂದಿರೂ ಕಾಲಾನುಗುಣವಾಗಿ ಮೃತರಾದರು. ನಾನು ಎದೆಗುಂದಿದೆ.

೨೨. ಆಮೇಲೆ ದುಃಖವನ್ನು ಬದಿಗೊತ್ತಿ ಸ್ವಾವಲಂಬನದಿಂದ ನಾನು ಇನ್ನೂ ಚಿಕ್ಕವನಾಗಿದ್ದರೂ ವಿದ್ಯಾರ್ಜನೆಗಾಗಿ ದಕ್ಷಿಣಾಪಥಕ್ಕೆ ಹೋದೆನು.

೨೩. ಸ್ವಲ್ಪಕಾಲದಲ್ಲೇ ಅಲ್ಲಿ ಎಲ್ಲ ವಿದ್ಯೆಗಳನ್ನೂ ಕಲಿತು ಪ್ರಸಿದ್ಧನಾಗಿ ನನ್ನ ನೈಜವಾದ ಗುಣಗಳನ್ನು ಪ್ರಕಾಶಕ್ಕೆ ತರಲು ಸ್ವದೇಶಕ್ಕೆ ಹಿಂದಿರುಗಿದೆನು.

೨೪. ಸುಪ್ರತಿಷ್ಠಿತ ಎಂಬ ಆ ನಗರವನ್ನು ಶಿಷ್ಯಸಮೇತನಾಗಿ ಪ್ರವೇಶಿಸುವಾಗ ಅಲ್ಲಿ ಅಪೂರ್ವವಾದ ಶೋಭೆಯನ್ನು ಕಂಡೆನು.

೨೫. ಒಂದುಕಡೆ ಸಾಮಗರು ಶಾಸ್ತ್ರಾನುಗುಣವಾಗಿ ಸಾಮಗಾನಮಾಡುತ್ತಿದ್ದಾರೆ. ಇನ್ನೊಂದು ಕಡೆ ಬ್ರಾಹ್ಮಣರು ವೇದಗಳ ನಿರ್ಣಯದ ಬಗೆಗೆ ವಾದವಿವಾದಗಳನ್ನು ಮಾಡುತ್ತಿದ್ದಾರೆ.

---

ಇತ್ಯುಕ್ತ್ವಾಂತರ್ಹಿತಃ ಸೋಽಭೂತ್ ತತಃ ಸ್ತೋಕೈಶ್ಚ ವಾಸರೈಃ ।
ಶ್ರುತಾರ್ಥಾಯಾಃ ಸುತೋ ಜಾತಸ್ತು ಹಿ ಜಾನೀಹಿ ಮಾಂ ಸಖೇ ॥ ೧೯

ಗಣಾವತಾರೋ ಜಾತೋಽಯಂ ಗುಣಾಢ್ಯೋ ನಾಮ ಬ್ರಾಹ್ಮಣಃ ।
ಇತಿ ತತ್ಕಾಲಮುದಭೂದಂತರಿಕ್ಷಾತ್ ಸರಸ್ವತೀ ॥ ೨೦

ಕ್ಷೀಣಶಾಪಾಸ್ತತಸ್ತೇ ಚ ಜನನೀಮಾತುಲಾ ಮಮ ।
ಕಾಲೇನ ಪಂಚತಾಂ ಪ್ರಾಪ್ತಾ ಗತಶ್ಚಾಹಮಧೀರತಾಮ್॥ ೨೧

ಅಥ ಶೋಕಂ ಸಮುತ್ಸೃಜ್ಯ ಬಾಲೋಽಪಿ ಗತವಾನಹಮ್ ।
ಸ್ವಾವಷ್ಟಂಭೇನ ವಿದ್ಯಾನಾಂ ಪ್ರಾಪ್ತಯೇ ದಕ್ಷಿಣಾಪಥಮ್ ॥ ೨೨

ಕಾಲೇನ ತತ್ರ ಸಂಪ್ರಾಪ್ಯ ಸರ್ವಾ ವಿದ್ಯಾಃ ಪ್ರಸಿದ್ಧಿಮಾನ್ ।
ಸ್ವದೇಶಮಾಗತೋಽಭೂವಂ ದರ್ಶಯಿಷ್ಯನ್ ನಿಜಾನ್‌ಗುಣಾನ್ ॥ ೨೩

ಪ್ರವಿಶಂಶ್ಚ ಚಿರಾತ್ತತ್ರ ನಗರೇ ಸುಪ್ರತಿಷ್ಠಿತೇ ।
ಅಪಶ್ಯಂ ಶಿಷ್ಯಸಹಿತಃ ಶೋಭಾಂ ಕಾಮಪ್ಯಹಂ ತದಾ ॥ ೨೪

ಕ್ವಚಿತ್ ಸಾಮಾನಿ ಛಂದೋಗಾ ಗಾಯಂತಿ ಚ ಯಥಾವಿಧಿ ।
ಕ್ವಚಿದ್ ವಿವಾದೋ ವಿಪ್ರಾಣಾಮಭೂದ್ ವೇದವಿನಿರ್ಣಯೇ ॥ ೨೫

೨೬. ಮತ್ತೊಂದೆಡೆಯಲ್ಲಿ 'ಯಾರಿಗೆ ದ್ಯೂತಕಲೆ ಗೊತ್ತೋ ಅವರಿಗೆ ನಿಧಿ ಹಸ್ತಗತವಾಗುತ್ತದೆ' ಇತ್ಯಾದಿ ಪ್ರಲೋಭನೆಗಳಿಂದ ಜೂಜುಕೋರರು ದ್ಯೂತವನ್ನು ಹೊಗಳುತ್ತಿದ್ದಾರೆ.

೨೭. ಪರಸ್ಪರ ತಮ್ಮ ವ್ಯಾಪಾರಕಲೆಯ ಕೌಶಲ್ಯದ ಬಗೆಗೆ ಹೇಳಿಕೊಳ್ಳುತ್ತಿದ್ದ ವ್ಯಾಪಾರಿಗಳ ಮಧ್ಯದಲ್ಲಿ ಒಬ್ಬ ವ್ಯಾಪಾರಿಯು ಹೀಗೆನ್ನುತ್ತಿದ್ದನು.

## ಮೂಷಕನೆಂಬ ವ್ಯಾಪಾರಿಯ ಕಥೆ

೨೮. ಸಂಯಮವಂತನು ಹಣದಿಂದ ಮತ್ತಷ್ಟು ಹಣವನ್ನು ಪಡೆದುಕೊಳ್ಳುತ್ತಾನೆ ಎಂಬುದು ಅದ್ಭುತ. ನಾನಾದರೋ ಹಣವಿಲ್ಲದಿದ್ದರೂ ಹಿಂದೆ ಲಕ್ಷ್ಮಿಯನ್ನು ವಶಪಡಿಸಿಕೊಂಡೆನು.

೨೯. ನಾನು ತಾಯಿಯ ಹೊಟ್ಟೆಯಲ್ಲಿದ್ದಾಗಲೇ ನನ್ನ ತಂದೆ ಪರಲೋಕಕ್ಕೆ ಹೋದನು. ನನ್ನ ತಾಯಿಯ ಬಳಿ ಇದ್ದುದನ್ನೆಲ್ಲ ಪಾಪಿಗಳಾದ ಬಂಧುಗಳು ಅಪಹರಿಸಿದರು.

೩೦. ಅವರ ಭಯದಿಂದ ನನ್ನ ತಾಯಿಯು ದೂರಹೋಗಿ ತನ್ನ ಗರ್ಭವನ್ನು ಕಾಪಾಡಿಕೊಂಡು ನನ್ನ ತಂದೆಯ ಮಿತ್ರನಾಗಿದ್ದ ಕುಮಾರದತ್ತನ ಮನೆಯಲ್ಲಿ ಉಳಿದುಕೊಂಡಳು.

೩೧. ಅಲ್ಲಿ ಆ ಪತಿವ್ರತೆಯಲ್ಲಿ ಆಕೆಯ ಜೀವನದ ಏಕಮಾತ್ರ ಆಧಾರವಾಗಿ ಹುಟ್ಟಿದೆನು. ನನ್ನನ್ನು ಆಕೆ ಕಷ್ಟಪಟ್ಟು ಕೆಲಸಗಳನ್ನು ಮಾಡುತ್ತಾ ಬೆಳೆಸಿದಳು.

---

ಯೋಽತ್ರ ದ್ಯೂತಕಲಾಂ ವೇತ್ತಿ ತಸ್ಯ ಹಸ್ತಗತೋ ನಿಧಿಃ ।
ಇತ್ಯಾದಿ ಕೈತವೈರ್ದ್ಯೂತಮಸ್ತುವನ್ ಕಿತವಾಃ ಕ್ವಚಿತ್ ॥ ೨೬
ಅನ್ಯೋನ್ಯಂ ನಿಜವಾಣಿಜ್ಯಕಲಾಕೌಶಲವಾದಿನಾಮ್ ।
ಕ್ವಚಿಚ್ಚ ವಣಿಜಾಂ ಮಧ್ಯೇ ವಣಿಗೇಕೋಽಬ್ರವೀದಿದಮ್ ॥ ೨೭
ಅರ್ಥೈಃ ಸಂಯಮವಾನರ್ಥಾನ್ ಪ್ರಾಪ್ನೋತಿ ಕಿಯದದ್ಭುತಮ್ ।
ಮಯಾ ಪುನರ್ವಿನೈವಾರ್ಥಂ ಲಕ್ಷ್ಮೀರಾಸಾದಿತಾ ಪುರಾ ॥ ೨೮
ಗರ್ಭಸ್ಥಸ್ಯ ಚ ಮೇ ಪೂರ್ವಂ ಪಿತಾ ಪಂಚತ್ವಮಾಗತಃ ।
ಮನ್ಮಾತುಶ್ಚ ತದಾ ಪಾಪೈರ್ಗೋತ್ರಜೈಃ ಸಕಲಂ ಹೃತಮ್ ॥ ೨೯
ತತಃ ಸಾ ತದ್ಭಯಾದ್ಗತ್ವಾ ರಕ್ಷಂತೀ ಗರ್ಭಮಾತ್ಮನಃ ।
ತಸ್ಥೌ ಕುಮಾರದತ್ತಸ್ಯ ಪಿತೃಮಿತ್ರಸ್ಯ ವೇಶ್ಮನಿ ॥ ೩೦
ತತ್ರ ತಸ್ಯಾಶ್ಚ ಜಾತೋಽಹಂ ಸಾಧ್ವ್ಯಾ ವೃತ್ತಿನಿಬಂಧನಮ್ ।
ತತಶ್ಚಾವರ್ಧಯತ್ ಸಾ ಮಾಂ ಕೃಚ್ಛ್ರಕರ್ಮಾಣಿ ಕುರ್ವತೀ ॥ ೩೧

೩೨. ಬಡತನದಿಂದ ದೀನಳಾಗಿದ್ದ ಆಕೆ ಉಪಾಧ್ಯಾಯರನ್ನು ಬೇಡಿ ನನಗೆ ಕ್ರಮವಾಗಿ ಲಿಪಿಯನ್ನೂ ಗಣಿತವನ್ನೂ ಕಲಿಸಿದಳು.

೩೩. "ಮಗು, ನೀನು ವೈಶ್ಯನ ಮಗ. ಆದ್ದರಿಂದ ವಾಣಿಜ್ಯವನ್ನು ಮಾಡುವುದೇ ಯುಕ್ತ ಈ ದೇಶದಲ್ಲಿ ಅತ್ಯಂತ ಶ್ರೀಮಂತನಾದ ವಿಶಾಖಿಲನೆಂಬ ವ್ಯಾಪಾರಿ ಇದ್ದಾನೆ

೩೪. ಸತ್ಕುಲದಲ್ಲಿ ಹುಟ್ಟಿ ದರಿದ್ರರಾಗಿರುವವರಿಗೆ ಅವನು ಬಂಡವಾಳವನ್ನು ಕೊಡುತ್ತಾನೆ. ಹೋಗು, ಬಂಡವಾಳವನ್ನು ಕೊಡುವಂತೆ ಅವನನ್ನು ಕೇಳಿಕೋ' ಎಂದು ತಾಯಿ ನನಗೆ ಹೇಳಿದಳು.

೩೫. ನಾನು ಅವನ ಬಳಿಗೆ ಹೋದೆನು. ಆ ಕ್ಷಣದಲ್ಲಿ ವಿಶಾಖಿಲನು ಯಾವನೋ ಒಬ್ಬ ವ್ಯಾಪಾರಿಯ ಮಗನಿಗೆ ಕೋಪದಿಂದ ಹೀಗೆ ಹೇಳುತ್ತಿದ್ದನು.

೩೬. "ಇಲ್ಲಿ ನೆಲದ ಮೇಲೆ ಪ್ರಾಣಕಳೆದುಕೊಂಡು ಬಿದ್ದಿದೆಯಲ್ಲ ಒಂದು ಇಲಿ, ಅದನ್ನೇ ಮಾರಾಟದ ವಸ್ತುವನ್ನಾಗಿ ಮಾಡಿಕೊಂಡು ಜಾಣನು ಹಣವನ್ನು ಸಂಪಾದಿಸಬಲ್ಲನು.

೩೭. ಪಾಪಿ, ನಿನಗೆ ನಾನು ಎಷ್ಟೋ ದೀನಾರ (ಚಿನ್ನದ ನಾಣ್ಯ) ಗಳನ್ನು ಕೊಟ್ಟೆನು. ಅದನ್ನು ಬೆಳೆಸುವುದಂತೂ ದೂರದಲ್ಲೇ ಉಳಿಯಿತು, ಕೊಟ್ಟಿದ್ದ ಅಸಲನ್ನೂ ನೀನು ಉಳಿಸಲಿಲ್ಲ."

---

ಉಪಾಧ್ಯಾಯಮಥಾಭ್ಯರ್ಥ್ಯ ತಯಾಕಿಂಚನ್ಯದೀನಯಾ ।
ಕ್ರಮೇಣ ಶಿಕ್ಷಿತಶ್ಚಾಹಂ ಲಿಪಿಂ ಗಣಿತಮೇವ ಚ ॥ ೩೨

ವಣಿಕ್‌ಪುತ್ರೋಽಸಿ ತತ್ಪುತ್ರ ವಾಣಿಜ್ಯಂ ಕುರು ಸಾಂಪ್ರತಮ್।
ವಿಶಾಖಿಲಾಖ್ಯೋ ದೇಶೇಽಸ್ಮಿನ್ ವಣಿಕ್‌ಚಾಸ್ತಿ ಮಹಾಧನಃ ॥ ೩೩

ದರಿದ್ರಾಣಾಂ ಕುಲೀನಾನಾಂ ಭಾಂಡಮೂಲ್ಯಂ ದದಾತಿ ಸಃ ।
ಗಚ್ಛ ಯಾಚಸ್ವ ತಂ ಮೂಲ್ಯಮಿತಿ ಮಾತಾಬ್ರವೀಚ್ಚ ಮಾಮ್ ॥ ೩೪

ತತೋಽಹಮಾಗಮಂ ತಸ್ಯ ಸಕಾಶಂ ಸೋಽಪಿ ತತ್ಕ್ಷಣಮ್ ।
ಇತ್ಯವೋಚತ್ ಕ್ರುಧಾ ಕಂಚಿತ್ ವಣಿಕ್‌ಪುತ್ರಂ ವಿಶಾಖಿಲಃ ॥ ೩೫

ಮೂಷಕೋ ದೃಶ್ಯತೇ ಯೋಽಯಂ ಗತಪ್ರಾಣೋಽತ್ರ ಭೂತಲೇ ।
ಏತೇನಾಪಿ ಹಿ ಪಣ್ಯೇನ ಕುಶಲೋ ಧನಮರ್ಜಯೇತ್ ॥ ೩೬

ದತ್ತಾಸ್ತವ ಪುನಃ ಪಾಪ ದೀನಾರಾ ಬಹವೋ ಮಯಾ ।
ದೂರೇ ತಿಷ್ಠತು ತದ್ವೃದ್ಧಿಸ್ತ್ವಯಾ ತೇಽಪಿ ನ ರಕ್ಷಿತಾಃ ॥ ೩೭

೩೮. ಆ ಮಾತನ್ನು ಕೇಳಿ ತತ್‍ಕ್ಷಣವೇ ನಾನು ಆ ವಿಶಾಖಿಲನಿಗೆ ಹೇಳಿದೆನು. "ಬಂಡವಾಳವೆಂದು ನಿನ್ನಿಂದ ನಾನು ಈ ಇಲಿಯನ್ನೇ ತೆಗೆದುಕೊಳ್ಳುತ್ತೇನೆ."

೩೯. ಇಷ್ಟನ್ನು ಹೇಳಿ ಆ ಇಲಿಯನ್ನು ಕೈಯಲ್ಲಿ ಹಿಡಿದುಕೊಂಡು ವಿಶಾಖಿಲನ ಪುಸ್ತಕದಲ್ಲಿ ಅದನ್ನು ದಾಖಲಿಸಿ ನಾನು ಹೊರಟೆನು. ಆ ವ್ಯಾಪಾರಿಯು ನಕ್ಕುಬಿಟ್ಟನು.

೪೦. ಯಾವನೋ ಒಬ್ಬ ವ್ಯಾಪಾರಿಗೆ ಅವನ ಬೆಕ್ಕಿಗಾಗಿ ಆ ಇಲಿಯನ್ನು ಎರಡು ಬೊಗಸೆ ಕಡಲೆಯ ಬೆಲೆಗೆ ಮಾರಿದೆನು.

೪೧. ಆ ಕಡಲೆಗಳನ್ನು ಹುರಿದು ಜೊತೆಗೆ ಒಂದು ಮಡಿಕೆ ನೀರನ್ನು ತೆಗೆದುಕೊಂಡು ಹೋಗಿ ನಗರದ ಆಚೆ ಚೌಕದಲ್ಲಿ ನೆರಳಿನಲ್ಲಿ ನಿಂತುಕೊಂಡೆನು.

೪೨. ಕಟ್ಟಿಗೆ ಹೊರೆಗಳನ್ನು ಹೊತ್ತು ತರುವವರು ಗುಂಪಾಗಿ ಅಲ್ಲಿಗೆ ಬರುತ್ತಿದ್ದರು. ಅವರಿಗೆ ತಂಪಾಗಿದ್ದ ನೀರನ್ನೂ ಕಡಲೆಯನ್ನೂ ನಾನು ವಿನಯಪೂರ್ವಕವಾಗಿ ನೀಡಿದೆನು.

೪೩. ಒಬ್ಬೊಬ್ಬ ಕಟ್ಟಿಗೆ ಮಾರುವವನೂ ಪ್ರೀತಿಯಿಂದ ನನಗೆ ಎರಡೆರಡು ಕಟ್ಟಿಗೆಗಳನ್ನು ಕೊಟ್ಟನು. ಆ ಕಟ್ಟಿಗೆಗಳನ್ನು ತೆಗೆದುಕೊಂಡುಹೋಗಿ ನಾನು ಅಂಗಡಿಯಲ್ಲಿ ಮಾರಿದೆನು.

---

ತಚ್ಛ್ರುತ್ವಾ ಸಹಸೈವಾಹಂ ಸಮವೋಚಂ ವಿಶಾಖಿಲಮ್।
ಗೃಹೀತೋಽಯಂ ಮಯಾ ತ್ವತ್ತೋ ಭಾಂಡಮೂಲ್ಯಾಯ ಮೂಷಕಃ ॥ ೩೮

ಇತ್ಯುಕ್ತ್ವಾ ಮೂಷಕಂ ಹಸ್ತೇ ಗೃಹೀತ್ವಾ ಸಂಪುಟೇ ಚ ತಮ್ ।
ಲಿಖಿತ್ವಾಸ್ಯ ಗತೋಽಭೂವಮಹಂ ಸೋಽಪ್ಯಹಸದ್ ವಣಿಕ್ ॥ ೩೯
ಚಣಕಾಂಜಲಿಯುಗ್ಮೇನ ಮೂಲ್ಯೇನ ಸ ಚ ಮೂಷಕಃ ।
ಮಾರ್ಜಾರಸ್ಯ ಕೃತೇ ದತ್ತಃ ಕಸ್ಯಚಿದ್ ವಣಿಜೋ ಮಯಾ॥ ೪೦
ಕೃತ್ವಾ ತಾಂಶ್ಚಣಕಾನ್ ಭೃಷ್ಟಾನ್ ಗೃಹೀತ್ವಾ ಜಲಕುಂಭಿಕಾಮ್ ।
ಅತಿಷ್ಠಂ ಚತ್ವರೇ ಗತ್ವಾ ಛಾಯಾಯಾಂ ನಗರಾದ್ ಬಹಿಃ ॥ ೪೧
ತತ್ರ ಶ್ರಾಂತಾಗತಾಯಾಂಭಃ ಶೀತಲಂ ಚಣಕಾಂಶ್ಚ ತಾನ್ ।
ಕಾಷ್ಠಭಾರಿಕಸಂಘಾಯ ಸಪ್ರಶ್ರಯಮದಾಮಹಮ್ ॥ ೪೨
ಏಕೈಕಃ ಕಾಷ್ಠಿಕಃ ಪ್ರೀತ್ಯಾ ಕಾಷ್ಠೇ ದ್ವೇದ್ವೇ ದದೌ ಮಮ ।
ವಿಕ್ರೀತವಾನಹಂ ತಾನಿ ನೀತ್ವಾ ಕಾಷ್ಠಾನಿ ಚಾಪಣೇ ॥ ೪೩

೪೪. ಅದರಿಂದ ಸಿಕ್ಕಿದ ಸ್ವಲ್ಪ ಹಣದಿಂದ ಮತ್ತೆ ಕಡಲೆಯನ್ನು ಕೊಂಡು ಮರುದಿನ ಕಟ್ಟಿಗೆಯವರಿಗೆ ಕೊಟ್ಟು ಅವರಿಂದ ಮತ್ತೆ ಕಟ್ಟಿಗೆಗಳನ್ನು ಪಡೆದುಕೊಂಡೆನು.

೪೫. ಹೀಗೆ ಪ್ರತಿದಿನವೂ ಮಾಡಿ ಕ್ರಮೇಣ ಸಾಕಷ್ಟು ಹಣವು ಸೇರಿದ ಮೇಲೆ ಆ ಕಟ್ಟಿಗೆಯವರು ತಂದ ಸೌದೆಯನ್ನೆಲ್ಲ ನಾನೇ ಮೂರುದಿನಗಳು ಕೊಂಡುಕೊಂಡೆನು.

೪೬. ಅನಂತರ ಅಕಸ್ಮಾತ್ತಾಗಿ ಅತಿವೃಷ್ಟಿಯಿಂದ ಸೌದೆಯು ದುರ್ಲಭವಾಯಿತು. ಆಗ ನೂರಾರು ಪಣಗಳ ಬೆಲೆಗೆ ಆ ಸೌದೆಯನ್ನು ನಾನು ಮಾರಿದೆನು.

೪೭. ಅದರಿಂದ ದೊಡ್ಡ ಅಂಗಡಿಯನ್ನು ಆರಂಭಿಸಿ ನನ್ನ ಚಾತುರ್ಯದಿಂದ ಕೊಂಡುಮಾರುವ ವಾಣಿಜ್ಯವನ್ನು ಮಾಡುತ್ತಾ ಕ್ರಮಶಃ ಈಗ ಶ್ರೀಮಂತನಾಗಿದ್ದೇನೆ

೪೮. ಒಂದು ಚಿನ್ನದ ಇಲಿಯನ್ನು ಮಾಡಿಸಿ ನಾನು ವಿಶಾಖಿಲನಿಗೆ ಅರ್ಪಿಸಿದೆನು. ಅವನೂ ನನಗೆ ತನ್ನ ಮಗಳನ್ನು ಕೊಟ್ಟು ಮದುವೆ ಮಾಡಿದನು.

೪೯. ಆದ್ದರಿಂದಲೇ ನಾನು ಈಗ ಮೂಷಕ ಎಂಬ ಹೆಸರಿನಿಂದ ಪ್ರಸಿದ್ಧನಾಗಿದ್ದೇನೆ. ಹೀಗೆ ಮೊದಲು ನಾನು ನಿರ್ಧನನಾಗಿದ್ದರೂ ಲಕ್ಷ್ಮಿ ನನಗೆ ಸಿಕ್ಕಿದಳು.

೫೦. ಈ ಕಥೆಯನ್ನು ಕೇಳಿ ಅಲ್ಲಿದ್ದ ಇತರ ವ್ಯಾಪಾರಿಗಳು ವಿಸ್ಮಿತರಾದರು. ಗೋಡೆಯೇ ಇಲ್ಲದಿದ್ದಾಗ ಚಿತ್ರವನ್ನು ಬರೆದರೆ ಬುದ್ಧಿ ಏಕೆ ಆಶ್ಚರ್ಯಪಡದೆ ಇದ್ದೀತು ?

---

ತತಃ ಸ್ತೋಕೇನ ಮೂಲ್ಯೇನ ಕ್ರೀತ್ವಾ ತಾಂಶ್ಚಣಕಾಂಸ್ತತಃ ।
ತಥೈವ ಕಾಷ್ಠಿಕೇಭ್ಯೋಽಹಮನ್ಯೇದ್ಯುಃ ಕಾಷ್ಠಮಾಹರಮ್॥ ೪೪
ಏವಂ ಪ್ರತಿದಿನಂ ಕೃತ್ವಾ ಪ್ರಾಪ್ಯ ಮೂಲ್ಯಂ ಕ್ರಮಾನ್ಮಯಾ ।
ಕಾಷ್ಠಿಕೇಭ್ಯೋಽಖಿಲಂ ದಾರು ಕ್ರೀತಂ ತೇಭ್ಯೋ ದಿನತ್ರಯಮ್ ॥ ೪೫
ಅಕಸ್ಮಾದಥ ಸಂಜಾತೇ ಕಾಷ್ಠಚ್ಛೇದೇಽತಿವೃಷ್ಟಿಭಿಃ ।
ಮಯಾ ತದ್ದಾರು ವಿಕ್ರೀತಂ ಪಣಾನಾಂ ಬಹುಭಿಃ ಶತೈಃ ॥ ೪೬
ತೇನೈವ ವಿಪಣಿಂ ಕೃತ್ವಾ ಧನೇನ ನಿಜಕೌಶಲಾತ್ ।
ಕುರ್ವನ್ ವಣಿಜ್ಯಾಂ ಕ್ರಮಶಃ ಸಂಪನ್ನೋಽಸ್ಮಿ ಮಹಾಧನಃ ॥ ೪೭
ಸೌವರ್ಣೋ ಮೂಷಕಃ ಕೃತ್ವಾ ಮಯಾ ತಸ್ಮೈ ಸಮರ್ಪಿತಃ ।
ವಿಶಾಖಿಲಾಯ ಸೋಽಪಿ ಸ್ವಾಂ ಕನ್ಯಾಂ ಮಹ್ಯಮದಾತ್ತತಃ ॥ ೪೮
ಅತ ಏವ ಚ ಲೋಕೇಽಸ್ಮಿನ್ ಪ್ರಸಿದ್ಧೋ ಮೂಷಕಾಖ್ಯಯಾ ।
ಏವಂ ಲಕ್ಷ್ಮೀರಿಯಂ ಪ್ರಾಪ್ತಾ ನಿರ್ಧನೇನ ಸತಾ ಮಯಾ ॥ ೪೯
ತಚ್ಛ್ರುತ್ವಾ ತತ್ರ ತೇಽಭೂವನ್ ವಣಿಜೋಽನ್ಯೇ ಸವಿಸ್ಮಯಾಃ ।
ಧೀರ್ನ ಚಿತ್ರೀಯತೇ ಕಸ್ಮಾದಭಿತ್ತೌ ಚಿತ್ರಕರ್ಮಣಾ ॥ ೫೦

## ಮೂರ್ಖ ಬ್ರಾಹ್ಮಣನ ಕಥೆ

೫೧. ಇನ್ನೊಂದೆಡೆಯಲ್ಲಿ ಒಬ್ಬ ಬ್ರಾಹ್ಮಣನಿಗೆ ಎಂಟು ಚಿನ್ನದ ಮಾಷಗಳು ದಾನವಾಗಿ ದೊರಕಿದ್ದುವು. ಆ ಸಾಮವೇದಿ ಬ್ರಾಹ್ಮಣನಿಗೆ ಒಬ್ಬ ರಸಿಕವಿಟನು ಹೀಗೆ ಹೇಳಿದನು.

೫೨. "ಬ್ರಾಹ್ಮಣಾರ್ಥದಿಂದ ನಿನಗೆ ಹೇಗೂ ಊಟ ಸಿಗುತ್ತದೆ. ಆದ್ದರಿಂದ ಈ ನಿನ್ನ ಹಣದಿಂದ ನಿನ್ನನ್ನು ಜಾಣನಾಗಿಸುವ ಪ್ರಪಂಚಜ್ಞಾನವನ್ನು ಕಲಿತುಕೋ."

೫೩. "ಅದನ್ನು ನನಗೆ ಯಾರು ಕಲಿಸುತ್ತಾರೆ ?" ಎಂದು ಆ ಮುಗ್ಧ ಬ್ರಾಹ್ಮಣನು ಕೇಳಲು "ಇಲ್ಲಿ ಚತುರಿಕಾ ಎಂಬ ವೇಶ್ಯೆ ಇದ್ದಾಳಲ್ಲ , ಅವಳ ಮನೆಗೆ ಹೋಗು" ಎಂದು ವಿಟನು ಹೇಳಿದನು.

೫೪. "ಅಲ್ಲಿ ನಾನೇನು ಮಾಡಬೇಕು" ಎಂದು ಬ್ರಾಹ್ಮಣನು ಕೇಳಿದಾಗ "ಚಿನ್ನವನ್ನು ಕೊಟ್ಟು ಯಾವುದಾದರೊಂದು ಸಾಮವನ್ನು ಹೇಳು" ಎಂದು ವಿಟನು ಹೇಳಿದನು.

೫೫. ಈ ಮಾತನ್ನು ಕೇಳಿ ಆ ಸಾಮಗ ಬ್ರಾಹ್ಮಣನು ದಡದಡನೆ ಚತುರಿಕೆಯ ಮನೆಗೆ ಹೋದನು. ಅವಳಿಂದ ಸ್ವಾಗತವಾದ ಮೇಲೆ ಒಳಗೆ ಪ್ರವೇಶಿಸಿ ಕುಳಿತುಕೊಂಡನು.

೫೬. "ಈ ಹಣವನ್ನು ತೆಗೆದುಕೊಂಡು ನೀನು ನನಗೆ ಪ್ರಪಂಚಜ್ಞಾನವನ್ನು ಕಲಿಸು' ಎಂದು ಹೇಳಿ ಆ ದಕ್ಷಿಣೆಯ ಚಿನ್ನವನ್ನು ಬ್ರಾಹ್ಮಣನು ಅವಳಿಗೆ ಅರ್ಪಿಸಿದನು.

---

ಕ್ವಚಿತ್ ಪ್ರತಿಗ್ರಹಪ್ರಾಪ್ತಹೇಮಮಾಷಾಷ್ಟಕೋ ದ್ವಿಜಃ ।
ಛಂದೋಗಃ ಕಶ್ಚಿದಿತ್ಯುಕ್ತೋ ವಿಟಪ್ರಾಯೇಣ ಕೇನಚಿತ್ ॥ ೫೧
ಬ್ರಾಹ್ಮಣ್ಯಾದ್ ಭೋಜನಂ ತಾವದಸ್ತಿ ತೇ ತತ್ ತ್ವಯಾಮುನಾ ।
ಲೋಕಯಾತ್ರಾ ಸುವರ್ಣೇನ ವೈದಗ್ಧ್ಯಾಯೇಹ ಶಿಕ್ಷ್ಯತಾಮ್ ॥ ೫೨
ಕೋ ಮಾಂ ಶಿಕ್ಷಯತೀತ್ಯುಕ್ತೇ ತೇನ ಮುಗ್ಧೇನ ಸೋಽಬ್ರವೀತ್ ।
ಯೈಷಾ ಚತುರಿಕಾ ನಾಮ ವೇಶ್ಯಾ ತಸ್ಯಾ ಗೃಹಂ ವ್ರಜ ॥ ೫೩
ತತ್ರ ಕಿಂ ಕರವಾಣೀತಿ ದ್ವಿಜೇನೋಕ್ತೋ ವಿಟೋಽಬ್ರವೀತ್ ।
ಸ್ವರ್ಣಂ ದತ್ತ್ವಾ ಪ್ರಯುಂಜೀಥಾ ರಂಜಯನ್ ಸಾಮ ಕಿಂಚನ ॥ ೫೪
ಶ್ರುತ್ವೇತ್ಯಗಚ್ಛಚ್ಛಂದೋಗೋ ದ್ರುತಂ ಚತುರಿಕಾಗೃಹಮ್ ।
ಉಪಾವಿಶತ್ ಪ್ರವಿಶ್ಯಾತ್ರ ಕೃತಪ್ರತ್ಯುದ್ಗತಿಸ್ತಯಾ ॥ ೫೫
ಮಾಮದ್ಯ ಲೋಕಯಾತ್ರಾಂ ತ್ವಂ ಶಿಕ್ಷಯೈತೇನ ಸಾಂಪ್ರತಮ್ ।
ಇತಿ ಜಲ್ಪನ್ ಸ ತತ್ತಸ್ಯೈ ಸ್ವರ್ಣಮರ್ಪಿತವಾನ್ ದ್ವಿಜಃ ॥ ೫೬

೫೭. ಅಲ್ಲಿದ್ದ ಜನರೆಲ್ಲರೂ ನಕ್ಕರು. ಆಗ ಅವನು ಸ್ವಲ್ಪ ಯೋಚಿಸಿ ಕೈಗಳನ್ನು ಹಸುವಿನ ಕಿವಿಗಳಂತೆ ಜೋಡಿಸಿ ಸಾರಣವನ್ನು ಮಾಡಿದನು.

೫೮. ಮಂದಬುದ್ಧಿಯಾದ ಅವನು ತಾರಸ್ವರದಿಂದ ಸಾಮಗಾನವನ್ನು ಮಾಡತೊಡಗಿದನು, ಹಾಸ್ಯವೆಂದು ಅದನ್ನು ನೋಡಲು ಅಲ್ಲಿ ವಿಟಜನರೆಲ್ಲ ಬಂದು ಸೇರಿದರು.

೫೯. "ಇಲ್ಲೊಂದು ನರಿ ಒಳ ಹೊಕ್ಕಿದೆ. ಇಲ್ಲದಿದ್ದರೆ ಈ ಸ್ವರ ಎಲ್ಲಿಂದ ಬರುತ್ತಿದೆ ? ಆದ್ದರಿಂದ ಅವನ ಕುತ್ತಿಗೆಗೆ ಅರ್ಧಚಂದ್ರವನ್ನು ಪ್ರಯೋಗಿಸಿ' ಎಂದು ಅವರು ಹೇಳಿದರು.

೬೦. ಅರ್ಧಚಂದ್ರ ಎಂದರೆ ಬಾಣ ಎಂದು ಭಾವಿಸಿ ತನ್ನ ತಲೆ ಕತ್ತರಿಸಿಹೋಗಬಹುದೆಂಬ ಭಯದಿಂದ 'ಪ್ರಪಂಚಜ್ಞಾನವನ್ನು ಕಲಿತಾಯಿತು' ಎಂದು ಕಿರಿಚುತ್ತಾ ಅವನು ಬೇಗನೆ ಓಡಿದನು.

೬೧. ಆ ಬ್ರಾಹ್ಮಣನನ್ನು ಅಲ್ಲಿಗೆ ಕಳುಹಿಸಿದ್ದವನು ಆಗ ಅವನ ಬಳಿ ಬಂದನು. ಬ್ರಾಹ್ಮಣನು ನಡೆದದ್ದನ್ನು ಹೇಳಿದಾಗ ಅವನಿಂತೆಂದನು.

೬೨. ನಾನು ಸಾಮ ಎಂದು ಹೇಳಿದ್ದು ಸಾಂತ್ವವಾಚಕನು ಎಂಬರ್ಥದಲ್ಲಿ. ಈ ಸಂದರ್ಭದಲ್ಲಿ ವೇದಕ್ಕೇನು ಅವಸರ ? ವೇದಜಡರಾದ ಜನರಲ್ಲಿ ಜಡತೆ ಎಂಬುದು ಜಡ್ಡುಗಟ್ಟಿರುವುದೇನು ?

---

ಪ್ರಹಸತ್ಯಥ ತತ್ರಸ್ಥೇ ಜನೇ ಕಿಂಚಿದ್ ವಿಚಿಂತ್ಯ ಸಃ ।
ಗೋಕರ್ಣಸದೃಶೌ ಕೃತ್ವಾ ಕರಾವಾಬದ್ಧಸಾರಣೌ ॥ ೫೭
ತಾರಸ್ವರಂ ತಥಾ ಸಾಮ ಗಾಯತಿ ಸ್ಮ ಜಡಾಶಯಃ ।
ಯಥಾ ತತ್ರ ಮಿಲಂತಿ ಸ್ಮ ವಿಟಾ ಹಾಸ್ಯದಿದೃಕ್ಷವಃ ॥ ೫೮
ತೇ ಚಾವೋಚನ್ ಶೃಗಾಲೋಽಯಂ ಪ್ರವಿಷ್ಟೋಽತ್ರ ಕುತೋಽನ್ಯಥಾ ।
ತಚ್ಛೀಘ್ರಮರ್ಧಚಂದ್ರೋಽಸ್ಯ ಗಲೇಽಸ್ಮಿನ್ ದೀಯತಾಮಿತಿ ॥ ೫೯
ಅರ್ಧಚಂದ್ರಂ ಶರಂ ಮತ್ವಾ ಶಿರಶ್ಛೇದಭಯಾದ್ ದ್ರುತಮ್ ।
ಶಿಕ್ಷಿತಾ ಲೋಕಯಾತ್ರೇತಿ ಗರ್ಜನ್ ಸ ನಿರಗಾತ್ ತತಃ ॥ ೬೦
ತತ್ಪಾಶಂ ತತೋಽಗಚ್ಛದ್ ಯೇನಾಸೌ ಪ್ರೇಷಿತೋಽಭವತ್ ।
ವೃತ್ತಾಂತಂ ಚಾವದತ್ತಸ್ಮೈ ಸೋಽಪಿ ಚೈನಮಭಾಷತ ॥ ೬೧
ಸಾಮ ಸಾಂತ್ವಂ ಮಯೋಕ್ತಂ ತೇ ವೇದಸ್ಯಾವಸರೋಽತ್ರ ಕಃ ? ।
ಕಿಂ ವಾ ಧಾರಾಧಿರೂಢಂ ಹಿ ಜಾಡ್ಯಂ ವೇದಜಡೇ ಜನೇ ॥ ೬೨

೬೩. ಹೀಗೆ ನಕ್ಕು ಅವನು ಆ ವೇಶ್ಯೆಯಬಳಿ ಹೋಗಿ ಹೇಳಿದನು. "ಎರಡು ಕಾಲಿನ ಈ ಪಶುವಿನ ಆ ಚಿನ್ನದ ಚೂರುಗಳನ್ನು ಕೊಟ್ಟುಬಿಡು."

೬೪. ಅವಳು ನಗುತ್ತಾ ಹಿಂದಿರುಗಿಸಿದ ಚಿನ್ನವನ್ನು ಆ ಬ್ರಾಹ್ಮಣನು ಪಡೆದು ತಾನು ಮತ್ತೆ ಹುಟ್ಟಿಬಂದೆ ಎಂದುಕೊಳ್ಳುತ್ತಾ ಮನೆಗೆ ಹೋದನು.

೬೫. ಈ ಪ್ರಕಾರವಾದ ಆಶ್ಚರ್ಯಗಳನ್ನು ಹೆಜ್ಜೆ ಹೆಜ್ಜೆಯಲ್ಲೂ ನೋಡುತ್ತಾ ನಾನು ಮಹೇಂದ್ರನ ಮನೆಯಂತಿದ್ದ ರಾಜಭವನವನ್ನು ತಲುಪಿದೆನು.

೬೬ ನನ್ನ ಶಿಷ್ಯರು ನನ್ನ ಆಗಮನವನ್ನು ಘೋಷಿಸುತ್ತಿದ್ದಂತೆ ನಾನು ಒಳಗೆ ಪ್ರವೇಶಿಸಿ ಆಸ್ಥಾನದಲ್ಲಿ ಕುಳಿತಿದ್ದ ಸಾತವಾಹನಮಹಾರಾಜನನ್ನು ನೋಡಿದೆನು.

೬೭ ದೇವತೆಗಳಿಂದ ಸುತ್ತುವರಿಯಲ್ಪಟ್ಟ ಇಂದ್ರನಂತೆ ಶರ್ವವರ್ಮಪ್ರಭೃತಿಗಳಾದ ಮಂತ್ರಿಗಳಿಂದ ಪರಿವಾರಿತನಾಗಿ ಆ ರಾಜನು ರತ್ನ ಸಿಂಹಾಸನದಲ್ಲಿ ಕುಳಿತಿದ್ದನು.

೬೮. ಸ್ವಸ್ತಿ ಎಂದು ಹೇಳಿ ಆಸನದಲ್ಲಿ ಕುಳಿತ ನನಗೆ ರಾಜನು ಆದರವನ್ನು ತೋರಿಸಿದನು. ಶರ್ವವರ್ಮಾದಿಗಳು ನನ್ನನ್ನು ಸ್ತುತಿಸಿದರು.

೬೯. "ಪ್ರಭು, ಇವನು ಸಕಲವಿದ್ಯೆಗಳಲ್ಲಿ ವಿಶಾರದನಾಗಿ ಜಗತ್ತಿನಲ್ಲಿ ಪ್ರಸಿದ್ಧನಾದವನು, ಇವನ ಹೆಸರು ಗುಣಾಢ್ಯನೆಂದು. ಈತನ ಹೆಸರು ಯಥಾರ್ಥವಾಗಿದೆ.'

---

ಏವಂ ವಿಹಸ್ಯ ಗತ್ವಾ ಚ ತೇನೋಕ್ತಾ ಸಾ ವಿಲಾಸಿನೀ ।
ದ್ವಿಪದಸ್ಯ ಪಶೋರಸ್ಯ ತತ್ ಸುವರ್ಣತೃಣಂ ತ್ಯಜ ॥ ೬೩
ಹಸಂತ್ಯಾ ಚ ತಯಾ ತ್ಯಕ್ತಂ ಸುವರ್ಣಂ ಪ್ರಾಪ್ಯ ಸ ದ್ವಿಜಃ ।
ಪುನರ್ಜಾತಮಿವಾತ್ಮಾನಂ ಮನ್ವಾನೋ ಗೃಹಮಾಗತಃ ॥ ೬೪
ಏವಂಪ್ರಾಯಾಣ್ಯಹಂ ಪಶ್ಯನ್ ಕೌತುಕಾನಿ ಪದೇ ಪದೇ ।
ಪ್ರಾಪ್ತವಾನ್ ರಾಜಭವನಂ ಮಹೇಂದ್ರಸದನೋಪಮಮ್ ॥ ೬೫
ತತಶ್ಚಾಂತಃ ಪ್ರವಿಷ್ಟೋಽಹಂ ಶಿಷ್ಯೈರಗ್ರೇ ನಿವೇದಿತಃ ।
ಆಸ್ಥಾನಸ್ಥಿತಮದ್ರಾಕ್ಷಂ ರಾಜಾನಂ ಸಾತವಾಹನಮ್ ॥ ೬೬
ಶರ್ವವರ್ಮಪ್ರಭೃತಿಭಿಃ ಮಂತ್ರಿಭಿಃ ಪರಿವಾರಿತಮ್ ।
ರತ್ನಸಿಂಹಾಸನಾಸೀನಮಮರೈರಿವ ವಾಸವಮ್ ॥ ೬೭
ವಿಹಿತಸ್ವಸ್ತಿಕಾರಂ ಮಾಮುಪವಿಷ್ಟಮಥಾಸನೇ ।
ರಾಜ್ಞಾ ಕೃತಾದರಂ ಚೈವ ಶರ್ವವರ್ಮಾದಯೋಽಸ್ತುವನ್ ॥ ೬೮
ಅಯಂ ದೇವ ಭುವಿ ಖ್ಯಾತಃ ಸರ್ವವಿದ್ಯಾವಿಶಾರದಃ ।
ಗುಣಾಢ್ಯ ಇತಿ ನಾಮಾಸ್ಯ ಯಥಾರ್ಥಮತ ಏವ ಹಿ ॥ ೬೯

೨೦. ಹೀಗೆ ಅವರು ಮಾಡಿದ ಸ್ತುತಿಯನ್ನು ಕೇಳಿ ಸಾತವಾಹನರಾಜನು ಸಂತೋಷಪಟ್ಟು ಕೂಡಲೇ ನನ್ನನ್ನು ಗೌರವಿಸಿ ಮಂತ್ರಿಪದವಿಯಲ್ಲಿ ನಿಯೋಜಿಸಿದರು.

೨೧. ಅನಂತರ ನಾನು ರಾಜಕಾರ್ಯಗಳನ್ನು ನೋಡಿಕೊಳ್ಳುತ್ತಾ ಶಿಷ್ಯರಿಗೆ ಅಧ್ಯಾಪನವನ್ನು ಮಾಡುತ್ತಾ ಸುಖವಾಗಿ ಅಲ್ಲಿದ್ದೆನು. ಅಲ್ಲಿ ಮದುವೆಯನ್ನು ಮಾಡಿಕೊಂಡೆನು.

೨೨. ಒಮ್ಮೆ ಕುತೂಹಲದಿಂದ ಗೋದಾವರಿಯ ದಡದಲ್ಲಿ ಸ್ವೇಚ್ಛೆಯಿಂದ ಸಂಚರಿಸುತ್ತಾ ದೇವೀಕೃತಿ ಎಂದು ಪ್ರಖ್ಯಾತವಾಗಿದ್ದ ಉದ್ಯಾನವನವನ್ನು ನೋಡಿದೆನು.

೨೩. ಭೂಲೋಕದಲ್ಲಿರುವ ನಂದನವೋ ಎಂಬಂತೆ ಅತಿರಮಣೀಯವಾಗಿದ್ದ ಅದನ್ನು ನೋಡಿ 'ಈ ವನವು ಇಲ್ಲಿ ಬಂದುದು ಹೇಗೆ ?' ಎಂದು ಉದ್ಯಾನಪಾಲಕನನ್ನು ಕೇಳಿದೆನು.

## ದೇವೀಕೃತಿ ಎಂಬ ಉದ್ಯಾನದ ಕಥೆ

೨೪. ಅವನಿಂತೆಂದನು ""ಸ್ವಾಮಿ, ಹಿರಿಯರಿಂದ ನಾನು ಕೇಳಿದುದು ಹೀಗೆ. ಬಹುಹಿಂದೆ ಮೌನಿಯೂ ನಿರಾಹಾರನೂ ಆದ ಬ್ರಾಹ್ಮಣನೊಬ್ಬನು ಇಲ್ಲಿಗೆ ಬಂದನಂತೆ

೨೫. ಅವನು ಈ ದಿವ್ಯವಾದ ಉದ್ಯಾನವನ್ನೂ ದೇವಾಲಯವನ್ನೂ ನಿರ್ಮಿಸಿದನಂತೆ. ಆಮೇಲೆ ಇಲ್ಲಿ ಬ್ರಾಹ್ಮಣರೆಲ್ಲರೂ ಕುತೂಹಲದಿಂದ ಬಂದು ಸೇರಿದರು.

---

ಇತ್ಯಾದಿ ತತ್ಸ್ತುತಿಂ ಶ್ರುತ್ವಾ ಮಂತ್ರಿಭಿಃ ಸಾತವಾಹನಃ ।
ಪ್ರೀತಃ ಸಪದಿ ಸತ್ಕೃತ್ಯ ಮಂತ್ರಿತ್ವೇ ಮಾಂ ನ್ಯಯೋಜಯತ್ ॥ ೨೦
ಅಥಾಹಂ ರಾಜಕಾರ್ಯಾಣಿ ಚಿಂತಯನ್ನವಸಂ ಸುಖಮ್ ।
ಶಿಷ್ಯಾನಧ್ಯಾಪಯಂಸ್ತತ್ರ ಕೃತದಾರಪರಿಗ್ರಹಃ ॥ ೨೧
ಕದಾಚಿತ್ಕೌತುಕಾದ್ ಭ್ರಾಮ್ಯನ್ ಸ್ವೈರಂ ಗೋದಾವರೀತಟೇ ।
ದೇವೀಕೃತಿರಿತಿ ಖ್ಯಾತಮುದ್ಯಾನಂ ದೃಷ್ಟವಾನಹಮ್ ॥ ೨೨
ತಚ್ಚಾತಿರಮ್ಯಮಾಲೋಕ್ಯ ಕ್ಷಿತಿಸ್ಥಮಿವ ನಂದನಮ್ ।
ಉದ್ಯಾನಪಾಲಃ ಪೃಷ್ಟೋಽಭೂನ್ಮಯಾ ತತ್ರ ತದಾಗಮಮ್ ॥ ೨೩
ಸ ಚ ಮಾಮಬ್ರವೀತ್ ಸ್ವಾಮಿನ್ ವೃದ್ಧೇಭ್ಯಃ ಶ್ರೂಯತೇ ಯಥಾ ।
ಪೂರ್ವಂ ಮೌನೀ ನಿರಾಹಾರೋ ದ್ವಿಜಃ ಕಶ್ಚಿತ್ ಸಮಾಯಯೌ ॥ ೨೪
ಸ ದಿವ್ಯಮಿದಮುದ್ಯಾನಂ ಸದೇವಭವನಂ ವ್ಯಧಾತ್ ।
ತತೋಽತ್ರ ಬ್ರಾಹ್ಮಣಾಃ ಸರ್ವೇ ಮಿಲಂತಿ ಸ್ಮ ಸಕೌತುಕಾಃ ॥ ೨೫

೭೬. ಅವರೆಲ್ಲರೂ ಒತ್ತಾಯಪೂರ್ವಕವಾಗಿ ಕೇಳಿದಾಗ ಆ ಬ್ರಾಹ್ಮಣನು ತನ್ನ ವೃತ್ತಾಂತವನ್ನು ಹೇಳಿದನು. "ನರ್ಮದಾನದಿಯ ತೀರದಲ್ಲಿ ಭರುಕಚ್ಛವೆಂಬ ದೇಶವಿದೆ.

೭೭. ಆ ದೇಶದಲ್ಲಿ ಹುಟ್ಟಿದ ಬ್ರಾಹ್ಮಣನು ನಾನು. ದರಿದ್ರನೂ ಸೋಮಾರಿಯೂ ಆಗಿದ್ದ ನನಗೆ ಯಾರೂ ಭಿಕ್ಷೆಯನ್ನೂ ಕೊಡುತ್ತಿರಲಿಲ್ಲ.

೭೮. ನಾನು ಬೇಸರದಿಂದ ಮನೆಯನ್ನು ಬಿಟ್ಟು, ಬದುಕಿನಲ್ಲಿ ವಿರಕ್ತನಾಗಿ, ತೀರ್ಥಗಳಲ್ಲಿ ಅಲೆದಾಡುತ್ತಾ ವಿಂಧ್ಯವಾಸಿನಿಯನ್ನು ನೋಡಲು ಹೋದೆನು.

೭೯–೮೦. ಆ ದೇವಿಯನ್ನು ನೋಡಿ ನಾನು ಹೀಗೆ ಯೋಚಿಸಿದೆನು. "ಈ ಜಗತ್ತು ಪ್ರಾಣಿಬಲಿಯನ್ನು ಕೊಟ್ಟು ವರದಾನಶೀಲಳಾದ ಈ ದೇವಿಯನ್ನು ಒಲಿಸಿಕೊಳ್ಳುತ್ತದೆ. ಮೂರ್ಖಪಶುವಿನಂತಿರುವ ನನ್ನನ್ನೇ ನಾನು ಈ ದೇವಿಗಾಗಿ ಕೊಲ್ಲುತ್ತೇನೆ." ಹೀಗೆ ನಿಶ್ಚಯಿಸಿ ನನ್ನ ತಲೆಯನ್ನು ಕತ್ತರಿಸಿಕೊಳ್ಳಲು ನಾನು ಶಸ್ತ್ರವನ್ನೆತ್ತಿಕೊಂಡೆನು.

೮೧. ಆ ಕ್ಷಣದಲ್ಲೇ ಪ್ರಸನ್ನಳಾದ ದೇವಿಯು ಹೀಗೆ ಹೇಳಿದಳು. "ಮಗನೇ, ನೀನು ಸಿದ್ಧನಾದೆ. ನಿನ್ನನ್ನು ನೀನೇ ಕೊಂದುಕೊಳ್ಳಬೇಡ. ನನ್ನ ಬಳಿಯಲ್ಲೇ ಇರು."

೮೨. ಹೀಗೆ ದೇವಿಯ ವರವನ್ನು ಪಡೆದು ದೇವತ್ವವನ್ನು ಪಡೆದುಕೊಂಡೆನು. ಆಗಿನಿಂದ ಹಸಿವೆಯೂ ಬಾಯಾರಿಕೆಯೂ ನನ್ನಿಂದ ದೂರವಾದುವು.

---

ನಿರ್ಬಂಧಾತ್ ತೈಃ ಸ ಪೃಷ್ಟಃ ಸ್ವಂ ವೃತ್ತಾಂತಮವದದ್ ದ್ವಿಜಃ ।
ಅಸ್ತೀಹ ಭರುಕಚ್ಛಾಖ್ಯೋ ವಿಷಯೋ ನರ್ಮದಾತಟೇ ॥ ೭೬

ತಸ್ಮಿನ್ನಹಂ ಸಮುತ್ಪನ್ನೋ ವಿಪ್ರಸ್ತಸ್ಯ ಚ ಮೇ ಪುರಾ ।
ನ ಭಿಕ್ಷಾಮಪ್ಯದಾತ್ ಕಶ್ಚಿದ್ ದರಿದ್ರಸ್ಯಾಲಸಸ್ಯ ಚ ॥ ೭೭

ಅಥ ಖೇದಾದ್ ಗೃಹಂ ತ್ಯಕ್ತ್ವಾ ವಿರಕ್ತೋ ಜೀವಿತಂ ಪ್ರತಿ ।
ಭ್ರಾಂತ್ವಾ ತೀರ್ಥಾನ್ಯಹಂ ದ್ರಷ್ಟುಮಗಚ್ಛಂ ವಿಂಧ್ಯವಾಸಿನೀಮ್ ॥ ೭೮

ದೃಷ್ಟ್ವಾ ತತಶ್ಚ ತಾಂ ದೇವೀಮಿತಿ ಸಂಚಿಂತಿತಂ ಮಯಾ ।
ಲೋಕಃ ಪಶೂಪಹಾರೇಣ ಪ್ರೀಣಾತಿ ವರದಾಮಿಮಾಮ್ ॥ ೭೯

ಅಹಂ ತ್ವಾತ್ಮಾನಮೇವೇಹ ಹನ್ಮಿ ಮೂರ್ಖಮಿಮಂ ಪಶುಮ್ ।
ನಿಶ್ಚಿತ್ಯೇತಿ ಶಿರಶ್ಛೇತ್ತುಂ ಮಯಾ ಶಸ್ತ್ರಮಗೃಹ್ಯತ ॥ ೮೦

ತತ್ಕ್ಷಣಂ ಸಾ ಪ್ರಸನ್ನಾ ಮಾಂ ದೇವೀ ಸ್ವಯಮಭಾಷತ ।
ಪುತ್ರ ಸಿದ್ಧೋಽಸಿ ಮಾತ್ಮಾನಂ ವಧೀಸ್ತಿಷ್ಠ ಮಮಾಂತಿಕೇ ॥ ೮೧

ಇತಿ ದೇವೀವರಂ ಲಬ್ಧ್ವಾ ಸಂಪ್ರಾಪ್ತಾ ದಿವ್ಯತಾ ಮಯಾ ।
ತತಃ ಪ್ರಭೃತಿ ನಷ್ಟಾ ಮೇ ಬುಭುಕ್ಷಾ ಚ ತೃಷಾ ಸಹ ॥ ೮೨

೮೩. ಅಲ್ಲಿಯೇ ಇದ್ದ ನನಗೆ ಒಮ್ಮೆ ದೇವಿಯು, "ಪ್ರತಿಷ್ಠಾನಕ್ಕೆ ಹೋಗಿ ಅಲ್ಲಿ ಒಳ್ಳೆಯ ಉದ್ಯಾನವನ್ನು ರಚಿಸು' ಎಂದು ತಾನೇ ಆದೇಶಿಸಿದಳು.

೮೪. ಹೀಗೆ ಹೇಳಿ ವಿಂಧ್ಯವಾಸಿನಿಯೇ ನನಗೆ ದಿವ್ಯವಾದ ಬೀಜವನ್ನು ನೀಡಿದಳು. ಆಮೇಲೆ ನಾನಿಲ್ಲಿ ಬಂದು ಆ ದೇವಿಯ ಪ್ರಭಾವದಿಂದ ಚಂದದ ಈ ತೋಟವನ್ನು ನಿರ್ಮಿಸಿದೆನು.

೮೫. ನೀವು ಈ ಉದ್ಯಾನವನ್ನು ರಕ್ಷಿಸಬೇಕು" ಎಂದು ಹೇಳಿ ಆ ಬ್ರಾಹ್ಮಣನು ಮಾಯವಾದನು. ಪ್ರಭು, ಹೀಗೆ ಈ ಉದ್ಯಾನವು ಹಿಂದೆ ದೇವಿಯಿಂದ ನಿರ್ಮಿತವಾದದ್ದು."

೮೬. ಉದ್ಯಾನಪಾಲಕನಿಂದ ಆ ದೇಶಕ್ಕೆ ದೇವಿಯ ಅನುಗ್ರಹವಾದುದನ್ನು ಕೇಳಿ ಬೆರಗಾದ ನಾನು ಮನೆಗೆ ಹೋದೆನು.

೮೭. ಹೀಗೆ ಗುಣಾಢ್ಯನು ಹೇಳಿದಾಗ ಮತ್ತೆ ಕಾಣಭೂತಿಯು "ಸ್ವಾಮಿ, ಈ ರಾಜನಿಗೆ ಸಾತವಾಹನ ಎಂಬ ಹೆಸರೇಕೆ ಬಂತು?" ಎಂದು ಕೇಳಿದನು.

## ಸಾತವಾಹನನ ಕಥೆ

೮೮. ಆಗ ಗುಣಾಢ್ಯನು ಹೇಳಿದನು. ನಿನಗೆ ಅದನ್ನೂ ಹೇಳುವೆನು, ಕೇಳು. ದೀಪಕರ್ಣಿ ಎಂದು ಪ್ರಸಿದ್ಧನಾದ ಪರಾಕ್ರಮಶಾಲಿಯಾದ ರಾಜನೊಬ್ಬನಿದ್ದನು.

---

ಕದಾಚಿದಥ ದೇವೀ ಮಾಂ ತತ್ರಸ್ಥಂ ಸ್ವಯಮಾದಿಶತ್ ।
ಗತ್ವಾ ಪುತ್ರ ಪ್ರತಿಷ್ಠಾನೇ ರಚಯೋದ್ಯಾನಮುತ್ತಮಮ್ ॥ ೮೩
ಇತ್ಯುಕ್ತ್ವಾ ಸೈವ ಮೇ ಬೀಜಂ ದಿವ್ಯಂ ಪ್ರಾದಾತ್ತತೋ ಮಯಾ ।
ಇಹಾಗತ್ಯ ಕೃತಂ ಕಾಂತಮುದ್ಯಾನಂ ತತ್ಪ್ರಭಾವತಃ ॥ ೮೪
ಪಾಲ್ಯಮೇತಚ್ಚ ಯುಷ್ಮಾಕಮಿತ್ಯುಕ್ತ್ವಾ ಸ ತಿರೋದಧೇ ।
ಇತಿ ನಿರ್ಮಿತಮುದ್ಯಾನಮಿದಂ ದೇವ್ಯಾ ಪುರಾ ಪ್ರಭೋ ॥ ೮೫
ಉದ್ಯಾನಪಾಲಾದಿತ್ಯೇವಂ ತದ್ದೇಶೇ ದೇವ್ಯನುಗ್ರಹಮ್ ।
ಆಕರ್ಣ್ಯ ವಿಸ್ಮಯಾವಿಷ್ಟೋ ಗೃಹಾಯ ಗತವಾನಹಮ್ ॥ ೮೬
ಏವಮುಕ್ತೇ ಗುಣಾಢ್ಯೇನ ಕಾಣಭೂತಿರಭಾಷತ ।
ಸಾತವಾಹನ ಇತ್ಯಸ್ಯ ಕಸ್ಮಾನ್ನಾಮಾಭವತ್ ಪ್ರಭೋ ॥ ೮೭
ತತೋಽಬ್ರವೀದ್ ಗುಣಾಢ್ಯೋಽಪಿ ಶೃಣ್ವೇತತ್ ಕಥಯಾಮಿ ತೇ ।
ದೀಪಕರ್ಣಿರಿತಿ ಖ್ಯಾತೋ ರಾಜಾಭೂತ್ ಪ್ರಾಜ್ಯವಿಕ್ರಮಃ ॥ ೮೮

೮೯. ಶಕ್ತಿಮತೀ ಎಂಬ ಅವನ ಹೆಂಡತಿಯು ಅವನಿಗೆ ಪ್ರಾಣಕ್ಕಿಂತಲೂ ಹೆಚ್ಚು ಇಷ್ಟವಾಗಿದ್ದಳು. ವಿಹಾರಾನಂತರ ಉದ್ಯಾನದಲ್ಲಿ ಮಲಗಿದ್ದ ಅವಳನ್ನು ಒಮ್ಮೆ ಹಾವು ಕಚ್ಚಿತು.

೯೦. ಅದರಿಂದ ಆಕೆ ಸತ್ತುಹೋದಮೇಲೆ ಅವಳಲ್ಲೇ ಮನಸ್ಸನ್ನಿಟ್ಟಿದ್ದ ರಾಜನು ತನಗೆ ಮಕ್ಕಳಿಲ್ಲದಿದ್ದರೂ ಬ್ರಹ್ಮಚರ್ಯವ್ರತವನ್ನು ಹಿಡಿದನು.

೯೧. ರಾಜ್ಯಕ್ಕೆ ಉತ್ತರಾಧಿಕಾರಿಯಾಗಲು ಅರ್ಹನಾದ ಮಗನಿಲ್ಲವೆಂದು ದುಃಖಿತನಾಗಿದ್ದ ರಾಜನಿಗೆ ಭಗವಾನ್ ಶಂಕರನು ಸ್ವಪ್ನದಲ್ಲಿ ಬಂದು ಹೀಗೆ ಆದೇಶಿಸಿದನು.

೯೨. "ಅಡವಿಯಲ್ಲಿ ನೀನು ಅಲೆಯುತ್ತಿರುವಾಗ ಸಿಂಹವನ್ನೇರಿದ ಬಾಲಕನನ್ನು ಕಾಣುವೆ. ಅವನನ್ನು ಕರೆದುಕೊಂಡು ಮನೆಗೆ ಹೋಗು. ಅವನೇ ನಿನ್ನ ಮಗನಾಗುವನು."

೯೩. ಎಚ್ಚರವಾದ ಮೇಲೆ ಆ ಕನಸನ್ನು ನೆನಸಿಕೊಂಡು ರಾಜನು ಸಂತೋಷಪಟ್ಟನು. ಆಮೇಲೆ ಒಮ್ಮೆ ಬೇಟೆಗಾಗಿ ಅವನು ದೂರದ ಕಾಡಿಗೆ ಹೋದನು.

೯೪. ಅಲ್ಲಿ ಆ ರಾಜನು ಮಧ್ಯಾಹ್ನದ ವೇಳೆಯಲ್ಲಿ ಸಿಂಹದ ಮೇಲೆ ಕುಳಿತಿದ್ದ, ಸೂರ್ಯನಂತೆ ಹೊಳೆಯುತ್ತಿದ್ದ ಬಾಲಕನೊಬ್ಬನನ್ನು ಪದ್ಮಸರಸ್ಸಿನ ಬಳಿ ಕಂಡನು.

೯೫. ಹುಡುಗನನ್ನು ಕೆಳಗೆ ಇಳಿಸಿ ಸಿಂಹವು ನೀರನ್ನು ಕುಡಿಯುತ್ತಿದ್ದಾಗ ಕನಸನ್ನು ನೆನಪಿಸಿಕೊಂಡ ದೊರೆಯು ಆ ಸಿಂಹವನ್ನು ಒಂದು ಬಾಣದಿಂದ ಹೊಡೆದನು.

---

ತಸ್ಯ ಶಕ್ತಿಮತೀ ನಾಮ ಭಾರ್ಯಾ ಪ್ರಾಣಾಧಿಕಾಭವತ್ ।
ರತಾಂತಸುಪ್ತಾಮುದ್ಯಾನೇ ಸರ್ಪಸ್ತಾಂ ಜಾತು ದಷ್ಟವಾನ್ ॥ ೮೯
ಗತಾಯಾಮಥ ಪಂಚತ್ವಂ ತಸ್ಯಾಂ ತದ್ಗತಮಾನಸಃ ।
ಅಪುತ್ರೋಽಪಿ ಸ ಜಗ್ರಾಹ ಬ್ರಹ್ಮಚರ್ಯವ್ರತಂ ನೃಪಃ ॥ ೯೦
ತತಃ ಕದಾಚಿದ್ರಾಜ್ಯಾರ್ಹಪುತ್ರಾಸದ್ಭಾವದುಃಖಿತಮ್ ।
ಇತ್ಯಾದಿದೇಶ ತಂ ಸ್ವಪ್ನೇ ಭಗವಾನಿಂದುಶೇಖರಃ ॥ ೯೧
ಅಟವ್ಯಾಂ ದ್ರಕ್ಷ್ಯಸಿ ಭ್ರಾಮ್ಯನ್ ಸಿಂಹಾರೂಢಂ ಕುಮಾರಕಮ್ ।
ತಂ ಗೃಹೀತ್ವಾ ಗೃಹಂ ಗಚ್ಛೇಃ ಸ ತೇ ಪುತ್ರೋ ಭವಿಷ್ಯತಿ ॥ ೯೨
ಅಥ ಪ್ರಬುದ್ಧಸ್ತಂ ಸ್ವಪ್ನಂ ಸ್ಮರನ್ ರಾಜಾ ಜಹರ್ಷ ಸಃ ।
ಕದಾಚಿಚ್ಚ ಯಯೌ ದೂರಾಮಟವೀಂ ಮೃಗಯಾರಸಾತ್ ॥ ೯೩
ದದರ್ಶ ತತ್ರ ಮಧ್ಯಾಹ್ನೇ ಸಿಂಹಾರೂಢಂ ಸ ಭೂಪತಿಃ ।
ಬಾಲಕಂ ಪದ್ಮಸರಸಸ್ತೀರೇ ತಪನತೇಜಸಮ್ ॥ ೯೪
ಅಥ ರಾಜಾ ಸ್ಮರನ್ ಸ್ವಪ್ನಮವತಾರಿತಬಾಲಕಮ್ ।
ಜಲಾಭಿಲಾಷಿಣಂ ಸಿಂಹಂ ಜಘಾನೈಕಶರೇಣ ತಮ್ ॥ ೯೫

೯೭. ಆ ಸಿಂಹವು ಕೂಡಲೇ ತನ್ನ ಶರೀರವನ್ನು ತ್ಯಜಿಸಿ ಮನುಷ್ಯನ ಆಕೃತಿಯನ್ನು ಹೊಂದಿತು. "ಅಯ್ಯೋ, ಇದೇನಿದು ?' ಎಂದು ರಾಜನು ಕೇಳಲು ಆ ಆಕೃತಿಯು ಹೀಗೆ ಹೇಳಿತು.

೯೭. ""ದೊರೆಯೇ, ಕುಬೇರನ ಮಿತ್ರನಾದ ನಾನು ಸಾತನೆಂಬ ಯಕ್ಷನು. ಹಿಂದೆ ನಾನು ಗಂಗೆಯಲ್ಲಿ ಮೀಯುತ್ತಿದ್ದ ಒಬ್ಬ ಋಷಿಕನ್ಯೆಯನ್ನು ನೋಡಿದೆನು.

೯೮. ಅವಳೂ ನನ್ನನ್ನು ನೋಡಿ ಕಾಮನ ಪ್ರಭಾವಕ್ಕೆ ಈಡಾದಳು, ನಾನು ಕೂಡ. ಆಮೇಲೆ ನಾನು ಅವಳನ್ನು ಗಾಂಧರ್ವವಿವಾಹದಿಂದ ಪತ್ನಿಯಾಗಿ ಮಾಡಿಕೊಂಡೆನು.

೯೯. ಅವಳ ಬಂಧುಗಳಿಗೆ ವಿಷಯವು ತಿಳಿದಾಗ ಅವರು ಕೋಪದಿಂದ ನನಗೂ ಅವಳಿಗೂ "ಪಾಪಿಗಳೂ ಸ್ವೇಚ್ಛಾಚಾರಿಗಳೂ ಆದ ನೀವಿಬ್ಬರೂ ಸಿಂಹಗಳಾಗಿ' ಎಂದು ಶಾಪವನ್ನಿತ್ತರು.

೧೦೦. ಅವಳಿಗೆ ಮಗನ ಜನ್ಮದ ವರೆಗೂ, ನನಗೆ ನಿನ್ನ ಬಾಣದ ಹೊಡೆತ ಬೀಳುವವರೆಗೂ ಶಾಪವಿದ್ದು ಆಮೇಲೆ ಕೊನೆಯಾಗುವುದು ಎಂದು ಋಷಿಗಳು ಅವಧಿಯನ್ನು ವಿಧಿಸಿದರು.

೧೦೧. ಅದರಂತೆ ನಾವು ಸಿಂಹದಂಪತಿಗಳಾದೆವು. ನನ್ನ ಪತ್ನಿ ಕಾಲಾನುಗುಣವಾಗಿ ಗರ್ಭಿಣಿಯಾದಳು. ಮಗನು ಹುಟ್ಟುತ್ತಲೇ ಅವಳು ಸತ್ತುಹೋದಳು.

---

ಸ ಸಿಂಹಸ್ತದ್ವಪುಸ್ತ್ಯಕ್ತ್ವಾ ಸದ್ಯೋऽಭೂತ್ ಪುರುಷಾಕೃತಿಃ ।
ಕಷ್ಟಂ ಕಿಮೇತದ್ ಬ್ರೂಹೀತಿ ರಾಜ್ಞಾ ಪೃಷ್ಟೋ ಜಗಾದ ಚ ॥ ೯೬

ಧನದಸ್ಯ ಸಖಾ ಯಕ್ಷಃ ಸಾತೋ ನಾಮಾಸ್ಮಿ ಭೂಪತೇ ।
ಸೋಽಹಂ ಸ್ನಾಂತೀಮಪಶ್ಯಂ ಪ್ರಾಗ್ಗಂಗಾಯಾಮೃಷಿಕನ್ಯಕಾಮ್ ॥ ೯೭

ಸಾಪಿ ಮಾಂ ವೀಕ್ಷ್ಯ ಸಂಜಾತಮನ್ಮಥಾಭೂದಹಂ ತಥಾ ।
ಗಾಂಧರ್ವೇಣ ವಿವಾಹೇನ ತತೋ ಭಾರ್ಯಾ ಕೃತಾ ಮಯಾ ॥ ೯೮

ತಚ್ಚ ತದ್‌ಬಾಂಧವಾ ಬುದ್ಧ್ವಾ ತಾಂ ಚ ಮಾಂ ಚಾಶಪನ್ ಕ್ರುಧಾ ।
ಸಿಂಹೌ ಭವಿಷ್ಯತಃ ಪಾಪೌ ಸ್ವೇಚ್ಛಾಚಾರೌ ಯುವಾಮಿತಿ ॥ ೯೯

ಪುತ್ರಜನ್ಮಾವಧಿಂ ತಸ್ಯಾಃ ಶಾಪಾಂತಂ ಮುನಯೋ ವ್ಯಧುಃ ।
ಮಮ ತು ತ್ವಚ್ಛರಾಘಾತಪರ್ಯಂತಂ ತದನಂತರಮ್ ॥ ೧೦೦

ಅಥಾವಾಂ ಸಿಂಹಮಿಥುನಂ ಸಂಜಾತೌ ಸಾಪಿ ಕಾಲತಃ ।
ಗರ್ಭಿಣ್ಯಭೂತ್ತತೋ ಜಾತೇ ದಾರಕೇಽಸ್ಮಿನ್ ವ್ಯಪದ್ಯತ ॥ ೧೦೧

೧೦೨. ಬೇರೆ ಹೆಣ್ಣುಸಿಂಹಗಳ ಹಾಲಿನಿಂದ ಇವನನ್ನು ನಾನು ಬೆಳೆಸಿದೆನು. ಇಂದು ನೀನು ಬಾಣದಿಂದ ಹೊಡೆದುದರಿಂದ ನಾನೂ ಶಾಪಮುಕ್ತನಾಗಿದ್ದೇನೆ.

೧೦೩. ಆದ್ದರಿಂದ ಮಹಾಬಲಶಾಲಿಯಾದ ಇವನನ್ನು ನಿನಗೆ ಕೊಡುತ್ತಿರುವೆನು, ಮಗನೆಂದು ಇವನನ್ನು ಸ್ವೀಕರಿಸು. ಈ ವಿಷಯವನ್ನು ಋಷಿಗಳೇ ಹಿಂದೆ ಆದೇಶಿಸಿದ್ದಾರೆ."

೧೦೪. ಇಷ್ಟನ್ನು ಹೇಳಿ ಸಾತನೆಂಬ ಹೆಸರಿನ ಯಕ್ಷನು ಅದೃಶ್ಯನಾದನು. ರಾಜನು ಆ ಬಾಲಕನನ್ನು ಕರೆದುಕೊಂಡು ಮನೆಗೆ ಬಂದನು.

೧೦೫. ಸಾತನ ಮೇಲೆ ಸವಾರಿಮಾಡಿದವನು ಎಂಬ ಕಾರಣದಿಂದ ರಾಜನು ಅವನಿಗೆ ಸಾತವಾಹನ ಎಂಬ ಹೆಸರನ್ನಿಟ್ಟನು ಮತ್ತು ಕಾಲವು ಬಂದಾಗ ಅವನನ್ನೇ ರಾಜ್ಯಕ್ಕೆ ಉತ್ತರಾಧಿಕಾರಿಯನ್ನಾಗಿ ಮಾಡಿದನು.

೧೦೬. ಅನಂತರ ದೀಪಕರ್ಣಿಮಹಾರಾಜನು (ವಾನಪ್ರಸ್ಥನಾಗಿ) ಕಾಡಿಗೆ ಹೋಗಲಾಗಿ ಸಾತವಾಹನರಾಜನು ಸಾರ್ವಭೌಮನಾದನು."

೧೦೭. ಕಾಣಭೂತಿಯ ಪ್ರಶ್ನೆಗೆ ಉತ್ತರವಾಗಿ ಮಧ್ಯದಲ್ಲಿ ಈ ಕಥೆಯನ್ನು ಹೇಳಿದ ಧೀಮಂತ ಗುಣಾಢ್ಯನು ಪ್ರಸ್ತುತ ವಿಷಯವನ್ನು ನೆನಪಿಸಿಕೊಂಡು ಮತ್ತೆ ಹೇಳತೊಡಗಿದನು.

---

ಅಯಂ ಚ ವರ್ಧಿತೋಽನ್ಯಾಸಾಂ ಸಿಂಹೀನಾಂ ಪಯಸಾ ಮಯಾ ।
ಅದ್ಯ ಚಾಹಂ ವಿಮುಕ್ತೋಽಸ್ಮಿ ಶಾಪಾದ್ ಬಾಣಾಹತಸ್ತ್ವಯಾ ॥ ೧೦೨
ತದ್ ಗೃಹಾಣ ಮಹಾಸತ್ತ್ವಂ ಮಯಾ ದತ್ತಮಮುಂ ಸುತಮ್ ।
ಅಯಂ ಹ್ಯರ್ಥಃ ಸಮಾದಿಷ್ಟಸ್ತೈರೇವ ಮುನಿಭಿಃ ಪುರಾ ॥ ೧೦೩
ಇತ್ಯುಕ್ತ್ವಾಂತರ್ಹಿತೇ ತಸ್ಮಿನ್ ಸಾತನಾಮನಿ ಗುಹ್ಯಕೇ ।
ಸ ರಾಜಾ ತಂ ಸಮಾದಾಯ ಬಾಲಂ ಪ್ರತ್ಯಾಯಯೌ ಗೃಹಮ್ ॥ ೧೦೪
ಸಾತೇನ ಯಸ್ಮಾದೂಢೋಽಭೂತ್ತಸ್ಮಾತ್ತಂ ಸಾತವಾಹನಮ್ ।
ನಾಮ್ನಾ ಚಕಾರ ಕಾಲೇನ ರಾಜ್ಯೇ ಚೈನಂ ನ್ಯವೇಶಯತ್ ॥ ೧೦೫
ತತಸ್ತಸ್ಮಿನ್ ಗತೇಽರಣ್ಯಂ ದೀಪಕರ್ಣೌ ಕ್ಷಿತೀಶ್ವರೇ ।
ಸಂವೃತ್ತಃ ಸಾರ್ವಭೌಮೋಽಸೌ ಭೂಪತಿಃ ಸಾತವಾಹನಃ ॥ ೧೦೬
ಏವಮುಕ್ತ್ವಾ ಕಥಾಂ ಮಧ್ಯೇ ಕಾಣಭೂತ್ಯನುಯೋಗತಃ ।
ಗುಣಾಢ್ಯಃ ಪ್ರಕೃತಂ ಧೀಮಾನ್ ಅನುಸ್ಮೃತ್ಯಾಬ್ರವೀತ್ ಪುನಃ ॥ ೧೦೭

## ಸಾತವಾಹನನು ಸಂಸ್ಕೃತವನ್ನು ಕಲಿತ ಕಥೆ

೧೦೮. ಒಮ್ಮೆ ರಾಜ ಸಾತವಾಹನನು ವಸಂತೋತ್ಸವದ ಸಮಯದಲ್ಲಿ ದೇವೀನಿರ್ಮಿತವಾದ ಉದ್ಯಾನದಲ್ಲಿದ್ದನು.

೧೦೯. ನಂದನವನದಲ್ಲಿ ವಿಹರಿಸುವ ಮಹೇಂದ್ರನಂತೆ ಅಲ್ಲಿ ದೀರ್ಘಕಾಲದವರೆಗೆ ಓಡಾಡಿ ಕೊಳದ ನೀರಿನಲ್ಲಿ ಆಟವಾಡಲು ಕಾಮಿನಿಯರೊಡನೆ ಇಳಿದನು.

೧೧೦. ಲೀಲೆಯಿಂದ ಕೈನೀರನ್ನು ಪ್ರಿಯೆಯರ ಮೇಲೆ ಅವನು ಎರಚಿ ಅವರನ್ನು ನೆನೆಸುತ್ತಿದ್ದನು. ಗಂಡಾನೆಯ ಮೇಲೆ ನೀರನ್ನೆರಚುವ ಹೆಣ್ಣಾನೆಗಳಂತೆ ಆ ಸ್ತ್ರೀಯರೂ ನೀರನ್ನೆರಚುತ್ತಿದ್ದರು.

೧೧೧. ನೀರಿನಿಂದ ನೆನೆದು ಅವರ ಮುಖಗಳಲ್ಲಿ ಕಣ್ಣುಗಳ ಕಾಡಿಗೆ ತೊಳೆದು ಹೋಗುತ್ತಿತ್ತು ಮತ್ತು ಕಣ್ಣುಗಳು ಸ್ವಲ್ಪ ಸ್ವಲ್ಪ ಕೆಂಪಾದುವು. ಬಟ್ಟೆಗಳು ಮೈಗೆ ಅಂಟಿಕೊಂಡಿದ್ದರಿಂದ ಅವರ ಅವಯವಗಳು ಕಾಣಿಸುತ್ತಿದ್ದುವು. ಅದರಿಂದ ಸ್ತ್ರೀಯರು ಅವನ ಮನಸ್ಸನ್ನು ಸೆಳೆಯುತ್ತಿದ್ದರು.

೧೧೨. ಗಾಳಿಯು ಕಾಡಿನ ಮಧ್ಯಲ್ಲಿರುವ ಲತೆಗಳಲ್ಲಿರುವ ತಿಲಕದಂತಹ ಎಲೆಗಳನ್ನೂ ಆಭರಣದಂತಿರುವ ಹೂವುಗಳನ್ನೂ ಉದುರಿಸುವಂತೆ ರಾಜನು ನೀರಿನ ಮಧ್ಯದಲ್ಲಿದ್ದ ಸ್ತ್ರೀಯರ ಪತ್ರ (ಮುಖದಲ್ಲಿ ಬಣ್ಣದಿಂದ ರಚಿಸಿದ ಎಲೆಗಳಂತಹ ಅಲಂಕಾರ) ಮತ್ತು ತಿಲಕಗಳು ಅಳಿಸಿಹೋಗುವಂತೆಯೂ ಆಭರಣಗಳೆಂಬ ಪುಷ್ಪಗಳು ಜಾರಿಬೀಳುವಂತೆಯೂ ಮಾಡುತ್ತಿದ್ದನು.

---

ತತಃ ಕದಾಚಿದಧ್ಯಾಸ್ತ ವಸಂತಸಮಯೋತ್ಸವೇ ।
ದೇವೀಕೃತಂ ತದುದ್ಯಾನಂ ಸ ರಾಜಾ ಸಾತವಾಹನಃ ॥ ೧೦೮
ವಿಹರನ್ ಸುಚಿರಂ ತತ್ರ ಮಹೇಂದ್ರ ಇವ ನಂದನೇ ।
ವಾಪೀಜಲೇऽವತೀರ್ಣೋऽಭೂತ್ ಕ್ರೀಡಿತುಂ ಕಾಮಿನೀಸಖಃ ॥ ೧೦೯
ಅಸಿಂಚತ್ತತ್ರ ದಯಿತಾಃ ಸಹೇಲಂ ಕರವಾರಿಭಿಃ ।
ಅಸಿಚ್ಯತ ಸ ತಾಭಿಶ್ಚ ವಶಾಭಿರಿವ ವಾರಣಃ ॥ ೧೧೦
ಮುಖೈರ್ಧೌತಾಂಜನಾತಾಮ್ರನೇತ್ರೈರ್ಜಲಾರ್ದ್ರಲಾಪ್ಲುತೈಃ ।
ಅಂಗೈಃ ಸಕ್ತಾಂಬರವ್ಯಕ್ತವಿಭಾಗೈಶ್ಚ ತಮಂಗನಾಃ ॥ ೧೧೧
ವಿದಲತ್ಪತ್ರತಿಲಕಾಃ ಸ ಚಕ್ರೇ ವನಮಧ್ಯಗಾಃ ।
ಚ್ಯುತಾಭರಣಪುಷ್ಪಾಸ್ತಾ ಲತಾ ವಾಯುರಿವ ಪ್ರಿಯಾಃ ॥ ೧೧೨

೧೧೩. ಆಗ ಶಿರೀಷಪುಷ್ಪದಂತೆ ಕೋಮಲೆಯಾಗಿದ್ದ ಹಾಗೂ ದಪ್ಪವಾದ ಸ್ತನಗಳ ಭಾರದಿಂದ ಬಳಲಿದ್ದ ರಾಣಿಯರಲ್ಲೊಬ್ಬಳು ನೀರಾಟದಿಂದ ಆಯಾಸ ಗೊಂಡಿದ್ದಳು.

೧೧೪. ಅವಳ ಮೇಲೆ ರಾಜನು ನೀರನ್ನು ಎರಚತೊಡಗಿದಾಗ ಅದನ್ನು ಸಹಿಸಲಾರದೆ ಅವಳು "ಮೋದಕೈರ್ದೇವ ಪರಿತಾಡಯ ಮಾಮ್" (ಪ್ರಭು, ನೀರಿನಿಂದ ನನಗೆ ಹೊಡೆಯಬೇಡ) ಎಂದಳು.

೧೧೫. ಅದನ್ನು ಕೇಳಿದ ರಾಜನು ಶೀಘ್ರವಾಗಿ ಅನೇಕ ಮೋದಕಗಳನ್ನು ಅಲ್ಲಿಗೆ ತರಿಸಿದನು. ಆಗ ಜೋರಾಗಿ ನಕ್ಕು ಆ ರಾಣಿ ಮತ್ತೆ ಇಂತೆಂದಳು.

೧೧೬. 'ದೊರೆ, ಈ ನೀರಾಟದ ಸಂದರ್ಭದಲ್ಲಿ ಮೋದಕಗಳ ಆವಶ್ಯಕತೆ ಏನಿದೆ ? ಮಾ ಉದಕೈಃ ಪರಿತಾಡಯ (ನೀರುಗಳಿಂದ ನನಗೆ ಹೊಡೆಯಬೇಡ) ಎಂದು ಮಾತ್ರ ನಾನು ಹೇಳಿದೆನು.

೧೧೭. 'ಮಾ' ಎಂಬ ಶಬ್ದಕ್ಕೂ 'ಉದಕ' ಶಬ್ದಕ್ಕೂ ಆದ ಸಂಧಿಯೂ ನಿನಗೆ ತಿಳಿಯದೆ ಹೋಯಿತು. ಈ ಪ್ರಕರಣ ಯಾವುದು ಎಂಬುದನ್ನೂ ನೀನು ಅರಿತುಕೊಳ್ಳಲಾರೆ. ನೀನಿಂತಹ ಮೂರ್ಖನಾದುದು ಹೇಗೆ ?'

೧೧೮. ಹೀಗೆಂದು ವ್ಯಾಕರಣವನ್ನು ಕಲಿತಿದ್ದ ಆಕೆ ಹೇಳಿದಾಗ ಪರಿವಾರದವರೆಲ್ಲರೂ ಒಳಗೊಳಗೇ ಮುಸಿಮುಸಿ ನಕ್ಕರು. ಕೂಡಲೇ ರಾಜನಿಗೆ ಅತಿಯಾಗಿ ನಾಚಿಕೆಯಾಯಿತು.

---

ಅಥೈಕಾ ತಸ್ಯ ಮಹಿಷೀ ರಾಜ್ಞಃ ಸ್ತನಭರಾಲಸಾ ।
ಶಿರೀಷಸುಕುಮಾರಾಂಗೀ ಕ್ರೀಡಂತೀ ಕ್ಲಮಮಭ್ಯಗಾತ್ ॥ ೧೧೩
ಸಾ ಜಲೈರಭಿಷಿಂಚಂತಂ ರಾಜಾನಮಸಹಾ ಸತೀ ।
ಅಬ್ರವೀನ್ಮೋದಕೈರ್ದೇವ ಪರಿತಾಡಯ ಮಾಮಿತಿ ॥ ೧೧೪
ತಚ್ಛ್ರುತ್ವಾ ಮೋದಕಾನ್ ರಾಜಾ ದ್ರುತಮಾನಾಯಯದ್ ಬಹೂನ್ ।
ತತೋ ವಿಹಸ್ಯ ಸಾ ರಾಜ್ಞೀ ಪುನರೇವಮಭಾಷತ ॥ ೧೧೫
ರಾಜನ್ನವಸರಃ ಕೋऽತ್ರ ಮೋದಕಾನಾಂ ಜಲಾಂತರೇ ।
ಉದಕೈಃ ಸಿಂಚ ಮಾ ತ್ವಂ ಮಾಮಿತ್ಯುಕ್ತಂ ಹಿ ಮಯಾ ತವ ॥ ೧೧೬
ಸಂಧಿಮಾತ್ರಂ ನ ಜಾನಾಸಿ ಮಾಶಬ್ದೋದಕಶಬ್ದಯೋಃ ।
ನ ಚ ಪ್ರಕರಣಂ ವೇತ್ಸಿ ಮೂರ್ಖಸ್ತ್ವಂ ಕಥಮೀದೃಶಃ ॥ ೧೧೭
ಇತ್ಯುಕ್ತೆ ಸ ತಯಾ ರಾಜಾ ಶಬ್ದಶಾಸ್ತ್ರವಿದಾ ನೃಪಃ ।
ಪರಿವಾರೇ ಹಸತ್ಯಂತರ್ಲಜ್ಜಾಕ್ರಾಂತೋ ಝಗಿತ್ಯಭೂತ್ ॥ ೧೧೮

೧೯. ಆ ಕ್ಷಣದಲ್ಲೇ ಜಲಕ್ರೀಡೆಯನ್ನು ಅಲ್ಲಿಗೇ ಬಿಟ್ಟು ರಾಜನು ಅವಮಾನಿತನಾಗಿ ಅರಮನೆಗೆ ಹಿಂದಿರುಗಿದನು. ಅವನ ಗರ್ವವೆಲ್ಲ ಉಡುಗಿಹೋಯಿತು. ಯಾವುದರಲ್ಲೂ ಅವನಿಗೆ ಆಸಕ್ತಿ ಬರದಾಯಿತು.

೧೨೦. ಆಮೇಲೆ ಅವನು ಚಿಂತಾಕ್ರಾಂತನಾಗಿ ಏನೂ ತೋಚದೆ ಆಹಾರ ನೀರುಗಳನ್ನೂ ಬಿಟ್ಟನು. ಚಿತ್ರದಲ್ಲಿರುವ ರಾಜನಂತೆ ಬೇರೆಯವರು ಏನು ಕೇಳಿದರೂ ಅವನು ಮಾತನಾಡುತ್ತಿರಲಿಲ್ಲ.

೧೨೧. ನನಗೆ ಪಾಂಡಿತ್ಯವಾದರೂ ಶರಣವಾಗಬೇಕು ಅಥವಾ ಮರಣವಾದರೂ ಸಿಗಬೇಕು ಎಂದು ಚಿಂತಿಸಿದ ರಾಜನು ಹಾಸಿಗೆಯಲ್ಲಿ ಒರಗಿಕೊಂಡು ಸಂತಾಪವನ್ನನುಭವಿಸಿದನು.

೧೨೨. ಈ ರೀತಿಯಾದ ಅವಸ್ಥೆ ರಾಜನಿಗೆ ಇದ್ದಕ್ಕಿದ್ದಂತೆ ಉಂಟಾದಾಗ ಅದನ್ನು ನೋಡಿದ ಸೇವಕರು ಇದೇನೆಂದು ಸಂಭ್ರಾಂತರಾದರು.

೧೨೩. ಆಮೇಲೆ ನಾನೂ ಶರ್ವವರ್ಮನೂ ಕ್ರಮೇಣ ರಾಜನ ಆ ಅವಸ್ಥೆಯನ್ನು ಅರಿತುಕೊಂಡೆವು. ಹೀಗೆ ಆ ದಿನವು ಬಹುಮಟ್ಟಿಗೆ ಕಳೆದುಹೋಯಿತು.

೧೨೪. ಈ ಸಮಯದಲ್ಲಿ ರಾಜನು ಸ್ವಸ್ಥನಾಗಿಲ್ಲ ಎಂದು ಆಲೋಚಿಸಿ ನಾವಿಬ್ಬರೂ ರಾಜಹಂಸನೆಂಬ ರಾಜಪರಿಚಾರಕನನ್ನು ಕರೆಸಿದೆವು.

---

ಪರಿತ್ಯಕ್ತಜಲಕ್ರೀಡೋ ವೀತದರ್ಪಶ್ಚ ತತ್ಕ್ಷಣಮ್ ।
ಜಾತಾವಮಾನೋ ನಿರ್ಲಕ್ಷ್ಯಃ ಪ್ರಾವಿಶನ್ನಿಜಮಂದಿರಮ್ ॥ ೧೯

ತತಶ್ಚಿಂತಾಪರೋ ಮುಹ್ಯನ್ ಆಹಾರಾದಿಪರಾಙ್ಮುಖಃ ।
ಚಿತ್ರಸ್ಥ ಇವ ಪೃಷ್ಟೋಽಪಿ ನೈವ ಕಿಂಚಿದಭಾಷತ ॥ ೧೨೦

ಪಾಂಡಿತ್ಯಂ ಶರಣಂ ವಾ ಮೇ ಮೃತ್ಯುರ್ವೇತಿ ವಿಚಿಂತಯನ್ ।
ಶಯನೀಯಪರಿತ್ಯಕ್ತಗಾತ್ರಃ ಸಂತಾಪವಾನಭೂತ್ ॥ ೧೨೧

ಅಕಸ್ಮಾದಥ ರಾಜ್ಞಸ್ತಾಂ ದೃಷ್ಟ್ವಾವಸ್ಥಾಂ ತಥಾವಿಧಾಮ್ ।
ಕಿಮೇತದಿತಿ ಸಂಭ್ರಾಂತಃ ಸರ್ವಃ ಪರಿಜನೋಽಭವತ್ ॥ ೧೨೨

ತತೋಽಹಂ ಶರ್ವವರ್ಮಾ ಚ ಜ್ಞಾತವಂತೌ ಕ್ರಮೇಣ ತಾಮ್ ।
ಅತ್ರಾಂತರೇ ಸ ಚ ಪ್ರಾಯಃ ಪರ್ಯಹೀಯತ ವಾಸರಃ ॥ ೧೨೩

ಅಸ್ಮಿನ್ ಕಾಲೇ ನ ಚ ಸ್ವಸ್ಥೋ ರಾಜೇತ್ಯಾಲೋಚ್ಯ ತತ್ಕ್ಷಣಮ್ ।
ಆವಾಭ್ಯಾಂ ರಾಜಹಂಸಾಖ್ಯ ಆಹೂತೋ ರಾಜಚೇಟಕಃ ॥ ೧೨೪

೧೭೫. ರಾಜನ ಶರೀರಾರೋಗ್ಯದ ಬಗೆಗೆ ನಾವು ಕೇಳಿದಾಗ ರಾಜಹಂಸನಿಂತೆಂದನು. "ಹಿಂದೆ ಯಾವಾಗಲೂ ದೊರೆ ಇಷ್ಟು ಬೇಸರಪಟ್ಟುಕೊಂಡುದನ್ನು ನಾವು ನೋಡಿಲ್ಲ.

೧೭೬. ರಾಣಿಯರಿಗೆಲ್ಲ ಇದರಿಂದ ತುಂಬ ಕೋಪ ಬಂದಿದೆ. ಹುಸಿ ಪಂಡಿತೆ ಆ ವಿಷ್ಣುಶಕ್ತಿಯ ಮಗಳು ರಾಜನಿಗೆ ಅವಮಾನ ಮಾಡಿಬಿಟ್ಟಳು ಎಂದು ಅವರೆಲ್ಲ ಹೇಳುತ್ತಿದ್ದಾರೆ."

೧೭೭. ರಾಜಪರಿಚಾರಕನ ಬಾಯಿಂದ ಈ ಮಾತುಗಳನ್ನು ಕೇಳಿ ನಾನೂ ಶರ್ವವರ್ಮನೂ ಬೇಸರಗೊಂಡೆವು. ಸಂಶಯದಿಂದ ನಾನಿಂತು ಆಲೋಚಿಸಿದೆನು.

೧೭೮. ರಾಜನಿಗೆ ಶರೀರದಲ್ಲಿ ಯಾವುದಾದರೂ ವ್ಯಾಧಿ ಉಂಟಾಗಿದ್ದರೆ ವೈದ್ಯರು ಬರಬೇಕಾಗಿತ್ತು. ಅವನಿಗೆ ಮಾನಸಿಕ ವ್ಯಥೆ ಇದೆ ಎನ್ನುವುದಾದರೆ ಅದಕ್ಕೆ ಕಾರಣ ಸರಿಯಾಗಿ ತಿಳಿಯುತ್ತಿಲ್ಲ.

೧೭೯. ರಾಜ್ಯದಲ್ಲಿ ಎಲ್ಲ ಅಂತಃಶತ್ರುಗಳೂ ಇಲ್ಲವಾಗಿಸಿರುವುದರಿಂದ ರಾಜನಿಗೆ ವಿರೋಧಿಗಳು ಯಾರೂ ಇಲ್ಲ. ಪ್ರಜೆಗಳೆಲ್ಲ ಅವನನ್ನು ಪ್ರೀತಿಸುತ್ತಿದ್ದಾರೆ. ಯಾವ ಹಾನಿಯೂ ಕಂಡುಬರುತ್ತಿಲ್ಲ.

೧೮೦. ಹೀಗಿರುವಾಗ ದೊರೆಗೆ ಯಾವ ಕಾರಣದಿಂದ ಇಂಥ ಬೇಸರ ಉಂಟಾಗಿರಬಹುದು ? ಹೀಗೆ ಆಲೋಚಿಸುತ್ತಿರುವಾಗ ಧೀಮಂತ ಶರ್ವವರ್ಮನು ಹೇಳಿದನು.

---

ಶರೀರವಾರ್ತಾಂ ಭೂಪಸ್ಯ ಸ ಚ ಪೃಷ್ಟೋಽಬ್ರವೀದಿದಮ್ ।
ನೇದೃಶೋ ದುರ್ಮನಾಃ ಪೂರ್ವಂ ದೃಷ್ಟೋ ದೇವಃ ಕದಾಚನ ॥ ೧೭೫

ವಿಷ್ಣುಶಕ್ತಿದುಹಿತ್ರಾ ಚ ಮಿಥ್ಯಾಪಂಡಿತಯಾ ತಯಾ ।
ವಿಲಕ್ಷೀಕೃತ ಇತ್ಯಾಹುರ್ದೇವ್ಯೋಽನ್ಯಾಃ ಕೋಪನಿರ್ಭರಮ್ ॥ ೧೭೬

ಏತತ್ತಸ್ಯ ಮುಖಾಚ್ಛ್ರುತ್ವಾ ರಾಜಚೇಟಸ್ಯ ದುರ್ಮನಾಃ ।
ಶರ್ವವರ್ಮದ್ವಿತೀಯೋಽಹಂ ಸಂಶಯಾದಿತ್ಯಚಿಂತಯಮ್ ॥ ೧೭೭

ವ್ಯಾಧಿರ್ಯದಿ ಭವೇದ್ ರಾಜ್ಞಃ ಪ್ರವಿಶೇಯುಶ್ಚಿಕಿತ್ಸಕಾಃ ।
ಆಧಿರ್ವಾ ಯದಿ ತತ್ರಾಸ್ಯ ಕಾರಣಂ ನೋಪಲಭ್ಯತೇ ॥ ೧೭೮

ನಾಸ್ತ್ಯೇವ ಹಿ ವಿಪಕ್ಷೋಽಸ್ಯ ರಾಜ್ಯೇ ನಿಹತಕಂಟಕೇ ।
ಅನುರಕ್ತಾಃ ಪ್ರಜಾಶ್ಚೈತಾಃ ನ ಹಾನಿಃ ಪರಿದೃಶ್ಯತೇ ॥ ೧೭೯

ತತ್ಕಸ್ಮಾದೇವ ಖೇದಃ ಸ್ಯಾದೀದೃಶಃ ಸಹಸಾ ಪ್ರಭೋಃ ।
ಏವಮ ವಿಚಿಂತಿತೇ ಧೀಮಾನ್ ಶರ್ವವರ್ಮೇದಮಬ್ರವೀತ್ ॥ ೧೮೦

೧೩೧. "ನನಗೆ ಗೊತ್ತಾಯಿತು. ರಾಜನ ಬೇಸರವು ತನ್ನ ಮೂರ್ಖತೆಯಿಂದ ಉಂಟಾದ ಪಶ್ಚಾತ್ತಾಪದಿಂದಾಗಿದೆ. ತಾನು ಮೂರ್ಖನೆಂಬುದನ್ನು ಅರಿತಿರುವ ರಾಜನು ಸದಾ ಪಾಂಡಿತ್ಯಾಭಿಲಾಷಿಯಾಗಿದ್ದಾನೆ.

೧೩೨. ಮೊದಲೇ ನನಗೆ ಅವನ ಆಸೆಯ ಬಗೆಗೆ ತಿಳಿದಿತ್ತು. ಇಂದು ರಾಣಿಯಿಂದ ಅದರ ಕಾರಣದಿಂದಲೇ ಅವಮಾನಕ್ಕೆ ಈಡಾಗಿದ್ದಾನೆ. ಅದು ಅವನ ಬೇಸರಕ್ಕೆ ಕಾರಣವೆಂದೂ ಕೇಳಿದೆವು."

೧೩೩. ಹೀಗೆ ನಾವಿಬ್ಬರೂ ಪರಸ್ಪರ ಆಲೋಚನೆಯನ್ನು ಮಾಡಿ ಆ ರಾತ್ರಿಯನ್ನು ಕಳೆದು ಬೆಳಗಾದ ಮೇಲೆ ರಾಜನ ಅರಮನೆಗೆ ಹೋದೆವು.

೧೩೪. ಅಲ್ಲಿ ಯಾರಿಗೂ ಒಳಗೆ ಪ್ರವೇಶಕ್ಕೆ ಅನುಮತಿ ಇರಲಿಲ್ಲ. ಆದರೂ ಹೇಗೋ ನಾನು ಪ್ರವೇಶಿಸಿದೆನು. ಆಮೇಲೆ ನನ್ನ ಹಿಂದೆ ಶರ್ವವರ್ಮನೂ ಮೆತ್ತಗೆ ಹೆಜ್ಜೆಯನ್ನಿಡುತ್ತಾ ಒಳಗೆ ಬಂದನು.

೧೩೫. ದೊರೆಯ ಸಮೀಪದಲ್ಲಿ ಕುಳಿತು ನಾನಿಂತು ಬಿನ್ನವಿಸಿಕೊಂಡೆನು. "ದೇವ, ನಿಷ್ಕಾರಣವಾಗಿ ತಾವು ಮನಸ್ಸನ್ನು ಬೇಸರಕ್ಕೆ ಈಡುಮಾಡಿರುವುದೇಕೆ ?"

೧೩೬. ಅದನ್ನು ಕೇಳಿದರೂ ಸಾತವಾಹನನು ಮಾತಿಲ್ಲದೆ ಹಾಗೆಯೇ ಸುಮ್ಮನೆ ಇದ್ದನು. ಆಗ ಶರ್ವವರ್ಮನು ಅದ್ಭುತವಾದ ಒಂದು ಮಾತನ್ನು ನುಡಿದನು.

---

ಅಹಂ ಜಾನಾಮಿ ರಾಜ್ಞೋಽಸ್ಯ ಮನ್ಯುರ್ಮೌರ್ಖ್ಯಾನುತಾಪತಃ ।
ಮೂರ್ಖೋಽಹಮಿತಿ ಪಾಂಡಿತ್ಯಂ ಸದೈವಾಯಂ ಹಿ ವಾಂಛತಿ ॥ ೧೩೧

ಉಪಲಬ್ಧೋ ಮಯಾ ಚೈಷ ಪೂರ್ವಮೇವ ತದಾಶಯಃ ।
ರಾಜ್ಞ್ಯಾವಮಾನಿತಶ್ಚಾದ್ಯ ತನ್ನಿಮಿತ್ತಮಿತಿ ಶ್ರುತಮ್ ॥ ೧೩೨

ಏವಮನ್ಯೋನ್ಯಮಾಲೋಚ್ಯ ತಾಂ ರಾತ್ರಿಮತಿವಾಹ್ಯ ಚ ।
ಪ್ರಾತರಾವಾಮಗಚ್ಛಾವ ವಾಸವೇಶ್ಮ ಮಹೀಪತೇಃ ॥ ೧೩೩

ತತ್ರ ಸರ್ವಸ್ಯ ರುದ್ಧೇಽಪಿ ಪ್ರವೇಶೇ ಕಥಮಪ್ಯಹಮ್ ।
ಪ್ರಾವಿಶಂ ಮಮ ಪಶ್ಚಾಚ್ಚ ಶರ್ವವರ್ಮಾ ಲಘುಕ್ರಮಮ್ ॥ ೧೩೪

ಉಪವಿಶ್ಯಾಥ ನಿಕಟೇ ವಿಜ್ಞಪ್ತಃ ಸ ಮಯಾ ನೃಪಃ ।
ಅಕಾರಣಂ ಕಥಂ ದೇವ ವರ್ತಸೇ ವಿಮನಾ ಇತಿ ॥ ೧೩೫

ತಚ್ಛ್ರುತ್ವಾಪಿ ತಥೈವಾಸೀತ್ ಸ ತೂಷ್ಣೀಂ ಸಾತವಾಹನಃ ।
ಶರ್ವವರ್ಮಾ ತತಶ್ಚೇದಮದ್ಭುತಂ ವಾಕ್ಯಮಬ್ರವೀತ್ ॥ ೧೩೬

೧೩೭ "ದೇವ, ನನಗೆ ಎಲ್ಲಾದರೂ ವಿದ್ಯೆ ಪ್ರಾಪ್ತವಾಗಬೇಕು ಎಂದು ತಾವು ಹೇಳಿದ್ದಿರಿ. ಆದ್ದರಿಂದ ಕಳೆದ ರಾತ್ರಿಯಲ್ಲಿ 'ಸ್ವಪ್ನಮಾಣವಕ ' ಎಂಬ ತಂತ್ರವನ್ನು ಹೂಡಿದ್ದೆನು.

೧೩೮. ಆಗ ಸ್ವಪ್ನದಲ್ಲಿ ನನಗೆ ಆಕಾಶದಿಂದ ಉದುರಿದ ತಾವರೆ ಕಾಣಿಸಿತು. ಆ ತಾವರೆಯನ್ನು ಯಾವನೋ ದೇವತಾಕುಮಾರನು ಅರಳಿಸಿದನು.

೧೩೯. ಆ ತಾವರೆಯಿಂದ ಬಿಳಿಯ ಉಡುಗೆಯನ್ನು ಧರಿಸಿದ್ದ ದಿವ್ಯಸ್ತ್ರೀಯೊಬ್ಬಳು ಹೊರಗೆ ಬಂದಳು. ಅನಂತರ ಆ ದಿವ್ಯಸ್ತ್ರೀ ತಮ್ಮ ಬಾಯೊಳಗೆ ಪ್ರವೇಶಿಸಿದಳು.

೧೪೦. ಇಷ್ಟನ್ನು ನೋಡುವಷ್ಟರಲ್ಲಿ ನನಗೆ ಎಚ್ಚರವಾಯಿತು. ಆ ದಿವ್ಯಸ್ತ್ರೀಯೇ ಸರಸ್ವತಿ ಎಂದುಕೊಂಡಿದ್ದೇನೆ. ಆಕೆ ಸಾಕ್ಷಾತ್ತಾಗಿ ಮುಖದೊಳಗೆ ಪ್ರವೇಶಿಸಿದ್ದಾಳೆ, ಸಂಶಯವಿಲ್ಲ."

೧೪೧. ಹೀಗೆ ಶರ್ವವರ್ಮನು ತನ್ನ ಕನಸನ್ನು ನಿವೇದಿಸಿದಮೇಲೆ ಸಾತವಾಹನನು ಮೌನವನ್ನು ಮುರಿದು ಅಭಿಪ್ರಾಯಗರ್ಭಿತವಾಗಿ ನನಗೆ ಈ ಮಾತನ್ನು ಹೇಳಿದನು.

೧೪೨. "ಮನುಷ್ಯನು ಪ್ರಯತ್ನಪೂರ್ವಕವಾಗಿ ಕಲಿತರೆ ಎಷ್ಟು ಸಮಯದಲ್ಲಿ ಪಾಂಡಿತ್ಯವನ್ನು ಪಡೆಯುವನು ? ಇದನ್ನು ನೀನು ಹೇಳು.

---

ಶ್ರುತಂ ಮಮ ಸ್ಯಾತ್ ಕ್ವಾಪೀತಿ ಪ್ರಾಗುಕ್ತಂ ದೇವ ಮೇ ತ್ವಯಾ ।
ತೇನಾಹಂ ಕೃತವಾನದ್ಯ ಸ್ವಪ್ನಮಾಣವಕಂ ನಿಶಿ ॥ ೧೩೭

ಸ್ವಪ್ನೇ ತತೋ ಮಯಾ ದೃಷ್ಟಂ ನಭಸಶ್ಚ್ಯುತಮಂಬುಜಮ್ ।
ತಚ್ಚ ದಿವ್ಯೇನ ಕೇನಾಪಿ ಕುಮಾರೇಣ ವಿಕಾಸಿತಮ್ ॥ ೧೩೮

ತತಶ್ಚ ನಿರ್ಗತಾ ತಸ್ಮಾದ್ ದಿವ್ಯಾ ಸ್ತ್ರೀ ಧವಲಾಂಬರಾ ।
ತವ ದೇವ ಮುಖಂ ಸಾ ಚ ಪ್ರವಿಷ್ಟಾ ಸಮನಂತರಮ್ ॥ ೧೩೯

ಇಯದ್ ದೃಷ್ಟ್ವಾ ಪ್ರಬುದ್ಧೋಽಸ್ಮಿ ಮನ್ಯೇ ಸಾ ಚ ಸರಸ್ವತೀ ।
ದೇವಸ್ಯ ವದನೇ ಸಾಕ್ಷಾತ್ ಸಂಪ್ರವಿಷ್ಟಾ ನ ಸಂಶಯಃ ॥ ೧೪೦

ಏವಂ ನಿವೇದಿತಸ್ವಪ್ನೇ ಶರ್ವವರ್ಮಣಿ ತತ್‌ಕ್ಷಣಾತ್ ।
ಮಾಮುಕ್ತಮೌನಃ ಸಾಕೂತಮವದತ್ ಸಾತವಾಹನಃ ॥ ೧೪೧

ಶಿಕ್ಷಮಾಣಃ ಪ್ರಯತ್ನೇನ ಕಾಲೇನ ಕಿಯತಾ ಪುಮಾನ್ ।
ಅಧಿಗಚ್ಛತಿ ಪಾಂಡಿತ್ಯಮೇತನ್ಮೇ ಕಥ್ಯತಾಂ ತ್ವಯಾ ॥ ೧೪೨

೧೫೩ ಪಾಂಡಿತ್ಯವಿಲ್ಲದೆ ಈ ರಾಜ್ಯಲಕ್ಷ್ಮಿಯು ಶೋಭಿಸುವುದಿಲ್ಲ. ಮರದ ತುಂಡಿಗೆ ತೊಡಿಸಿದ ಒಡವೆಗಳಂತಿರುವ ಮೂರ್ಖನ ಸಂಪತ್ತುಗಳಿಂದ ಪ್ರಯೋಜನವೇನು ?"

೧೫೪. ಆಗ ನಾನು ಹೇಳಿದೆನು. "ರಾಜನೇ, ಎಲ್ಲ ವಿದ್ಯೆಗಳ ಮುಖ (ದ್ವಾರ) ವಾದ ವ್ಯಾಕರಣವನ್ನು ಮಾನವರು ಹನ್ನೆರಡು ವರ್ಷಗಳಲ್ಲಿ ಕಲಿಯುತ್ತಾರೆ.

೧೫೫ ಪ್ರಭು, ನಾನು ಅದನ್ನು ತಮಗೆ ಆರೇ ವರ್ಷಗಳಲ್ಲಿ ಕಲಿಸುತ್ತೇನೆ." ಈ ಮಾತನ್ನು ಕೇಳಿ ಅಸಹನೆಯಿಂದ ಶರ್ವವರ್ಮನು ಹೀಗೆಂದನು.

೧೫೬ "ಸುಖಕ್ಕೆ ಅರ್ಹರಾದವರು ಅಷ್ಟು ದೀರ್ಘಕಾಲ ಹೇಗೆ ಅಧ್ಯಯನದ ಕ್ಲೇಶವನ್ನು ಸಹಿಸಿಯಾರು ? ದೇವ, ನಾನು ತಮಗೆ ವ್ಯಾಕರಣವನ್ನು ಆರು ತಿಂಗಳಲ್ಲೇ ಕಲಿಸುತ್ತೇನೆ."

೧೫೭–೧೫೮. ಆ ಮಾತನ್ನು ಕೇಳುತ್ತಲೇ ಅದು ಅಸಂಭವ ಎಂಬ ಭಾವನೆಯಿಂದ ನಾನು ರೋಷದಿಂದಲೇ ಅವನಿಗೆ "ಆರುತಿಂಗಳುಗಳಲ್ಲಿ ನೀನು ರಾಜನಿಗೆ ವ್ಯಾಕರಣವನ್ನು ಕಲಿಸಿದ್ದೇ ಆದರೆ, ನಾನು ಮನುಷ್ಯರು ನುಡಿಯುವ ಸಂಸ್ಕೃತ, ಪ್ರಾಕೃತ, ದೇಶಭಾಷೆ ಎಂಬ ಮೂರು ಭಾಷೆಗಳನ್ನೂ ಎಂದೆಂದಿಗೂ ಪರಿತ್ಯಜಿಸುತ್ತೇನೆ" ಎಂದು ಹೇಳಿದೆನು.

---

ಮಮ ತೇನ ವಿನಾ ಹ್ಯೇಷಾ ಲಕ್ಷ್ಮೀರ್ನ ಪ್ರತಿಭಾಸತೇ ।
ವಿಭವೈಃ ಕಿಂ ನು ಮೂರ್ಖಸ್ಯ ಕಾಷ್ಠಸ್ಯಾಭರಣೈರಿವ ॥ ೧೫೩
ತತೋಹಮವದಂ ರಾಜನ್ ವರ್ಷೈರ್ದ್ವಾದಶಭಿಃ ಸದಾ ।
ಜ್ಞಾಯತೇ ಸರ್ವವಿದ್ಯಾನಾಂ ಮುಖಂ ವ್ಯಾಕರಣಂ ನರೈಃ ॥ ೧೫೪
ಅಹಂ ತು ಶಿಕ್ಷಯಾಮಿ ತ್ವಾಂ ವರ್ಷಷಟ್ಕೇನ ತದ್ವಿಭೋ ।
ಶ್ರುತ್ವೈತತ್ ಸಹಸಾ ಸೇರ್ಷ್ಯಂ ಶರ್ವವರ್ಮಾ ಕಿಲಾವದತ್ ॥ ೧೫೫
ಸುಖೋಚಿತೋ ಜನಃ ಕ್ಲೇಶಂ ಕಥಂ ಕುರ್ಯಾದಿಯಚ್ಚಿರಮ್ ।
ತದಹಂ ಮಾಸಷಟ್ಕೇನ ದೇವ ತ್ವಾಂ ಶಿಕ್ಷಯಾಮಿ ತತ್ ॥ ೧೫೬
ಶ್ರುತ್ವೈವೈತದಸಂಭಾವ್ಯಂ ತಮವೋಚಮಹಂ ರುಷಾ ।
ಷಡ್ಭಿರ್ಮಾಸೈಸ್ತ್ವಯಾ ದೇವಃ ಶಿಕ್ಷಿತಶ್ಚೇತ್ತತೋ ಮಯಾ ॥ ೧೫೭
ಸಂಸ್ಕೃತಂ ಪ್ರಾಕೃತಂ ತದ್ವದ್ ದೇಶಭಾಷಾ ಚ ಸರ್ವದಾ ।
ಭಾಷಾತ್ರಯಮಿದಂ ತ್ಯಕ್ತಂ ಯನ್ಮನುಷ್ಯೇಷು ಸಂಭವೇತ್ ॥ ೧೫೮

೧೪೯. ಆಗ ಶರ್ವವರ್ಮನು "ನಾನು ಕಲಿಸಲಾಗದಿದ್ದರೆ, ಹನ್ನೆರಡುವರ್ಷ ನಿನ್ನ ಪಾದುಕೆಗಳನ್ನು ನನ್ನ ತಲೆಯ ಮೇಲೆ ಹೊರುತ್ತೇನೆ" ಎಂದನು.

೧೫೦. ಇಷ್ಟು ಹೇಳಿ ಶರ್ವವರ್ಮನು ಹೊರಟಾಗ ನಾನೂ ಮನೆಗೆ ಹೋದೆನು. ರಾಜನು ಇಬ್ಬರಿಂದಲೂ ತನ್ನ ಇಷ್ಟಸಿದ್ಧಿಯಾಗುವುದೆಂದು ಆಶ್ವಾಸನೆಯನ್ನು ಹೊಂದಿದನು.

೧೫೧. ತನ್ನ ಪ್ರತಿಜ್ಞೆ ಸಾಧಿಸಲು ಕಠಿಣವಾದುದು ಎಂದು ಕೈಚೆಲ್ಲಿದ ಶರ್ವವರ್ಮನು ಚಿಂತಾಕ್ರಾಂತನಾಗಿ ನಡೆದುದೆಲ್ಲವನ್ನೂ ತನ್ನ ಹೆಂಡತಿಗೆ ಹೇಳಿದನು.

೧೫೨. ಅವಳೂ ದುಃಖಿತಳಾಗಿ "ಪ್ರಭು, ನಿನ್ನ ಇಂಥ ಸಂಕಟದಲ್ಲಿ ಕುಮಾರಸ್ವಾಮಿಯನ್ನು ಬಿಟ್ಟರೆ ಬೇರೆ ಯಾವ ಗತಿಯೂ ಇಲ್ಲ" ಎಂದಳು.

೧೫೩. ಅದೇ ಸರಿ ಎಂದು ನಿರ್ಧರಿಸಿ ಶರ್ವವರ್ಮನು ರಾತ್ರಿಯ ಕೊನೆಯ ಯಾಮದಲ್ಲಿ ನಿರಾಹಾರನಾಗಿ ಅಲ್ಲಿಗೇ ಹೊರಟನು.

೧೫೪. ಆ ವಿಷಯವನ್ನು ಗೂಢಚಾರರ ಮೂಲಕ ತಿಳಿದುಕೊಂಡ ನಾನು ಅದನ್ನು ಬೆಳಿಗ್ಗೆ ರಾಜನಿಗೆ ನಿವೇದಿಸಿದೆನು. ಅದನ್ನು ಕೇಳಿ ರಾಜನೂ ಏನಾಗುವುದೋ ಎಂದು ಚಿಂತಿಸತೊಡಗಿದನು.

೧೫೫. ಆಗ ಅವನ ಹಿತೈಷಿಯಾದ ಸಿಂಹಗುಪ್ತನೆಂಬ ರಾಜಪುತ್ರನು ಅವನಿಗಿಂತೆಂದನು. "ದೇವ, ತಾವು ಖಿನ್ನರಾಗಿದ್ದಾಗ ನನಗೆ ತುಂಬ ಬೇಸರ ಹುಟ್ಟಿತ್ತು.

---

ಶರ್ವವರ್ಮಾ ತತೋಽವಾದೀನ್ನ ಚೇದೇವಂ ಕರೋಮ್ಯಹಮ್ ।
ದ್ವಾದಶಾಬ್ದಾನ್ ವಹಾಮ್ಯೇಷ ಶಿರಸಾ ತವ ಪಾದುಕೇ ॥ ೧೪೯
ಇತ್ಯುಕ್ತ್ವಾ ನಿರ್ಗತೇ ತಸ್ಮಿನ್ನಹಮಪ್ಯಗಮಂ ಗೃಹಮ್ ।
ರಾಜಾಪ್ಯುಭಯತಃ ಸಿದ್ಧಿಂ ಮತ್ವಾಶ್ವಸ್ತೋ ಬಭೂವ ಸಃ ॥ ೧೫೦
ವಿಹಸ್ತಃ ಶರ್ವವರ್ಮಾ ಚ ಪ್ರತಿಜ್ಞಾಂ ತಾಂ ಸುದುಸ್ತರಾಮ್ ।
ಪಶ್ಯನ್ ಸಾನುಶಯಃ ಸರ್ವಂ ಸ್ವಭಾರ್ಯಾಯೈ ಶಶಂಸ ತತ್ ॥ ೧೫೧
ಸಾಪಿ ತಂ ದುಃಖಿತಾವೋಚತ್ ಸಂಕಟೇಽಸ್ಮಿಂಸ್ತವ ಪ್ರಭೋ ।
ವಿನಾ ಸ್ವಾಮಿಕುಮಾರೇಣ ಗತಿರನ್ಯಾ ನ ದೃಶ್ಯತೇ ॥ ೧೫೨
ತಥೇತಿ ನಿಶ್ಚಯಂ ಕೃತ್ವಾ ಪಶ್ಚಿಮೇ ಪ್ರಹರೇ ನಿಶಿ ।
ಶರ್ವವರ್ಮಾ ನಿರಾಹಾರಸ್ತತ್ರೈವ ಪ್ರಸ್ಥಿತೋಽಭವತ್ ॥ ೧೫೩
ತಚ್ಚ ಚಾರಮುಖಾದ್ ಬುದ್ಧ್ವಾ ಮಯಾ ಪ್ರಾತರ್ನಿವೇದಿತಮ್ ।
ರಾಜ್ಞೇ ಸೋಽಪಿ ತದಾಕರ್ಣ್ಯ ಕಿಂ ಭವೇದಿತ್ಯಚಿಂತಯತ್ ॥ ೧೫೪
ತತಸ್ತಂ ಸಿಂಹಗುಪ್ತಾಖ್ಯೋ ರಾಜಪುತ್ರೋ ಹಿತೋಽಬ್ರವೀತ್ ।
ತ್ವಯಿ ಖಿನ್ನೇ ತದಾ ದೇವ ನಿರ್ವೇದೋ ಮೇ ಮಹಾನಭೂತ್ ॥ ೧೫೫

೧೫೬. ಆಗ ತಮ್ಮ ಶ್ರೇಯಸ್ಸಿಗಾಗಿ ಈ ನಗರದ ಆಚೆಗೆ ಹೋಗಿ ಚಂಡಿಯ ಮುಂದೆ ನನ್ನ ತಲೆಯನ್ನು ಕತ್ತರಿಸಿಕೊಳ್ಳಲು ಹೊರಟಿದ್ದೆನು.

೧೫೭. ಆಗ ಅಂತರಿಕ್ಷದಿಂದ ಬಂದ ವಾಣಿಯು 'ನಿನ್ನ ತಲೆಯನ್ನು ಕತ್ತರಿಸಿಕೊಳ್ಳ ಬೇಡ. ರಾಜನ ಇಷ್ಟಾರ್ಥವು ಸಿದ್ಧಿಸುವುದು' ಎಂದು ಹೇಳಿ ನನ್ನನ್ನು ತಡೆಯಿತು. ಆದ್ದರಿಂದ ತಮಗೆ ಸಿದ್ಧಿಯಾಗುವುದು ಎಂದು ಭಾವಿಸುತ್ತೇನೆ."

೧೫೮. ಹೀಗೆ ಹೇಳಿ ರಾಜನಿಂದ ಬೀಳ್ಕೊಟ್ಟು ಶರ್ವವರ್ಮನನ್ನು ಹಿಂಬಾಲಿಸಲು ಇಬ್ಬರು ಚಾರರನ್ನು ಕಳುಹಿಸಿಕೊಟ್ಟನು.

೧೫೯. ಆ ಶರ್ವವರ್ಮನು ಕೇವಲ ಗಾಳಿಯನ್ನೇ ಆಹಾರವಾಗಿ ಸೇವಿಸುತ್ತಾ ದೃಢತೆಯಿಂದ ಮೌನವನ್ನಾಶ್ರಯಿಸಿ ಸ್ವಾಮಿಕುಮಾರನ ಬಳಿಗೆ ಹೋಗಿ ತಲುಪಿದನು.

೧೬೦. ಶರೀರದ ಬಗೆಗೆ ಲಕ್ಷ್ಯವನ್ನಿಡದೆ ಮಾಡಿದ ಅವನ ತಪಸ್ಸಿನಿಂದ ಸಂತುಷ್ಟನಾದ ಕಾರ್ತಿಕೇಯನು ಶರ್ವವರ್ಮನ ಅಪೇಕ್ಷೆಯಂತೆ ಅನುಗ್ರಹವನ್ನು ಮಾಡಿದನು.

೧೬೧. ಸಿಂಹಗುಪ್ತನು ಕಳುಹಿಸಿದ್ದ ಇಬ್ಬರು ಚಾರರು ಮುಂದೆ ಬಂದು ರಾಜನಿಗೆ ಶರ್ವವರ್ಮನ ಸಾಫಲ್ಯದ ವಿಷಯವನ್ನು ಹೇಳಿದರು.

೧೬೨. ಮೇಘವನ್ನು ನೋಡಿದ ಹಂಸ ಚಾತಕಪಕ್ಷಿಗಳಿಗಾಗುವಂತೆ ಆ ಮಾತನ್ನು ಕೇಳಿದ ನನಗೂ ರಾಜನಿಗೂ ಕ್ರಮವಾಗಿ ವಿಷಾದವೂ ಹರ್ಷವೂ ಉಂಟಾದುವು.

---

ತತಃ ಶ್ರೇಯೋನಿಮಿತ್ತಂ ತೇ ಚಂಡಿಕಾಗ್ರೇ ನಿಜಂ ಶಿರಃ ।
ಛೇತ್ತುಂ ಪ್ರಾರಬ್ಧವಾನಸ್ಮಿ ಗತ್ವಾಸ್ಮಾನ್ನಗರಾದ್ ಬಹಿಃ ॥ ೧೫೬
ಮೈವಂ ಕೃಥಾ ನೃಪಸ್ಯೇಚ್ಛಾ ಸೇತ್ಸ್ಯತ್ಯೇವೇತ್ಯವಾರಯತ್ ।
ವಾಗಂತರಿಕ್ಷಾದಥ ಮಾಂ ತನ್ಮನ್ಯೇ ಸಿದ್ಧಿರಸ್ತಿ ತೇ ॥ ೧೫೭
ಇತ್ಯುಕ್ತ್ವಾ ನೃಪಮಾಮಂತ್ರ್ಯ ಸತ್ವರಂ ಶರ್ವವರ್ಮಣಃ ।
ಪಶ್ಚಾಚ್ಚಾರದ್ವಯಂ ಸೋಽಥ ಸಿಂಹಗುಪ್ತೋ ವ್ಯಸರ್ಜಯತ್ ॥ ೧೫೮
ಸೋಽಪಿ ವಾತೈಕಭಕ್ಷಃಸನ್ ಕೃತಮೌನಃ ಸುನಿಶ್ಚಯಃ ।
ಪ್ರಾಪ ಸ್ವಾಮಿಕುಮಾರಸ್ಯ ಶರ್ವವರ್ಮಾಂತಿಕಂ ಕ್ರಮಾತ್ ॥ ೧೫೯
ಶರೀರನಿರಪೇಕ್ಷೇಣ ತಪಸಾ ತತ್ರ ತೋಷಿತಃ ।
ಪ್ರಸಾದಮಕರೋತ್ತಸ್ಯ ಕಾರ್ತಿಕೇಯೋ ಯಥೇಪ್ಸಿತಮ್ ॥ ೧೬೦
ಆಗತ್ಯಾಗ್ರೇ ತತೋ ರಾಜ್ಞೇ ಚಾರಾಭ್ಯಾಂ ಸ ನಿವೇದಿತಃ ।
ಸಿಂಹಗುಪ್ತವಿಸೃಷ್ಟಾಭ್ಯಾಮುದಯಃ ಶರ್ವವರ್ಮಣಃ ॥ ೧೬೧
ತಚ್ಛ್ರುತ್ವಾ ಮಮ ರಾಜ್ಞಶ್ಚ ವಿಷಾದಪ್ರಮದೌ ದ್ವಯೋಃ ।
ಅಭೂತಾಂ ಮೇಘಮಾಲೋಕ್ಯ ಹಂಸಚಾತಕಯೋರಿವ ॥ ೧೬೨

೧೬೩. ಕುಮಾರನು ನೀಡಿದ ವರಸಿದ್ಧಿಯನ್ನು ಪಡೆದ ಶರ್ವವರ್ಮನು ಅನಂತರ ಬಂದು ರಾಜನಿಗೆ ಚಿಂತನೆಯಿಂದಲೇ ಉಪಸ್ಥಿತವಾಗುವಂತೆ ಎಲ್ಲ ವಿದ್ಯೆಗಳನ್ನೂ ಕೊಟ್ಟನು.

೧೬೪. ಆ ಕ್ಷಣದಲ್ಲೇ ಆ ವಿದ್ಯೆಗಳೆಲ್ಲ ಸಾತವಾಹನರಾಜನಿಗೆ ಸಿದ್ಧಿಸಿದುವು. ಪರಮೇಶ್ವರನ ಅನುಗ್ರಹವು ಏನನ್ನು ತಾನೆ ಮಾಡಲಾರದು ?

೧೬೫. ರಾಜನಿಗೆ ಸಕಲವಿದ್ಯೆಗಳ ಪ್ರಾಪ್ತಿಯುಂಟಾಯಿತು ಎಂಬುದನ್ನು ಕೇಳಿ ಆನಂದಿಸಿದ ರಾಷ್ಟ್ರದಲ್ಲಿ ಉತ್ಸವವು ನಡೆಯಿತು. ಪ್ರತಿಯೊಂದು ಮನೆಯಲ್ಲೂ ಕೂಡಲೇ ಬಾವುಟಗಳನ್ನು ಹಾರಿಸಲಾಯಿತು. ಅವುಗಳು ಗಾಳಿಗೆ ಓಲಾಡುತ್ತಾ ನೃತ್ಯವನ್ನು ಮಾಡುತ್ತಿರುವಂತಿದ್ದುವು.

೧೬೬ ಶರ್ವವರ್ಮನು ಗುರು ಎಂಬ ಭಾವನೆಯಿಂದ ರಾಜನು ರಾಜೋಚಿತವಾದ ರತ್ನರಾಶಿಗಳಿಂದ ಪೂಜಿಸಿದನು. ಅಲ್ಲದೆ ನರ್ಮದಾನದಿಯ ದಡದ ಸಮೀಪದಲ್ಲಿರುವ ಮರುಕಚ್ಛ ಎಂಬ ಹೆಸರಿನ ದೇಶಕ್ಕೆ ಶರ್ವವರ್ಮನನ್ನೇ ರಾಜನನ್ನಾಗಿ ಮಾಡಿದನು.

---

ಆಗತ್ಯ ಶರ್ವವರ್ಮಾಥ ಕುಮಾರವರಸಿದ್ಧಿಮಾನ್ ।
ಚಿಂತಿತೋಪಸ್ಥಿತಾ ರಾಜ್ಞೇ ಸರ್ವಾ ವಿದ್ಯಾಃ ಪ್ರದತ್ತವಾನ್ ॥ ೧೬೩
ಪ್ರಾದುರಾಸಂಶ್ಚ ತಾಸ್ತಸ್ಯ ಸಾತವಾಹನಭೂಪತೇಃ ।
ತತ್ಕ್ಷಣಂ ಕಿಂ ನ ಕುರ್ಯಾದ್ಧಿ ಪ್ರಸಾದಃ ಪಾರಮೇಶ್ವರಃ ॥ ೧೬೪
ಅಥ ತಮಖಿಲವಿದ್ಯಾಲಾಭಮಾಕರ್ಣ್ಯ ರಾಜ್ಞಃ
ಪ್ರಮುದಿತವತಿ ರಾಷ್ಟ್ರೇ ತತ್ರ ಕೋಽಪ್ಯುತ್ಸವೋಽಭೂತ್ ।
ಅಪಿ ಪವನವಿಧೂತಾಸ್ತತ್ಕ್ಷಣೋಲ್ಲಾಸ್ಯಮಾನಾಃ
ಪ್ರತಿವಸತಿ ಪತಾಕಾ ಬದ್ಧನೃತ್ತಾ ಇವಾಸನ್ ॥ ೧೬೫
ರಾಜಾರ್ಹರತ್ನನಿಚಯೈರಥ ಶರ್ವವರ್ಮಾ
ತೇನಾರ್ಚಿತೋ ಗುರುರಿತಿ ಪ್ರಣತೇನ ರಾಜ್ಞಾ ।
ಸ್ವಾಮೀಕೃತಶ್ಚ ವಿಷಯೇ ಮರುಕಚ್ಛನಾಮ್ನಿ
ಕೂಲೋಪಕಂಠವಿನಿವೇಶಿನಿ ನರ್ಮದಾಯಾಃ ॥ ೧೬೬

೧೬೭ ಚಾರರ ಮೂಲಕ ಕುಮಾರಸ್ವಾಮಿಯು ವರಗಳನ್ನು ನೀಡಿದ ವೃತ್ತಾಂತವನ್ನು ತಿಳಿಸಿದ ಸಿಂಹಗುಪ್ತನನ್ನು ರಾಜನು ಸಂತೋಷದಿಂದ ತನಗೆ ಸಮಾನನಾದ ದೊರೆಯನ್ನಾಗಿ ಮಾಡಿದನು. ತನಗೆ ವಿದ್ಯೆಗಳು ಬರಲು ಕಾರಣಳಾದ ವಿಷ್ಣುಶಕ್ತಿಯ ಮಗಳಾಗಿದ್ದ ರಾಣಿಯನ್ನು ಒತ್ತಾಯಪೂರ್ವಕವಾಗಿ ಉಳಿದ ಎಲ್ಲ ರಾಣಿಯರಿಗಿಂತ ಮೇಲ್ದರ್ಜೆಗೆ ಏರಿಸಿ ತಾನೇ ಪ್ರೀತಿಯಿಂದ ಅಭಿಷೇಕ ಮಾಡಿದನು.

ಮಹಾಕವಿ ಸೋಮದೇವಭಟ್ಟನು ರಚಿಸಿದ

ಕಥಾಸರಿತ್ಸಾಗರದ ಕಥಾಪೀಠಲಂಬಕದಲ್ಲಿ

ಆರನೆಯ ತರಂಗವು ಮುಗಿಯಿತು.

---

ಯೋಽಗ್ರೇ ಚಾರಮುಖೇನ ಷಣ್ಮುಖವರಪ್ರಾಪ್ತಿಂ ಸಮಾಕರ್ಣಯತ್
ಸಂತುಷ್ಯಾತ್ಮಸಮಂ ಶ್ರಿಯಾ ನರಪತಿಸ್ತಂ ಸಿಂಹಗುಪ್ತಂ ವ್ಯಧಾತ್ ।
ರಾಜ್ಞೀಂ ತಾಮಪಿ ವಿಷ್ಣುಶಕ್ತಿತನಯಾಂ ವಿದ್ಯಾಗಮೇ ಕಾರಣಂ
ದೇವೀನಾಮುಪರಿ ಪ್ರಸಹ್ಯ ಕೃತವಾನ್ ಪ್ರೀತ್ಯಾಭಿಷಿಚ್ಯ ಸ್ವಯಮ್ ॥ ೧೬೭

ಇತಿ ಮಹಾಕವಿ ಶ್ರೀ ಸೋಮದೇವಭಟ್ಟವಿರಚಿತೇ

ಕಥಾಸರಿತ್ಸಾಗರೇ

ಕಥಾಪೀಠಲಂಬಕೇ ಷಷ್ಠಸ್ತರಂಗಃ ।

# ಏಳನೆಯ ತರಂಗ

೧ ಅನಂತರ ಮೌನವನ್ನಾಶ್ರಯಿಸಿದ ನಾನು ರಾಜನ ಬಳಿಗೆ ಹೋದೆನು. ಅಲ್ಲೊಬ್ಬ ಬ್ರಾಹ್ಮಣನು ತಾನೇ ರಚಿಸಿದ್ದ ಒಂದು ಶ್ಲೋಕವನ್ನು ಓದುತ್ತಿದ್ದನು.

೨ ಅವನನ್ನು ಕುರಿತು ರಾಜನು ಚೆನ್ನಾಗಿ ಸಂಸ್ಕೃತಭಾಷೆಯಲ್ಲೇ ಮಾತನಾಡಿದನು. ಅದನ್ನು ನೋಡಿ ಅಲ್ಲಿದ್ದ ಜನರು ತುಂಬ ಸಂತೋಷಪಟ್ಟರು.

೩ ಅನಂತರ ರಾಜನು ವಿನಯಪೂರ್ವಕವಾಗಿ ಶರ್ವವರ್ಮನಿಗೆ "ಭಗವಂತನು ನಿನಗೆ ಹೇಗೆ ಅನುಗ್ರಹವನ್ನು ಮಾಡಿದನು ಎಂಬುದನ್ನು ನೀನೇ ಹೇಳು" ಎಂದನು.

೪ ಅದನ್ನು ಕೇಳಿ ಶರ್ವವರ್ಮನು ರಾಜನಿಗೆ ತನಗಾದ ಅನುಗ್ರಹದ ಬಗೆಗೆ ಹೇಳತೊಡಗಿದನು. "ಪ್ರಭು, ನಾನು ಇಲ್ಲಿಂದ ಮೌನವನ್ನು ವಹಿಸಿ ನಿರಾಹಾರನಾಗಿ ಹೊರಟೆನು.

೫ ಇನ್ನೂ ಸ್ವಲ್ಪ ದಾರಿ ಉಳಿದಿರುವಾಗಲೇ ತೀವ್ರವಾದ ತಪಸ್ಸಿನಿಂದ ಕೃಶನಾಗಿದ್ದ ನಾನು ಬಳಲಿ ಬೆಂಡಾಗಿ ಅರಿವನ್ನು ಕಳೆದುಕೊಂಡು ನೆಲದ ಮೇಲೆ ಬಿದ್ದುಬಿಟ್ಟೆನು.

---

# ಸಪ್ತಮಸ್ತರಂಗಃ

ತತೋ ಗೃಹೀತಮೌನೋಽಹಂ ರಾಜಾಂತಿಕಮುಪಾಗಮಮ್ ।
ತತ್ರ ಚ ಶ್ಲೋಕಮಪಠದ್ ದ್ವಿಜಃ ಕಶ್ಚಿತ್ ಸ್ವಯಂಕೃತಮ್ ॥ ೧
ತಂ ಚಾಚಷ್ಟ ಸ್ವಯಂ ರಾಜಾ ಸಮ್ಯಕ್ ಸಂಸ್ಕೃತಯಾ ಗಿರಾ ।
ತತ್ರಾಲೋಕ್ಯ ಚ ತತ್ರಸ್ಥೋ ಜನಃ ಪ್ರಮುದಿತೋಽಭವತ್ ॥ ೨
ತತಃ ಸ ಶರ್ವವರ್ಮಾಣಂ ರಾಜಾ ಸುವಿನಯೋಽಬ್ರವೀತ್ ।
ಸ್ವಯಂ ಕಥಯ ದೇವೇನ ಕಥಂ ತೇಽನುಗ್ರಹಃ ಕೃತಃ ॥ ೩
ತಚ್ಛ್ರುತ್ವಾನುಗ್ರಹಂ ರಾಜ್ಞೇ ಶರ್ವವರ್ಮಾಭ್ಯಭಾಷತ ।
ಇತೋ ರಾಜನ್ನಿರಾಹಾರೋ ಮೌನಸ್ಥೋಽಹಂ ತದಾ ಗತಃ ॥ ೪
ತತೋಽಧ್ವನಿ ಮನಾಕ್‌ಶೇಷೇ ಜಾತೇ ತೀವ್ರತಪಃಕೃಶಃ ।
ಕ್ಲಾಂತಃ ಪತಿತವಾನಸ್ಮಿ ನಿಃಸಂಜ್ಞೋ ಧರಣೀತಲೇ ॥ ೫

೬ "ಮಗು, ಎದ್ದೇಳು, ನಿನ್ನ ಇಷ್ಟಾರ್ಥವೆಲ್ಲವೂ ಸಿದ್ಧಿಸುವುದು' ಎಂದು ಶಕ್ತ್ಯಾಯುಧವನ್ನು ಕೈಯಲ್ಲಿ ಹಿಡಿದಿದ್ದ ಪುರುಷನೊಬ್ಬನು ನನಗೆ ಹೇಳಿದಂತೆ ಭಾಸವಾಯಿತು.

೭ ಅದರಿಂದ ನಾನು ಅಮೃತದ ಧಾರೆಗಳಿಂದ ನೆನೆಸಲ್ಪಟ್ಟವನಂತೆ ಎಚ್ಚರವನ್ನು ಹೊಂದಿ ಹಸಿವು, ಬಾಯಾರಿಕೆ ಇತ್ಯಾದಿ ಬಾಧೆಗಳಿಲ್ಲದವನಾಗಿ ಸ್ವಸ್ಥನಂತೆ ಆದೆನು.

೮ ಅನಂತರ ಭಗವಂತನ ಆಲಯದ ಬಳಿಗೆ ತಲುಪಿ ಭಕ್ತಿಭಾವದಿಂದ ತುಂಬಿ, ಸ್ನಾನಮಾಡಿ ಉತ್ಕಂಠಿತವಾದ ಮನಸ್ಸಿನಿಂದ ಗರ್ಭಗುಡಿಯನ್ನು ಪ್ರವೇಶಿಸಿದೆನು.

೯. ಅಲ್ಲಿ ಒಳಗೆ ಪ್ರಭು ಸ್ಕಂದನು ನನಗೆ ದರ್ಶನವನ್ನಿತ್ತನು. ಆಗ ನನ್ನ ಬಾಯೊಳಕ್ಕೆ ಸರಸ್ವತಿಯೇ ಮೂರ್ತಿಮತ್ತಾಗಿ ಪ್ರವೇಶಿಸಿದಳು.

೧೦. ಅನಂತರ ಭಗವಾನ್ ಸ್ಕಂದನು ಸಾಕ್ಷಾತ್ ತನ್ನ ಆರು ಮುಖಕಮಲಗಳಿಂದ 'ಸಿದ್ಧೋ ವರ್ಣಸಮಾಮ್ನಾಯ:' (ವರ್ಣಮಾಲೆ ಲೋಕಪ್ರಸಿದ್ಧವಾಗಿದೆ) ಎಂಬ ಸೂತ್ರವನ್ನು ಹೇಳಿದನು.

೧೧. ಅದನ್ನು ಕೇಳಿದಕೂಡಲೇ, ಅಯ್ಯೋ, ಮನುಷ್ಯರಿಗೆ ಸಹಜವಾದ ಚಾಪಲ್ಯದಿಂದ ಮುಂದಿನ ಸೂತ್ರವನ್ನು ಊಹಿಸಿ ನಾನೇ ಹೇಳಿಬಿಟ್ಟೆನು.

೧೨. ಆಗ ಭಗವಂತನಿಂತೆಂದನು. ನೀನು ಮಾತನಾಡದೆ ಇದ್ದಿದ್ದರೆ ಈ ಶಾಸ್ತ್ರವು ಪಾಣಿನಿಯ ವ್ಯಾಕರಣಶಾಸ್ತ್ರವನ್ನೂ ಮೀರಿಸುವುದಾಗುತ್ತಿತ್ತು.

---

ಉತ್ತಿಷ್ಠ ಪುತ್ರ ಸರ್ವಂ ತೇ ಸಂಪತ್ಸ್ಯತ ಇತಿ ಸ್ಫುಟಮ್ ।
ಶಕ್ತಿಹಸ್ತಃ ಪುಮಾನೇತ್ಯ ಜಾನೇ ಮಾಮಬ್ರವೀತ್ತದಾ ॥ ೬
ತೇನಾಹಮಮೃತಾಸಾರಸಂಸಿಕ್ತ ಇವ ತತ್ಕ್ಷಣಮ್ ।
ಪ್ರಬುದ್ಧಃ ಕ್ಷುತ್ಪಿಪಾಸಾದಿಹೀನಃ ಸ್ವಸ್ಥ ಇವಾಭವಮ್॥ ೭
ಅಥ ದೇವಸ್ಯ ನಿಕಟಂ ಪ್ರಾಪ್ಯ ಭಕ್ತಿಭರಾಕುಲಃ ।
ಸ್ನಾತ್ವಾ ಗರ್ಭಗೃಹಂ ತಸ್ಯ ಪ್ರವಿಷ್ಟೋಽಭೂವಮುನ್ಮನಾಃ ॥ ೮
ತತೋಽಂತಃ ಪ್ರಭುಣಾ ತೇನ ಸ್ಕಂದೇನ ಮಮ ದರ್ಶನಮ್ ।
ದತ್ತಂ ತತಃ ಪ್ರವಿಷ್ಟಾ ಮೇ ಮುಖೇ ಮೂರ್ತಾ ಸರಸ್ವತೀ ॥ ೯
ಅಥಾಸೌ ಭಗವಾನ್ ಸಾಕ್ಷಾತ್ ಷಡ್ಭಿರಾನನಪಂಕಜೈಃ ।
ಸಿದ್ಧೋ ವರ್ಣಸಮಾಮ್ನಾಯ ಇತಿ ಸೂತ್ರಮುದೈರಯತ್ ॥ ೧೦
ತಚ್ಛ್ರುತ್ವೈವ ಮನುಷ್ಯತ್ವಸುಲಭಾಚ್ಚಾಪಲಾದ್ ಬತ ।
ಉತ್ತರಂ ಸೂತ್ರಮಭ್ಯೂಹ್ಯ ಸ್ವಯಮೇವ ಮಯೋದಿತಮ್ ॥ ೧೧
ಅಥಾಬ್ರವೀತ್ ಸ ದೇವೋ ಮಾಂ ನಾವದಿಷ್ಯಃ ಸ್ವಯಂ ಯದಿ ।
ಅಭವಿಷ್ಯದಿದಂ ಶಾಸ್ತ್ರಂ ಪಾಣಿನೀಯೋಪಮರ್ದಕಮ್ ॥ ೧೨

೧೩. ಈಗ ಸಣ್ಣ ಪ್ರಮಾಣದ ಶಾಸ್ತ್ರವಾದುದರಿಂದ 'ಕಾತಂತ್ರ' ಎಂಬ ಹೆಸರನ್ನು ಪಡೆಯುವುದು. ಹಾಗೂ ನನ್ನ ವಾಹನವಾದ ನವಿಲಿನ ಕಲಾಪದ (ವಿಸ್ತಾರವಾದ ರೆಕ್ಕೆಪುಕ್ಕಗಳ) ಹೆಸರಿನಿಂದ 'ಕಾಲಾಪಕ' ಎಂದೂ ಪ್ರಸಿದ್ಧವಾಗುವುದು.

೧೪. ಇಷ್ಟನ್ನು ಹೇಳಿ ಆ ದೇವನು ಹೊಸದಾದ ಮತ್ತು ಚಿಕ್ಕದಾದ ವ್ಯಾಕರಣವನ್ನು ಪ್ರಕಾಶಗೊಳಿಸಿ ಸಾಕ್ಷಾತ್ತಾಗಿ ನನಗೆ ಮತ್ತೆ ಹೀಗೆ ಹೇಳಿದನು.

೧೫. ನಿಮ್ಮ ರಾಜನೂ ಹಿಂದಿನ ಜನ್ಮದಲ್ಲಿ ಭರದ್ವಾಜಮುನಿಯ ಶಿಷ್ಯನಾಗಿದ್ದು ಕೃಷ್ಣನೆಂಬ ಹೆಸರಿನಿಂದ ತಪಸ್ವಿಯಾಗಿ ಬಾಳಿದ್ದ ಋಷಿ.

೧೬. ಒಮ್ಮೆ ಅವನು ಒಬ್ಬ ಮುನಿಕನ್ಯೆಯನ್ನು ನೋಡಿದನು. ಅವಳೂ ಅವನಲ್ಲಿ ಅಭಿಲಾಷೆಯನ್ನು ತೋರಿಸಿದಾಗ ಕೂಡಲೇ ಮನ್ಮಥನ ಬಾಣಗಳ ಹೊಡೆತದ ಸವಿಯನ್ನು ಅವನೂ ಅರಿತನು.

೧೭. ಆಗ ಋಷಿಗಳಿಂದ ಶಪ್ತನಾಗಿ ಈಗ ಇಲ್ಲಿ ಅವತರಿಸಿದ್ದಾನೆ. ಆ ಮುನಿಕನ್ಯೆಯೂ ಅವನ ರಾಣಿಯಾಗಿ ಅವತರಿಸಿದ್ದಾಳೆ.

೧೮. ಈ ರೀತಿಯಾಗಿ ಸಾತವಾಹನನು ಋಷಿಯ ಅವತಾರ. ನಿನ್ನನ್ನು ನೋಡಿದ ಕೂಡಲೇ ನಿನ್ನ ಅಭೀಷ್ಟದಂತೆ ಅವನು ಎಲ್ಲ ವಿದ್ಯೆಗಳನ್ನೂ ಪಡೆಯುವನು.

---

ಅಧುನಾ ಸ್ವಲ್ಪತಂತ್ರತ್ವಾತ್ ಕಾತಂತ್ರಾಖ್ಯಂ ಭವಿಷ್ಯತಿ ।
ಮದ್ವಾಹನಕಲಾಪಸ್ಯ ನಾಮ್ನಾ ಕಾಲಾಪಕಂ ತಥಾ ॥ ೧೩

ಇತ್ಯುಕ್ತ್ವಾ ಶಬ್ದಶಾಸ್ತ್ರಂ ತತ್ ಪ್ರಕಾಶ್ಯಾಭಿನವಂ ಲಘು ।
ಸಾಕ್ಷಾದೇವ ಸ ಮಾಂ ದೇವಃ ಪುನರೇವಮಭಾಷತ ॥ ೧೪

ಯುಷ್ಮದೀಯಃ ಸ ರಾಜಾಪಿ ಪೂರ್ವಜನ್ಮನ್ಯಭೂದೃಷಿಃ ।
ಭರದ್ವಾಜಮುನೇಃ ಶಿಷ್ಯಃ ಕೃಷ್ಣಸಂಜ್ಞೋ ಮಹಾತಪಾಃ ॥ ೧೫

ತುಲ್ಯಾಭಿಲಾಷಾಮಾಲೋಕ್ಯ ಸ ಚೈಕಾಂ ಮುನಿಕನ್ಯಕಾಮ್ ।
ಯಯಾವಕಸ್ಮಾತ್ ಪುಷ್ಪೇಷುಶರಘಾತರಸಜ್ಞತಾಮ್ ॥ ೧೬

ಅತಃ ಸ ಶಪ್ತೋ ಮುನಿಭಿರವತೀರ್ಣ ಇಹಾಧುನಾ ।
ಸಾ ಚಾವತೀರ್ಣಾ ದೇವೀತ್ವೇ ತಸ್ಯೈವ ಮುನಿಕನ್ಯಕಾ ॥ ೧೭

ಇತ್ಥಮೃಷ್ಯವತಾರೋಽಯಂ ನೃಪತಿಃ ಸಾತವಾಹನಃ ।
ದೃಷ್ಟೇ ತ್ವಯ್ಯಖಿಲಾ ವಿದ್ಯಾಃ ಪ್ರಾಪ್ಸ್ಯತ್ಯೇವ ತ್ವದಿಚ್ಛಯಾ ॥ ೧೮

೧೯. ಮಹಾತ್ಮರಿಗೆ ಉತ್ತಮ ವಸ್ತುಗಳೆಲ್ಲ ಕ್ಲೇಶವಿಲ್ಲದೆ ಸಿಗುತ್ತವೆ, ಏಕೆಂದರೆ ಅವುಗಳನ್ನು ಅವರು ಪೂರ್ವಜನ್ಮಗಳಲ್ಲೇ ಗಳಿಸಿಕೊಂಡಿರುತ್ತಾರೆ. ದೃಢವಾದ ಸಂಸ್ಕಾರಗಳ ಫಲವಾಗಿ ಸಿದ್ಧಿಗಳು ಅವರಿಗೆ ತಾವಾಗಿ ಬಂದು ಒದಗುತ್ತವೆ.

೨೦. ಇಷ್ಟು ಹೇಳಿ ಭಗವಂತನು ಅಂತರ್ಧಾನವನ್ನು ಹೊಂದಲು ನಾನು ಹೊರಗೆ ಬಂದೆನು. ದೇವಸ್ಥಾನದಿಂದ ಜೀವಿಕೆಯನ್ನು ಪಡೆಯುತ್ತಿದ್ದ ಜನರು ನನಗೆ ಅಕ್ಕಿಯನ್ನು ಕೊಟ್ಟರು.

೨೧. ಅಲ್ಲಿಂದ ನಾನು ಹಿಂದಿರುಗಿದೆನು. ರಾಜನೆ ! ಆಶ್ಚರ್ಯ ! ನಾನು ದಾರಿಯಲ್ಲಿ ಆ ಅಕ್ಕಿಯನ್ನು ಪ್ರತಿದಿನ ತಿನ್ನಲು ಉಪಯೋಗಿಸುತ್ತಿದ್ದರೂ ಅದು ಅಷ್ಟೇ ಇದ್ದಿತು. (ಕಡಿಮೆಯಾಗಲೇ ಇಲ್ಲ)."

೨೨. ಹೀಗೆ ತನ್ನ ವೃತ್ತಾಂತವನ್ನು ಹೇಳಿ ಶರ್ವವರ್ಮನು ವಿರಮಿಸಲಾಗಿ ಹರ್ಷಪೂರ್ಣನಾಗಿದ್ದ ಸಾತವಾಹನನು ಸ್ನಾನ ಮಾಡಲು ಎದ್ದನು.

೨೩–೨೪. ನಾನಂತೂ ಮೌನ ವಹಿಸಿದ್ದುದರಿಂದ ವ್ಯವಹಾರಗಳಿಂದ ಬಹಿಷ್ಕೃತನಾಗಿದ್ದೆ. ರಾಜನಿಗೆ ಇಷ್ಟವಿಲ್ಲದಿದ್ದರೂ ಕೇವಲ ನಮಸ್ಕಾರದಿಂದ ಅವನಿಂದ ಬೀಳ್ಕೊಂಡು ಆ ನಗರದಿಂದ ಆಚೆಗೆ ಬಂದು ತಪಸ್ಸಿಗೆ ಹೋಗಲು ನಿಶ್ಚಯಿಸಿ ಇಬ್ಬರು ಶಿಷ್ಯರೊಡನೆ ವಿಂಧ್ಯವಾಸಿನಿಯ ದರ್ಶನಕ್ಕಾಗಿ ಬಂದೆನು.

---

ಅಕ್ಲೇಶಲಭ್ಯಾ ಹಿ ಭವಂತ್ಯುತ್ತಮಾರ್ಥಾ ಮಹಾತ್ಮನಾಮ್ ।
ಜನ್ಮಾಂತರಾರ್ಜಿತಾಃ ಸ್ಫಾರಸಂಸ್ಕಾರಾಕ್ಷಿಪ್ತಸಿದ್ಧಯಃ ॥ ೧೯
ಇತ್ಯುಕ್ತ್ವಾಂತರ್ಹಿತೇ ದೇವೇ ನಿರಗಚ್ಛಮಹಂ ಬಹಿಃ ।
ತಂಡುಲಾ ಮೇ ಪ್ರದಾತ್ತಾಶ್ಚ ತತ್ರ ಜೀವೋಪಜೀವಿಭಿಃ ॥ ೨೦
ತತೋ಼ಹಮಾಗತೋ ರಾಜಂಸ್ತಂಡುಲಾಸ್ತೇ ಚ ಮೇ ಪಥಿ ।
ಚಿತ್ರಂ ತಾವಂತ ಏವಾಸನ್ ಭುಜ್ಯಮಾನಾ ದಿನೇದಿನೇ ॥ ೨೧
ಏವಮುಕ್ತ್ವಾ ಸ್ವವೃತ್ತಾಂತಂ ವಿರತೇ ಶರ್ವವರ್ಮಣಿ ।
ಉದತಿಷ್ಠನ್ನೃಪಃ ಸ್ನಾತುಂ ಪ್ರಹೃಷ್ಟಃ ಸಾತವಾಹನಃ ॥ ೨೨
ತತೋ಼ಹಂ ಕೃತಮೌನತ್ವಾದ್ ವ್ಯವಹಾರಬಹಿಷ್ಕೃತಃ ।
ಅನಿಚ್ಛಂತಂ ತಮಾಮಂತ್ರ್ಯ ಪ್ರಣಾಮೇನೈವ ಭೂಪತಿಮ್ ॥ ೨೩
ನಿರ್ಗತ್ಯ ನಗರಾತ್ತಸ್ಮಾಚ್ಛಿಷ್ಯದ್ವಯಸಮನ್ವಿತಃ ।
ತಪಸೇ ನಿಶ್ಚಿತೋ ದ್ರಷ್ಟುಮಾಗತೋ ವಿಂಧ್ಯವಾಸಿನೀಮ್ ॥ ೨೪

೨೫. ಆ ದೇವಿಯು ಸ್ವಪ್ನದಲ್ಲಿ ನೀಡಿದ ಆಣತಿಯಂತೆ ಅಲ್ಲಿಂದ ಹೊರಟು ನಿನ್ನನ್ನು ನೋಡುವುದಕ್ಕಾಗಿ ಈ ಭಯಂಕರವಾದ ವಿಂಧ್ಯಾಟವಿಯನ್ನು ಪ್ರವೇಶಿಸಿದೆನು.

೨೬. ಬೇಡರು ಹೇಳಿದ ಮಾತಿನಂತೆ ನಡೆದು ಹೇಗೋ ಸುದೈವದಿಂದ ಸಾರ್ಥವೊಂದನ್ನು ಸೇರಿಕೊಂಡು ಇಲ್ಲಿಗೆ ಬಂದು ಬಹು ಸಂಖ್ಯೆಯಲ್ಲಿದ್ದ ಈ ಪಿಶಾಚಗಳನ್ನು ನೋಡಿದೆನು.

೨೭. ಈ ಪಿಶಾಚಗಳು ಪರಸ್ಪರವಾಗಿ ಆಡುತ್ತಿದ್ದ ಮಾತುಗಳನ್ನು ದೂರದಿಂದಲೇ ಕೇಳಿ ಪಿಶಾಚಭಾಷೆಯನ್ನು ನಾನು ಕಲಿತುಕೊಂಡೆನು. ಅದು ನಾನು ಮೌನವನ್ನು ಮುರಿಯಲು ಕಾರಣವಾಯಿತು.

೨೮. ಇಲ್ಲಿಗೆ ಬಂದಮೇಲೆ ನೀನು ಉಜ್ಜಯನಿಗೆ ತೆರಳಿರುವುದನ್ನು ಕೇಳಿ ನೀನು ಹಿಂದಿರುಗಿ ಬರುವವರೆಗೂ ಕಾದುಕೊಂಡಿದ್ದೆನು.

೨೯. ನಿನ್ನನ್ನು ನೋಡಿ ನಾಲ್ಕನೆಯದಾದ ಭೂತಭಾಷೆಯಿಂದ ನಿನಗೆ ಸ್ವಾಗತವನ್ನು ಹೇಳಿದುದರಿಂದ ನನಗೆ ಪೂರ್ವಜನ್ಮವು ನೆನಪಿಗೆ ಬಂದಿತು. ಇದಿಷ್ಟು ಈ ಜನ್ಮದಲ್ಲಿ ನನ್ನ ವೃತ್ತಾಂತ.

೩೦. ಹೀಗೆ ಗುಣಾಢ್ಯನು ಹೇಳಿದಾಗ ಕಾಣಭೂತಿಯು ಹೀಗೆಂದನು. ""ಇಂದು ರಾತ್ರಿ ನೀನು ಬರುವೆಯೆಂಬುದು ನನಗೆ ಹೇಗೆ ತಿಳಿಯಿತೆಂಬುದನ್ನು ಕೇಳು.

---

ಸ್ವಪ್ನಾದೇಶೇನ ದೇವ್ಯಾ ಚ ತಯೈವ ಪ್ರೇಷಿತಸ್ತತಃ ।
ವಿಂಧ್ಯಾಟವೀಂ ಪ್ರವಿಷ್ಟೋಽಹಂ ತ್ವಾಂ ದ್ರಷ್ಟುಂ ಭೀಷಣಾಮಿಮಾಮ್ ॥ ೨೫
ಪುಲಿಂದವಾಕ್ಯಾದಾಸಾದ್ಯ ಸಾರ್ಥಂ ದೈವಾತ್ ಕಥಂಚನ ।
ಇಹ ಪ್ರಾಪ್ತೋಽಹಮದ್ರಾಕ್ಷಂ ಪಿಶಾಚಾನ್ ಸುಬಹೂನಮೂನ್ ॥ ೨೬
ಅನ್ಯೋನ್ಯಾಲಾಪಮೇತೇಷಾಂ ದೂರಾದಾಕರ್ಣ್ಯ ಶಿಕ್ಷಿತಾ ।
ಮಯಾ ಪಿಶಾಚಭಾಷೇಯಂ ಮೌನಮೋಕ್ಷಸ್ಯ ಕಾರಣಮ್ ॥ ೨೭
ಉಪಗಮ್ಯ ತತಶ್ಚೈತಾಂ ತ್ವಾಂ ಶ್ರುತ್ವೋಜ್ಜಯಿನೀಗತಮ್ ।
ಪ್ರತಿಪಾಲಿತವಾನಸ್ಮಿ ಯಾವದಭ್ಯಾಗತೋ ಭವಾನ್ ॥ ೨೮
ದೃಷ್ಟ್ವಾ ತ್ವಾಂ ಸ್ವಾಗತಂ ಕೃತ್ವಾ ಚತುರ್ಥ್ಯಾ ಭೂತಭಾಷಯಾ ।
ಮಯಾ ಜಾತಿಃ ಸ್ಮೃತೇತ್ಯೇಷ ವೃತ್ತಾಂತೋ ಮೇಽತ್ರ ಜನ್ಮನಿ ॥ ೨೯
ಏವಮುಕ್ತೇ ಗುಣಾಢ್ಯೇನ ಕಾಣಭೂತಿರುವಾಚ ತಮ್ ।
ತ್ವದಾಗಮೋ ಮಯಾ ಜ್ಞಾತೋ ಯಥಾದ್ಯ ನಿಶಿ ತಚ್ಛೃಣು ॥ ೩೦

೩೧. ದಿವ್ಯದೃಷ್ಟಿಯುಳ್ಳ ಭೂತಿವರ್ಮನೆಂಬ ರಾಕ್ಷಸನು ನನ್ನ ಮಿತ್ರ. ಅವನ ವಾಸಸ್ಥಾನವಾದ ಉದ್ಯಾನವು ಉಜ್ಜಯಿನಿಯಲ್ಲಿದೆ. ಅಲ್ಲಿಗೆ ನಾನು ಹೋಗಿದ್ದೆನು.

೩೨. ಅಲ್ಲಿ ನನ್ನ ಶಾಪವಿಮೋಚನೆಯ ಬಗೆಗೆ ಕೇಳಿದಾಗ ಭೂತಿವರ್ಮನು ಹೇಳಿದನು. ""ಹಗಲಿನಲ್ಲಿ ನಮಗೆ ಯಾವ ಶಕ್ತಿಯೂ ಇಲ್ಲ. ನೀನು ಇಲ್ಲೇ ಇದ್ದರೆ ರಾತ್ರಿಯಲ್ಲಿ ನಿನಗೆ ಹೇಳುವೆನು."

೩೩. ಆಗಬಹುದು ಎಂದು ನಾನು ಅಲ್ಲೇ ಉಳಿದುಕೊಂಡೆನು. ರಾತ್ರಿ ಆದಾಗ ಭೂತಗಳೆಲ್ಲ ಕುಣಿದು ಕುಪ್ಪಳಿಸುತ್ತಿದ್ದುವು. ಪ್ರಸಂಗವಶಾತ್ ಆ ಭೂತಗಳ ಹರ್ಷದ ಕಾರಣವೇನು ಎಂದು ನಾನು ಕೇಳಿದೆನು.

೩೪. "ಹಿಂದೆ ಬ್ರಹ್ಮನೊಡನೆ ಸಂಭಾಷಣೆಯನ್ನು ಮಾಡಿದಾಗ ಶಂಕರನು ಏನು ಹೇಳಿದ್ದನೋ ಅದನ್ನು ಹೇಳುವೆನು, ಕೇಳು' ಎಂದು ಭೂತಿವರ್ಮನು ನನಗೆ ಹೇಳಿ ಹೀಗೆ ನುಡಿದನು.

೩೫ ಯಕ್ಷ, ರಾಕ್ಷಸ ಮತ್ತು ಪಿಶಾಚರಿಗೆ ಹಗಲಿನಲ್ಲಿ ಪ್ರಭಾವವಿರುವುದಿಲ್ಲ, ಏಕೆಂದರೆ, ಅವರ ಶಕ್ತಿಯು ಸೂರ್ಯನ ಬೆಳಕಿನಿಂದ ಕುಂದಿಹೋಗಿರುತ್ತದೆ. ಆದ್ದರಿಂದ ರಾತ್ರಿಯಲ್ಲೇ ಅವರು ಹಿಗ್ಗುತ್ತಾರೆ.

೩೬ ಎಲ್ಲಿ ದೇವತೆಗಳನ್ನು ಪೂಜಿಸುವುದಿಲ್ಲವೋ, ಎಲ್ಲಿ ವಿಪ್ರರಿಗೆ ಉಚಿತವಾದ ಗೌರವವನ್ನು ನೀಡುವುದಿಲ್ಲವೋ, ಎಲ್ಲಿ ನಿಯಮಕ್ಕೆ ವಿರುದ್ಧವಾಗಿ ಊಟವನ್ನು ಮಾಡುವರೋ ಅಲ್ಲಿ ಪಿಶಾಚಾದಿಗಳು ಪ್ರಭಾವಶಾಲಿಗಳಾಗಿರುತ್ತಾರೆ.

---

ರಾಕ್ಷಸೋ ಭೂತಿವರ್ಮಾಖ್ಯೋ ದಿವ್ಯದೃಷ್ಟಿಃ ಸಖಾಸ್ತಿ ಮೇ ।
ಗತವಾನಸ್ಮಿ ಚೋದ್ಯಾನಮುಜ್ಜಯಿನ್ಯಾಂ ತದಾಸ್ಪದಮ್ ॥ ೩೧
ತತ್ರಾಸೌ ನಿಜಶಾಪಾಂತಂ ಪ್ರತಿ ಪೃಷ್ಟೋ ಮಯಾಬ್ರವೀತ್ ।
ದಿವಾ ನಾಸ್ತಿ ಪ್ರಭಾವೋ ನಸ್ತಿಷ್ಠ ರಾತ್ರೌ ವದಾಮ್ಯತಃ ॥ ೩೨
ತಥೇತಿ ಚಾಹಂ ತತ್ರಸ್ಥಃ ಪ್ರಾಪ್ತಾಯಾಂ ನಿಶಿ ವಲ್ಗತಾಮ್ ।
ತಮಪೃಚ್ಛಂ ಪ್ರಸಂಗೇನ ಭೂತಾನಾಂ ಹರ್ಷಕಾರಣಮ್ ॥ ೩೩
ಪುರಾ ವಿರಿಂಚಸಂವಾದೇ ಯದುಕ್ತಂ ಶಂಕರೇಣ ತತ್ ।
ಶೃಣು ವಚ್ಮೀತಿ ಮಾಮುಕ್ತ್ವಾ ಭೂತಿವರ್ಮಾಥ ಸೋಽಬ್ರವೀತ್ ॥ ೩೪
ದಿವಾ ನೈಷಾಂ ಪ್ರಭಾವೋಽಸ್ತಿ ಧ್ವಸ್ತಾನಾಮರ್ಕತೇಜಸಾ ।
ಯಕ್ಷರಕ್ಷಪಿಶಾಚಾನಾಂ ತೇನ ಹೃಷ್ಯಂತ್ಯಮೀ ನಿಶಿ ॥ ೩೫
ನ ಪೂಜ್ಯಂತೇ ಸುರಾ ಯತ್ರ ನ ಚ ವಿಪ್ರಾ ಯಥೋಚಿತಮ್ ।
ಭುಜ್ಯತೇಽವಿಧಿನಾ ವಾಪಿ ತತ್ರೈತೇ ಪ್ರಭವಂತಿ ಚ ॥ ೩೬

೩೭. ಮಾಂಸಭಕ್ಷಣೆಯನ್ನು ತ್ಯಜಿಸಿರುವವನು ಮತ್ತು ಪತಿವ್ರತೆಯು ಎಲ್ಲಿರುವರೋ ಅಲ್ಲಿಗೆ ಯಕ್ಷ ರಾಕ್ಷಸ ಪಿಶಾಚಾದಿಗಳು ಹೋಗುವುದಿಲ್ಲ. ಅವರು ಶುಚಿಯಾಗಿರುವವರನ್ನೂ ಶೂರರನ್ನೂ ಎಚ್ಚರದಲ್ಲಿರುವವರನ್ನೂ ಎಂದೂ ಪೀಡಿಸುವುದಿಲ್ಲ.

೩೮. ಇಷ್ಟನ್ನು ಹೇಳಿದ ಭೂತಿವರ್ಮನು ಮತ್ತೆ ಹೇಳಿದನು "" ನೀನು ಹೊರಡು, ನಿನ್ನ ಶಾಪವಿಮೋಚನೆಗೆ ಕಾರಣನಾಗುವ ಗುಣಾಢ್ಯನು ಬಂದಿದ್ದಾನೆ."

೩೯. ಅದರಂತೆ ನಾನಿಲ್ಲಿಗೆ ಬಂದೆನು. ಪ್ರಭುವಾದ ನಿನ್ನನ್ನೂ ಕಂಡೆನು. ಪುಷ್ಪದಂತನು ನನಗೆ ಹೇಳಿದ್ದ ಕಥೆಯನ್ನು ಈಗ ನಿನಗೆ ಹೇಳುವೆನು.

## ಪುಷ್ಪದಂತ - ಮಾಲ್ಯವಂತರ ಕಥೆ

೪೦. ಆದರೆ ನನಗೆ ಒಂದು ಕೌತುಕ. ಯಾವ ಕಾರಣದಿಂದ ಅವನು ಪುಷ್ಪದಂತನೆಂದೂ ನೀನು ಮಾಲ್ಯವಂತನೆಂದೂ ಪ್ರಸಿದ್ಧಿಯನ್ನು ಪಡೆದಿರಿ ? ಅದನ್ನು ಹೇಳೋಣವಾಗಲಿ."

೪೧. ಕಾಣಭೂತಿಯ ಈ ಮಾತನ್ನು ಕೇಳಿ ಗುಣಾಢ್ಯನು ಹೇಳಿದನು. ""ಗಂಗಾತೀರದಲ್ಲಿ ಬಹುಸುವರ್ಣಕ ಎಂಬ ಒಂದು ಅಗ್ರಹಾರವಿದೆ.

೪೨. ಅದರಲ್ಲಿ ಅನೇಕ ಶಾಸ್ತ್ರಗಳನ್ನು ಅರಿತಿದ್ದ ಗೋವಿಂದದತ್ತನೆಂಬ ಬ್ರಾಹ್ಮಣನಿದ್ದನು. ಪತಿಯನ್ನೇ ದೇವರೆಂದು ಭಾವಿಸಿದ್ದ ಅಗ್ನಿದತ್ತಾ ಎಂಬಾಕೆ ಅವನ ಪತ್ನಿ.

---

ಅಮಾಂಸಭಕ್ಷಃ ಸಾಧ್ವೀ ವಾ ಯತ್ರ ತತ್ರ ನ ಯಾಂತ್ಯಮೀ ।
ಶುಚೀನ್ ಶೂರಾನ್ ಪ್ರಬುದ್ಧಾಂಶ್ಚ ನಾಕ್ರಾಮಂತಿ ಕದಾಚನ ॥ ೩೭
ಇತ್ಯುಕ್ತ್ವಾ ಮೇ ಸ ತತ್ಕಾಲಂ ಭೂತಿವರ್ಮಾಬ್ರವೀತ್ ಪುನಃ ।
ಗಚ್ಛಾಗತೋ ಗುಣಾಢ್ಯಸ್ತೇ ಶಾಪಮೋಕ್ಷಸ್ಯ ಕಾರಣಮ್ ॥ ೩೮
ಶ್ರುತ್ವೈತದಾಗತಶ್ಚಾಸ್ಮಿ ತ್ವಂ ಚ ದೃಷ್ಟೋ ಮಯಾ ಪ್ರಭೋ ।
ಕಥಾಯಾಮ್ಯಧುನಾ ತಾಂ ತೇ ಪುಷ್ಪದಂತೋದಿತಾಂ ಕಥಾಮ್ ॥ ೩೯
ಕಿಂ ತ್ವೇಕಂ ಕೌತುಕಂ ಮೇಽಸ್ತಿ ಕಥ್ಯತಾಂ ಕೇನ ಹೇತುನಾ ।
ಸ ಪುಷ್ಪದಂತಸ್ತ್ವಂ ಚಾಪಿ ಮಾಲ್ಯವಾನಿತಿ ವಿಶ್ರುತಃ ॥ ೪೦
ಕಾಣಭೂತೇರಿತಿ ಶ್ರುತ್ವಾ ಗುಣಾಢ್ಯಸ್ತಮಭಾಷತ ।
ಗಂಗಾತೀರೇಽಗ್ರಹಾರೋಸ್ತಿ ನಾಮ್ನಾ ಬಹುಸುವರ್ಣಕಃ ॥ ೪೧
ತತ್ರ ಗೋವಿಂದದತ್ತಾಖ್ಯೋ ಬ್ರಾಹ್ಮಣೋಽಭೂದ್ ಬಹುಶ್ರುತಃ ।
ತಸ್ಯ ಭಾರ್ಯಾಗ್ನಿದತ್ತಾ ಚ ಬಭೂವ ಪತಿದೇವತಾ ॥ ೪೨

೪೩. ಕಾಲಕ್ರಮದಲ್ಲಿ ಆ ಬ್ರಾಹ್ಮಣನು ಪತ್ನಿಯಲ್ಲಿ ಐವರು ಪುತ್ರರನ್ನು ಪಡೆದನು. ಅವರು ರೂಪವಂತರೂ ಅಭಿಮಾನಿಗಳೂ ಆಗಿದ್ದರೂ ಮೂರ್ಖರಾಗಿದ್ದರು.

೪೪. ಒಮ್ಮೆ ಮತ್ತೊಬ್ಬ ವೈಶ್ವಾನರ (ಅಗ್ನಿದೇವ) ನಂತಿದ್ದ ವೈಶ್ವಾನರನೆಂಬ ವಿಪ್ರನು ಅವರ ಮನೆಗೆ ಅತಿಥಿಯಾಗಿ ಬಂದನು.

೪೫. ಆಗ ಗೋವಿಂದದತ್ತನು ಮನೆಯ ಹೊರಗಡೆ ದೂರದಲ್ಲಿದ್ದನು. ಅತಿಥಿಯು ಅವನ ಮಕ್ಕಳ ಬಳಿ ಬಂದು ಅಭಿವಾದನವನ್ನು ಮಾಡಿದನು.

೪೬. ಅವರು ಅವನಿಗೆ ಕೇವಲ ನಗುವಿನಿಂದ ಪ್ರತ್ಯಭಿವಾದನ ಮಾಡಿದರು. ಆಗ ಆ ಬ್ರಾಹ್ಮಣನು ಕೋಪದಿಂದ ಆ ಮನೆಯಿಂದ ಹೊರಟು ಹೋಗಲು ಸಿದ್ಧನಾದನು.

೪೭. ಆಗ ಬಂದ ಗೋವಿಂದದತ್ತನು ಸಿಟ್ಟಾಗಿದ್ದ ಬ್ರಾಹ್ಮಣನನ್ನು ಕೋಪಕ್ಕೆ ಕಾರಣವನ್ನು ಕೇಳಿದನು ಮತ್ತು ಸಾಂತ್ವನ ಮಾಡಿನು. ಆ ಬ್ರಾಹ್ಮಣೋತ್ತಮನಾದರೋ ಹೀಗೆಂದನು.

೪೮. "ನಿನ್ನ ಮಕ್ಕಳು ಮೂರ್ಖರಾಗಿ ಪತಿತರಾಗಿದ್ದಾರೆ. ಅವರ ಸಂಪರ್ಕದಿಂದ ನೀನೂ ಅಷ್ಟೆ. ಆದ್ದರಿಂದ ನಿನ್ನ ಮನೆಯಲ್ಲಿ ನಾನು ಊಟ ಮಾಡುವುದಿಲ್ಲ. ಹಾಗೇನಾದರೂ ಮಾಡಿದರೆ ನಾನು ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕಾದೀತು.'

೪೯. ಆಗ ಗೋವಿಂದದತ್ತನು ಶಪಥವನ್ನು ಮಾಡಿ "ಇನ್ನೆಂದೂ ಈ ಕೆಟ್ಟ ಮಕ್ಕಳನ್ನು ಮುಟ್ಟುವುದೂ ಇಲ್ಲ' ಎಂದು ಆ ಬ್ರಾಹ್ಮಣನಿಗೆ ಹೇಳಿದನು.

---

ಸ ಕಾಲೇನ ದ್ವಿಜಸ್ತಸ್ಯಾಂ ಪಂಚ ಪುತ್ರಾನಜೀಜನತ್ ।
ತೇ ಚ ಮೂರ್ಖಾಃ ಸುರೂಪಾಶ್ಚ ಬಭೂವುರಭಿಮಾನಿನಃ ॥ ೪೩
ಅಥ ಗೋವಿಂದದತ್ತಸ್ಯ ಗೃಹಾನತಿಥಿರಾಯಯೌ ।
ವಿಪ್ರೋ ವೈಶ್ವಾನರೋ ನಾಮ ವೈಶ್ವಾನರ ಇವಾಪರಃ ॥ ೪೪
ಗೋವಿಂದದತ್ತೇ ತತ್ಕಾಲಂ ಗೃಹಾದಪಿ ಬಹಿಃ ಸ್ಥಿತೇ ।
ತತ್ಪುತ್ರಾಣಾಮುಪಾಗಮ್ಯ ಕೃತಂ ತೇನಾಭಿವಾದನಮ್ ॥ ೪೫
ಹಾಸಮಾತ್ರಂ ಚ ತೈಸ್ತಸ್ಯ ಕೃತಂ ಪ್ರತ್ಯಭಿವಾದನಮ್ ।
ತತಃ ಸ ಕೋಪಾನ್ನಿರ್ಗಂತುಂ ಪ್ರಾರೇಭೇ ತದ್‌ಗೃಹಾದ್ ದ್ವಿಜಃ ॥ ೪೬
ಆಗತೇನಾಥ ಗೋವಿಂದದತ್ತೇನ ಸ ತಥಾವಿಧಃ ।
ಕ್ರುದ್ಧಃ ಪೃಷ್ಟೋಽನುನೀತೋಽಪಿ ಜಗಾದೈವಂ ದ್ವಿಜೋತ್ತಮಃ ॥ ೪೭
ಪುತ್ರಾಸ್ತೇ ಪತಿತಾ ಮೂರ್ಖಾಸ್ತತ್ಸಂಪರ್ಕಾದ್ ಭವಾನಪಿ ।
ತಸ್ಮಾನ್ನ ಭೋಕ್ಷ್ಯೇ ತ್ವದ್‌ಗೇಹೇ ಪ್ರಾಯಶ್ಚಿತ್ತಂ ತು ಮೇ ಭವೇತ್ ॥ ೪೮
ಅಥ ಗೋವಿಂದದತ್ತಸ್ತಮುವಾಚ ಶಪಥೋತ್ತರಮ್ ।
ನ ಸ್ಪೃಶಾಮ್ಯಪಿ ಜಾತ್ವೇತಾನ್ ಅಹಂ ಕುತನಯಾನಿತಿ ॥ ೪೯

೫೦. ಅತಿಥಿಗಳಲ್ಲಿ ಗೌರವವನ್ನಿಟ್ಟಿದ್ದ ಗೋವಿಂದದತ್ತನ ಹೆಂಡತಿಯೂ ಬಂದು ಹಾಗೆಯೇ ಹೇಳಿದಳು. ಆಮೇಲೆ ಹೇಗೋ ವೈಶ್ವಾನರನು ಅವರ ಮನೆಯಲ್ಲಿ ಆತಿಥ್ಯವನ್ನು ಸ್ವೀಕರಿಸಿದನು.

೫೧. ಅದನ್ನೆಲ್ಲ ನೋಡಿದ ದೇವದತ್ತನೆಂಬ ಒಬ್ಬ ಮಗನು ತಂದೆ ಗೋವಿಂದದತ್ತನ ನಿರ್ದಯತೆಯಿಂದ ನೊಂದು ಪಶ್ಚಾತ್ತಾಪಪಟ್ಟನು.

೫೨. ತಂದೆತಾಯಂದಿರೂ ಹೀಯಾಳಿಸುವಂತಹ ತನ್ನ ವ್ಯರ್ಥ ಬದುಕನ್ನು ನೋಡಿ ಬೇಸರದಿಂದ ತಪಸ್ಸನ್ನು ಮಾಡಲು ಬದರಿಕಾಶ್ರಮಕ್ಕೆ ತೆರಳಿದನು.

೫೩. ಉಮಾಪತಿಯಾದ ಶಿವನನ್ನು ಒಲಿಸಲು ಅವನು ಮೊದಲು ಕೇವಲ ಎಲೆಗಳನ್ನು ಆಹಾರವನ್ನಾಗಿ ಮಾಡಿಕೊಂಡನು. ಆಮೇಲೆ ಕೇವಲ ಆವಿಯನ್ನು ಸೇವಿಸಿದನು. ಹೀಗೆ ದೀರ್ಘಕಾಲ ತಪಸ್ಸು ಮಾಡಿದನು.

೫೪. ತೀವ್ರವಾದ ಅವನ ತಪಸ್ಸಿಗೆ ಮನಸೋತ ಶಿವನು ದರ್ಶನವನ್ನು ನೀಡಿದನು. ದೇವದತ್ತನು ಶಿವನ ಅನುಚರನಾಗಿರಬೇಕೆಂಬ ವರವನ್ನು ಬೇಡಿಕೊಂಡನು.

೫೫ "ಭೂಲೋಕದಲ್ಲಿ ವಿದ್ಯೆಗಳನ್ನು ಪಡೆದುಕೋ, ಸುಖಗಳನ್ನು ಅನುಭವಿಸು. ಆಮೇಲೆ ನಿನ್ನ ಅಭೀಷ್ಟವೆಲ್ಲ ಕೈಗೂಡುವುದು' ಎಂದು ಶಿವನು ಆಣತಿಯನ್ನು ನೀಡಿದನು.

---

ತದ್ಭಾರ್ಯಾಪಿ ತಥೈವೈತ್ಯ ತಮುವಾಚಾತಿಥಿಪ್ರಿಯಾ ।
ತತಃ ಕಥಂಚಿದಾತಿಥ್ಯಂ ತತ್ರ ವೈಶ್ವಾನರೋಽಗ್ರಹೀತ್ ॥ ೫೦
ತದ್ ದೃಷ್ಟ್ವಾ ದೇವದತ್ತಾಖ್ಯಸ್ತ್ವೈಕಸ್ತನಯಸ್ತದಾ ।
ಅಭೂದ್ ಗೋವಿಂದದತ್ತಸ್ಯ ನೈರ್ಘೃಣ್ಯೇನಾನುತಾಪವಾನ್ ॥ ೫೧
ವ್ಯರ್ಥಂ ಜೀವಿತಮಾಲೋಕ್ಯ ಪಿತೃಭ್ಯಾಮಥ ದೂಷಿತಮ್ ।
ಸನಿರ್ವೇದಃ ಸ ತಪಸೇ ಯಯೌ ಬದರಿಕಾಶ್ರಮಮ್ ॥ ೫೨
ತತಃ ಪರ್ಣಾಶನಃ ಪೂರ್ವಂ ಧೂಮಪಶ್ಚಾಪ್ಯನಂತರಮ್ ।
ತಸ್ಥೌ ಚಿರಾಯ ತಪಸೇ ತೋಷಯಿಷ್ಯನ್ನುಮಾಪತಿಮ್ ॥ ೫೩
ದದೌ ಚ ದರ್ಶನಂ ತಸ್ಯ ಶಂಭುಸ್ತೀವ್ರತಪೋಽರ್ಜಿತಃ ।
ತಸ್ಯೈವಾನುಚರತ್ವಂ ಚ ಸ ವವ್ರೇ ವರಮೀಶ್ವರಾತ್ ॥ ೫೪
ವಿದ್ಯಾಃ ಪ್ರಾಪ್ನುಹಿ ಭೋಗಾಂಶ್ಚ ಭುವಿ ಭುಂಕ್ಷ್ವ ತತಸ್ತವ ।
ಭವಿತಾಭಿಮತಂ ಸರ್ವಮಿತಿ ಶಂಭುಸ್ತಮಾದಿಶತ್ ॥ ೫೫

೫೬. ಅನಂತರ ದೇವದತ್ತನು ಪಾಟಲಿಪುತ್ರಕ್ಕೆ ಹೋಗಿ ವಿದ್ಯಾರ್ಥಿಯಾಗಿ ವೇದಕುಂಭನೆಂಬ ಉಪಾಧ್ಯಾಯನನ್ನು ಶಾಸ್ತ್ರೋಕ್ತ ಕ್ರಮದಿಂದ ಆಶ್ರಯಿಸಿದನು.

೫೭. ಅವನು ಅಲ್ಲಿರುವಾಗ ಉಪಾಧ್ಯಾಯನ ಪತ್ನಿಯು ಒಮ್ಮೆ ಕಾಮಾತುರಳಾಗಿ ಅವನ ಸಂಗವನ್ನು ಬಯಸಿದಳು.  ಹೆಂಗಸರ ಮನಸ್ಸು ಎಷ್ಟಾದರೂ ಚಂಚಲ.

೫೮. ಮನ್ಮಥನಿಂದ ಈ ತೊಂದರೆಯು ಬಂದಿತೆಂದು ದೇವದತ್ತನು ತಡಮಾಡದೆ ಆ ದೇಶವನ್ನು ಬಿಟ್ಟು ಪ್ರತಿಷ್ಠಾನನಗರಕ್ಕೆ ಹೋದನು.

೫೯. ಅಲ್ಲಿ ವೃದ್ಧಭಾರ್ಯೆಯೊಡನೆ ವಾಸಿಸುತ್ತಿದ್ದ ಮಂತ್ರಸ್ವಾಮಿ ಎಂಬ ವೃದ್ಧ ಉಪಾಧ್ಯಾಯನನ್ನು ಯಾಚಿಸಿ ಅವನಿಂದ ಎಲ್ಲ ವಿದ್ಯೆಗಳನ್ನೂ ಚೆನ್ನಾಗಿ ಕಲಿತನು.

೬೦. ಆ ದೇಶದ ರಾಜನಾಗಿದ್ದ ಸುಶರ್ಮನೆಂಬುವನ ಶ್ರೀ ಎಂಬ ಹೆಸರಿನ ಮಗಳು ಸುಂದರನೂ ವಿದ್ಯಾಪರಿಣತನೂ ಆದ ದೇವದತ್ತನನ್ನು ಲಕ್ಷ್ಮಿಯು ಹರಿಯನ್ನು ನೋಡಿದಂತೆ ನೋಡಿದಳು.

೬೧. ಚಂದ್ರನ ಅಧಿದೇವತೆಯಂತೆ ವಿಮಾನದಲ್ಲಿ ವಿಹರಿಸುತ್ತಾ ಕಿಟಕಿಯ ಬಳಿ ಇದ್ದ ಶ್ರೀಯನ್ನು ದೇವದತ್ತನೂ ನೋಡಿದನು.

೬೨. ಮನ್ಮಥನ  ಸಂಕೋಲೆಗಳಂತಿದ್ದ ಆ ನೋಟಗಳಿಂದ ಬದ್ಧರಾದ ಅವರಿಬ್ಬರೂ ಪರಸ್ಪರ ದೂರವಾಗಲು ಸಮರ್ಥರಾಗಲಿಲ್ಲ.

---

ತತಃ ಸ ಗತ್ವಾ ವಿದ್ಯಾರ್ಥೀ ಪುರಂ ಪಾಟಲಿಪುತ್ರಕಮ್ ।
ಸಿಷೇವೇ ವೇದಕುಂಭಾಖ್ಯಮುಪಾಧ್ಯಾಯಂ ಯಥಾವಿಧಿ ॥ ೫೬
ತತ್ರಸ್ಥಂ ತಮುಪಾಧ್ಯಾಯಪತ್ನೀ ಜಾತು ಸ್ಮರಾತುರಾ ।
ಹಠಾದ್ ವವ್ರೇ ಬತ ಸ್ತ್ರೀಣಾಂ ಚಂಚಲಾಶ್ಚಿತ್ತವೃತ್ತಯಃ ॥ ೫೭
ತೇನ ಸಂತ್ಯಜ್ಯ ತಂ ದೇಶಮನಂಗಕೃತವಿಪ್ಲವಃ ।
ಸ ದೇವದತ್ತಃ ಪ್ರಯಯೌ ಪ್ರತಿಷ್ಠಾನಮತಂದ್ರಿತಃ ॥ ೫೮
ತತ್ರ ವೃದ್ಧಮುಪಾಧ್ಯಾಯಂ ವೃದ್ಧಯಾ ಭಾರ್ಯಯಾನ್ವಿತಮ್ ।
ಮಂತ್ರಸ್ವಾಮ್ಯಾಖ್ಯಮಭ್ಯರ್ಥ್ಯ ವಿದ್ಯಾಃ ಸಮ್ಯಗಧೀತವಾನ್ ॥ ೫೯
ಕೃತವಿದ್ಯಂ ಚ ತಂ ತತ್ರ ದದರ್ಶ ನೃಪತೇಃ ಸುತಾ ।
ಸುಶರ್ಮಾಖ್ಯಸ್ಯ ಸುಭಗಂ ಶ್ರೀರ್ನಾಮ ಶ್ರೀರಿವಾಚ್ಯುತಮ್ ॥ ೬೦
ಸೋಽಪಿ ತಾಂ ದೃಷ್ಟವಾನ್ ಕನ್ಯಾಂ ಸ್ಥಿತಾಂ ವಾತಾಯನೋಪರಿ ।
ವಿಹರಂತೀಂ ವಿಮಾನೇನ ಚಂದ್ರಸ್ಯೇವಾಧಿದೇವತಾಮ್ ॥ ೬೧
ಬದ್ಧಾವಿವ ತಯಾನ್ಯೋನ್ಯಂ ಸ್ಮರಶೃಂಖಲಯಾ ದೃಶಾ ।
ನಾಪಸರ್ತುಂ ಸಮರ್ಥೌ ತೌ ಬಭೂವತುರುಭಾವಪಿ ॥ ೬೨

೬೩. ಆಕಾರವನ್ನು ಧರಿಸಿದ ಮನ್ಮಥಾಜ್ಞೆಯೋ ಎಂಬಂತಿದ್ದ ಬೆರಳಿನಿಂದ ಆ ರಾಜಕುಮಾರಿಯು "ಈ ಕಡೆ ಹತ್ತಿರಕ್ಕೆ ಬಾ' ಎಂದು ಅವನಿಗೆ ಸಂಜ್ಞೆ ಮಾಡಿದಳು.

೬೪. ಆಗ ಅವನು ಅವಳ ಹತ್ತಿರಕ್ಕೆ ಹೋದನು. ಅಂತಃಪುರದಿಂದ ಅವಳು ಒಂದು ದಂತದಿಂದ ಹೂವನ್ನೆತ್ತಿ ಅವನ ಕಡೆಗೆ ಎಸೆದಳು.

೬೫. ರಾಜಕುಮಾರಿಯು ಮಾಡಿದ ಈ ಗೂಢವಾದ ಸಂಜ್ಞೆಯ ಅರ್ಥವನ್ನು ತಿಳಿಯಲಾಗದೆ ಕರ್ತವ್ಯಮೂಢನಾಗಿ ದೇವದತ್ತನು ತನ್ನ ಉಪಾಧ್ಯಾಯರ ಮನೆಗೆ ತೆರಳಿದನು.

೬೬. ಏನನ್ನೂ ಹೇಳಲಾಗದೆ ಅವನು ನೆಲದ ಮೇಲೆ ಹೊರಳಾಡಿದನು. ಒಳಗೇ ತಾಪವು ಅವನನ್ನು ಸುಡುತ್ತಿತ್ತು. ಕಳ್ಳರಿಂದ ದರೋಡೆಗೆ ಈಡಾದ ಮೂಕನಂತೆ ಅವನು ನೊಂದನು.

೬೭. ಧೀಮಂತನಾದ ಉಪಾಧ್ಯಾಯನು ಕಾಮಜನ್ಯವಾದ ಗುರುತುಗಳಿಂದ ಕಾರಣವನ್ನು ಊಹಿಸಿ ಯುಕ್ತಿಯಿಂದ ಪ್ರಶ್ನಿಸಿದಾಗ ದೇವದತ್ತನು ಹೇಗೋ ನಡೆದುದನ್ನು ಹೇಳಿಬಿಟ್ಟನು.

೬೮. ಅದರ ಅರ್ಥವನ್ನು ಅರಿತುಕೊಂಡ ಪ್ರಾಜ್ಞನಾದ ಉಪಾಧ್ಯಾಯನು ಈ ವಾಕ್ಯವನ್ನು ಹೇಳಿದನು. ""ದಂತದಿಂದ ಹೂವನ್ನು ಕೆಡವಿದ ಅವಳಿಂದ ನಿನಗೆ ಸಂಕೇತವು ಮಾಡಲ್ಪಟ್ಟಿದೆ.

---

ಸಾಥ ತಸ್ಯೈಕಯಾಂಗುಲ್ಯಾ ಮೂರ್ತಯೇವ ಸ್ಮರಾಜ್ಞಯಾ ।
ಇತೋ ನಿಕಟಮೇಹೀತಿ ಸಂಜ್ಞಾಂ ಚಕ್ರೇ ನೃಪಾತ್ಮಜಾ ॥ ೬೩
ತತಃ ಸಮೀಪಂ ತಸ್ಯಾಶ್ಚ ಯಯಾವಂತಃಪುರಾಚ್ಚ ಸಃ ।
ಸಾ ಚ ಚಿಕ್ಷೇಪ ದಂತೇನ ಪುಷ್ಪಮಾದಾಯ ತಂ ಪ್ರತಿ ॥ ೬೪
ಸಂಜ್ಞಾಮೇತಾಮಜಾನಾನೋ ಗೂಢಾಂ ರಾಜಸುತಾಕೃತಾಮ್ ।
ಸ ಕರ್ತವ್ಯವಿಮೂಢಃ ಸನ್ನುಪಾಧ್ಯಾಯಗೃಹಂ ಯಯೌ ॥ ೬೫
ಲುಲೋಠ ತತ್ರ ಧರಣೌ ನ ಕಿಂಚಿದ್ ವಕ್ತುಮೀಶ್ವರಃ ।
ತಾಪೇನ ದಹ್ಯಮಾನೋಂತರ್ಮೂಕಃ ಪ್ರಮುಷಿತೋ ಯಥಾ ॥ ೬೬
ವಿತರ್ಕ್ಯ ಕಾಮಜೈಶ್ಚಿಹ್ನೈರುಪಾಧ್ಯಾಯೇನ ಧೀಮತಾ ।
ಯುಕ್ತ್ಯಾ ಪೃಷ್ಟಃ ಕಥಂಚಿಚ್ಚ ಯಥಾವೃತ್ತಂ ಶಶಂಸ ಸಃ ॥ ೬೭
ತದ್ ಬುದ್ಧ್ವಾ ತಮುಪಾಧ್ಯಾಯೋ ವಿದಗ್ಧೋ ವಾಕ್ಯಮಬ್ರವೀತ್ ।
ದಂತೇನ ಪುಷ್ಪಂ ಮುಂಚಂತ್ಯಾ ತಯಾ ಸಂಜ್ಞಾ ಕೃತಾ ತವ ॥ ೬೮

೧೯. "ಹೂವುಗಳಿಂದ ತುಂಬಿದ ಪುಷ್ಪದಂತವೆಂಬ ಹೆಸರಿನ ದೇವಾಲಯ ಇದೆಯಷ್ಟೆ ಅಲ್ಲಿಗೆ ಬಂದು ನನಗಾಗಿ ಕಾದಿರು, ಈಗ ಹೋಗು' ಎಂಬುದು ಅದರ ಅರ್ಥ".

೨೦. ಯುವಕ ದೇವದತ್ತನು ಉಪಾಧ್ಯಾಯನ ಮಾತನ್ನು ಕೇಳಿ ಸಂಜ್ಞೆಯ ಅರ್ಥವನ್ನು ತಿಳಿದುಕೊಂಡು ಚಿಂತೆಯನ್ನು ತ್ಯಜಿಸಿದನು. ಅನಂತರ ಆ ದೇವಾಲಯದ ಒಳಗೆ ಹೋಗಿ ನಿಂತುಕೊಂಡನು.

೨೧. ರಾಜಕುಮಾರಿಯೂ ಅಷ್ಟಮಿಯೆಂಬ ನಿಮಿತ್ತದಿಂದ ಅಲ್ಲಿಗೆ ಹೋಗಿ ಒಬ್ಬಳೇ ದೇವರನ್ನು ನೋಡಿಬರುತ್ತೇನೆಂದು ಗರ್ಭಗುಡಿಯೊಳಕ್ಕೆ ಪ್ರವೇಶಿಸಿದಳು.

೨೨. ಬಾಗಿಲಿನ ಪಟ್ಟಿಯ ಹಿಂದೆ ನಿಂತಿದ್ದ ತನ್ನ ಪ್ರಿಯನನ್ನು ಅವಳು ನೋಡಿದಳು. ಅವನು ತಟ್ಟನೆ ಎದ್ದು ಅವಳ ಕಂಠವನ್ನು ತಬ್ಬಿಕೊಂಡನು.

೨೩. "ನೀನು ನನ್ನ ಸಂಜ್ಞೆಯನ್ನು ಹೇಗೆ ಅರಿತುಕೊಂಡೆ, ಅದೊಂದು ಆಶ್ಚರ್ಯ' ಎಂದು ಅವಳು ಹೇಳಿದಾಗ ದೇವದತ್ತನು ""ಅದರ ಅರ್ಥವನ್ನು ಅರಿತುಕೊಂಡಿದ್ದು ನನ್ನ ಉಪಾಧ್ಯಾಯ, ನಾನಲ್ಲ" ಎಂದು ಹೇಳಿಬಿಟ್ಟನು.

೨೪. 'ಬಿಡು ನನ್ನನ್ನು, ನೀನು ಚತುರನಲ್ಲ' ಎಂದು ಕೋಪದಿಂದ ಹೇಳಿ ಆ ಅರಸುಕುಮರಿ ತನ್ನ ಗುಟ್ಟು ರಟ್ಟಾದೀತು ಎಂಬ ಹೆದರಿಕೆಯಿಂದ ಅಲ್ಲಿಂದ ಹೊರಟು ಹೋದಳು.

---

ಯದೇತತ್ ಪುಷ್ಪದಂತಾಖ್ಯಂ ಪುಷ್ಪಾಢ್ಯಂ ಸುರಮಂದಿರಮ್ ।
ತತ್ರಾಗತ್ಯ ಪ್ರತೀಕ್ಷೇಥಾಃ ಸಾಂಪ್ರತಂ ಗಮ್ಯತಾಮಿತಿ ॥ ೧೯
ಶ್ರುತ್ವೇತಿ ಜ್ಞಾತಸಂಜ್ಞಾರ್ಥಃ ಸ ತತ್ಯಾಜ ಶುಚಂ ಯುವಾ ।
ತತೋ ದೇವಗೃಹಸ್ಯಾಂತಸ್ತಸ್ಯ ಗತ್ವಾ ಸ್ಥಿತೋಽಭವತ್ ॥ ೨೦
ಸಾಪ್ಯಷ್ಟಮೀಂ ಸಮುದ್ದಿಶ್ಯ ತತ್ರ ರಾಜಸುತಾ ಯಯೌ ।
ಏಕೈವ ದೇವಂ ದ್ರಷ್ಟುಂ ಚ ಗರ್ಭಾಗಾರಮಥಾವಿಶತ್ ॥ ೨೧
ದೃಷ್ಟೋಽತ್ರ ದ್ವಾರಪಟ್ಟಸ್ಯ ಪಶ್ಚಾತ್ ಸೋಽಥ ಪ್ರಿಯಸ್ತಯಾ ।
ಗೃಹೀತಾನೇನ ಚೋತ್ಥಾಯ ಸಾ ಕಂಠೇ ಸಹಸಾ ತತಃ ॥ ೨೨
ಚಿತ್ರಂ ತ್ವಯಾ ಕಥಂ ಜ್ಞಾತಾ ಸಾ ಸಂಜ್ಞೇತ್ಯುದಿತೇ ತಯಾ ।
ಉಪಾಧ್ಯಾಯೇನ ಸಾ ಜ್ಞಾತಾ ನ ಮಯೇತಿ ಜಗಾದ ಸಃ ॥ ೨೩
ಮುಂಚ ಮಾಮವಿದಗ್ಧ ಸ್ತ್ವಮಿತ್ಯುಕ್ತ್ವಾ ತತ್ಕ್ಷಣಾತ್ ಕ್ರುಧಾ ।
ಮಂತ್ರಭೇದಭಯಾತ್ ಸಾಥ ರಾಜಕನ್ಯಾ ತತೋ ಯಯೌ ॥ ೨೪

೭೫. ಕಂಡೂ ಕಾಣದಂತಾದ ಪ್ರಿಯೆಯನ್ನು ಸ್ಮರಿಸುತ್ತಾ ದೇವದತ್ತನು ನಿರ್ಜನ ಪ್ರದೇಶಕ್ಕೆ ಹೋಗಿ ಅಗಲಿಕೆಯ ಬೆಂಕಿಯಿಂದ ಜೀವಮೇ ಹೋದಂತವನಾದನು.

೭೬. ಹಿಂದೆ ಅವನಿಗೆ ಪ್ರಸನ್ನನಾಗಿದ್ದ ಭಗವಾನ್ ಶಿವನು ಈಗ ಅವನು ಆ ಸ್ಥಿತಿಯಲ್ಲಿರುವುದನ್ನು ನೋಡಿ ಅವನ ಇಷ್ಟಸಿದ್ಧಿಗಾಗಿ ಪಂಚಶಿಖ ಎಂಬ ಗಣನಿಗೆ ಆಜ್ಞೆಮಾಡಿದನು.

೭೭. ಆ ಗಣೋತ್ತಮನು ಬಂದು ದೇವದತ್ತನಿಗೆ ಸಮಾಧಾನವನ್ನು ಹೇಳಿ ಹೆಣ್ಣು ವೇಷವನ್ನು ತೊಡಿಸಿ ತಾನೂ ಮುದಿಬ್ರಾಹ್ಮಣನ ವೇಷವನ್ನು ಧರಿಸಿದನು.

೭೮. ಗಣಾಗ್ರಣಿ ಪಂಚಶಿಖನು ದೇವದತ್ತನೊಡನೆ ಆ ಸುಂದರಿಯ ತಂದೆ ಸುಶರ್ಮ ಮಹಾರಾಜನ ಬಳಿಗೆ ಹೋಗಿ ಹೀಗೆ ಹೇಳಿದನು —

೭೯. ""ರಾಜನ್, ನನ್ನ ಮಗನು ದೇಶಾಂತರಕ್ಕೆ ಎಲ್ಲೋ ಹೋಗಿಬಿಟ್ಟಿದ್ದಾನೆ. ಅವನನ್ನು ಹುಡುಕಲು ನಾನು ಹೋಗುತ್ತಿದ್ದೇನೆ. ಆದ್ದರಿಂದ ನನ್ನ ಸೊಸೆ ನಿನ್ನಲ್ಲಿ ನ್ಯಾಸವಾಗಿರುತ್ತಾಳೆ. ಇವಳನ್ನು ನೀನು ಕಾಪಾಡಬೇಕು."

೮೦. ಅದನ್ನು ಕೇಳಿ ಶಾಪಭೀತನಾದ ಸುಶರ್ಮನು ಅವಳು ಹೆಣ್ಣು ಎಂಬ ಭಾವನೆಯಿಂದ, ಗುಪ್ತವಾಗಿದ್ದ ತನ್ನ ಹೆಣ್ಣುಮಕ್ಕಳ ಅಂತಃಪುರದಲ್ಲಿ ಯುವಕ ದೇವದತ್ತನನ್ನು ನೆಲೆಗೊಳಿಸಿದನು.

---

ಸೋಽಪಿ ಗತ್ವಾ ವಿವಿಕ್ತೇ ತಾಂ ದೃಷ್ಟನಷ್ಟಾಂ ಸ್ಮರನ್ ಪ್ರಿಯಾಮ್ ।
ದೇವದತ್ತೋ ವಿಯೋಗಾಗ್ನಿವಿಗಲಜ್ಜೀವಿತೋಽಭವತ್ ॥ ೭೫
ದೃಷ್ಟ್ವಾ ತಂ ತಾದೃಶಂ ಶಂಭುಃ ಪ್ರಾಕ್ ಪ್ರಸನ್ನಃ ಕಿಲಾದಿಶತ್ ।
ಗಣಂ ಪಂಚಶಿಖಂ ನಾಮ ತಸ್ಯಾಭೀಪ್ಸಿತಸಿದ್ಧಯೇ ॥ ೭೬
ಸ ಚಾಗತ್ಯ ಸಮಾಶ್ವಾಸ್ಯ ಸ್ತ್ರೀವೇಷಂ ತಂ ಗಣೋತ್ತಮಃ ।
ಅಕಾರಯತ್ ಸ್ವಯಂ ಚಾಭೂದ್ ವೃದ್ಧಬ್ರಾಹ್ಮಣರೂಪಧೃತ್ ॥ ೭೭
ತತಸ್ತೇನ ಸಮಂ ಗತ್ವಾ ತಂ ಸುಶರ್ಮಮಹೀಪತಿಮ್ ।
ಜನಕಂ ಸುದೃಶಸ್ತಸ್ಯಾಃ ಸ ಜಗಾದ ಗಣಾಗ್ರಣೀಃ ॥ ೭೮
ಪುತ್ರೋ ಮೇ ಪ್ರೋಷಿತಃ ಕ್ವಾಪಿ ತಮನ್ವೇಷ್ಟುಂ ವ್ರಜಾಮ್ಯಹಮ್ ।
ತನ್ಮೇ ಸ್ನುಷೇಯಂ ನಿಃಕ್ಷೇಪೋ ರಾಜನ್ ಸಂಪ್ರತಿ ರಕ್ಷ್ಯತಾಮ್ ॥ ೭೯
ತಚ್ಛ್ರುತ್ವಾ ಶಾಪಭೀತೇನ ತೇನಾದಾಯ ಸುಶರ್ಮಣಾ ।
ಸ್ವಕನ್ಯಾಂತಃಪುರೇ ಗುಪ್ತೇ ಸ್ತ್ರೀತಿ ಸಂಸ್ಥಾಪಿತೋ ಯುವಾ ॥ ೮೦

೮೧. ಪಂಚಶಿಖನು ಹೊರಟಾದ ಮೇಲೆ ಸ್ತ್ರೀವೇಷದಲ್ಲಿದ್ದ ಆ ಬ್ರಾಹ್ಮಣನು ತನ್ನ ಪ್ರಿಯೆಯ ಅಂತಃಪುರದಲ್ಲೇ ವಾಸಿಸುತ್ತಾ ಅವಳ ವಿಶ್ವಾಸಕ್ಕೆ ಪಾತ್ರನಾದನು.

೮೨. ಒಮ್ಮೆ ಅವನು ರಾತ್ರಿಯಲ್ಲಿ ತಾನು ಯಾರೆಂಬುದನ್ನು ತಿಳಿಸಿದನು. ಆಗ ರಾಜಕುಮಾರಿ (ಅವನ ಬಗ್ಗೆ) ಉತ್ಸುಕಳಾದಳು. ಆಗ ಅವಳನ್ನು ಗುಪ್ತವಾಗಿ ಗಾಂಧರ್ವವಿಧಿಯಿಂದ ಅವನು ಮದುವೆ ಮಾಡಿಕೊಂಡನು.

೮೩. ರಾಜಕುಮಾರಿ ಗರ್ಭಿಣಿಯಾಗಲು, ದೇವದತ್ತನು ಗಣೋತ್ತಮನನ್ನು ನೆನಪಿಸಿಕೊಂಡನು. ಆ ಕ್ಷಣದಲ್ಲೇ ರಾತ್ರಿಯಲ್ಲಿ ಬಂದ ಗಣೋತ್ತಮ ಪಂಚಶಿಖನು ಅವನನ್ನು ಯಾರಿಗೂ ಕಾಣದಂತೆ ಕರೆದೊಯ್ದನು.

೮೪. ಅನಂತರ ತರುಣ ದೇವದತ್ತನ ಸ್ತ್ರೀವೇಷವನ್ನು ಕಳಚಿಹಾಕಿ ಬೆಳಗಾದ ಮೇಲೆ ಪಂಚಶಿಖನು ಬೇಗನೆ ತಾನೂ ಹಿಂದಿನಂತೆ ಬ್ರಾಹ್ಮಣವೇಷಧಾರಿಯಾದನು.

೮೫ ದೇವದತ್ತನ ಜೊತೆಯಲ್ಲಿ ಸುಶರ್ಮರಾಜನ ಬಳಿಗೆ ಹೋಗಿ ""ರಾಜನ್, ಇಂದು ನನಗೆ ಮಗನು ಸಿಕ್ಕಿದ್ದಾನೆ. ನನ್ನ ಸೊಸೆಯನ್ನು ಕೊಡು", ಎಂದು ಹೇಳಿದನು.

೮೬ ಆಗ ರಾಜನು ವಿಚಾರಿಸಲಾಗಿ ಆ ಹೆಂಗಸು ರಾತ್ರಿಯಲ್ಲೇ ತಪ್ಪಿಸಿಕೊಂಡು ಹೊರಟುಹೋಗಿರುವುದು ತಿಳಿದು ಬಂತು. ಶಾಪಭಯದಿಂದ ಗಾಬರಿಗೊಂಡು ರಾಜನು ಮಂತ್ರಿಗಳಿಗೆ ಹೀಗೆ ಹೇಳಿದನು.

---

ತತಃ ಪಂಚಶಿಖೇ ಯಾತೇ ಸ್ವಪ್ರಿಯಾಂತಃಪುರೇ ವಸನ್ ।
ಸ್ತ್ರೀವೇಷಃ ಸ ದ್ವಿಜಸ್ತಸ್ಯಾ ವಿಸ್ರಂಭಾಸ್ಪದತಾಂ ಯಯೌ ॥ ೮೧
ಏಕದಾ ಚೋತ್ಸುಕಾ ರಾತ್ರೌ ತೇನಾತ್ಮಾನಂ ಪ್ರಕಾಶ್ಯ ಸಾ ।
ಗುಪ್ತಂ ಗಾಂಧರ್ವವಿಧಿನಾ ಪರಿಣೀತಾ ನೃಪಾತ್ಮಜಾ ॥ ೮೨
ತಸ್ಯಾಂ ಚ ಧೃತಗರ್ಭಾಯಾಂ ತಂ ದ್ವಿಜಂ ಸ ಗಣೋತ್ತಮಃ ।
ಸ್ಮೃತಮಾತ್ರಾಗತೋ ರಾತ್ರೌ ತತೋಽನೈಷೀದಲಕ್ಷಿತಮ್ ॥ ೮೩
ತತಸ್ತಸ್ಯ ಸಮುತ್ಸಾರ್ಯ ಯೂನಃ ಸ್ತ್ರೀ ವೇಷಮಾಶು ತಮ್ ।
ಪ್ರಾತಃ ಪಂಚಶಿಖಃ ಸೋಽಭೂತ್ ಪೂರ್ವವದ್ ಬ್ರಾಹ್ಮಣಾಕೃತಿಃ ॥ ೮೪
ತೇನೈವ ಸಹ ಗತ್ವಾ ಚ ಸುಶರ್ಮನೃಪಮಭ್ಯಧಾತ್ ।
ಅದ್ಯ ಪ್ರಾಪ್ತೋ ಮಯಾ ರಾಜನ್ ಪುತ್ರಸ್ತದ್ದೇಹಿ ಮೇ ಸ್ನುಷಾಮ್ ॥ ೮೫
ತತಃ ಸ ರಾಜಾ ತಾಂ ಬುದ್ಧ್ವಾ ರಾತ್ರೌ ಕ್ವಾಪಿ ಪಲಾಯಿತಾಮ್ ।
ತಚ್ಛಾಪಭಯಸಂಭ್ರಾಂತೋ ಮಂತ್ರಿಭ್ಯ ಇದಮಬ್ರವೀತ್ ॥ ೮೬

೮೭. "ಇವನು ನಿಜವಾಗಿ ಬ್ರಾಹ್ಮಣನಲ್ಲ. ನನ್ನನ್ನು ವಂಚಿಸಲು ಬಂದ ಯಾವುದೋ ದೇವತೆ. ಈ ರೀತಿಯಾದ ವೃತ್ತಾಂತಗಳು ಸತತವಾಗಿ ನಡೆಯುತ್ತಿರುತ್ತವೆ.

### ಶಿಬಿ ಮಹಾರಾಜನ ಕಥೆ

೮೮. ಹಿಂದೆ ತಪಸ್ವಿಯೂ ದಯಾಳುವೂ, ದಾನಿಯೂ, ಧೀರನೂ ಆಗಿದ್ದ ಶಿಬಿ ಎಂಬ ರಾಜನು ಎಲ್ಲ ಪ್ರಾಣಿಗಳಿಗೂ ಅಭಯವನ್ನು ನೀಡುವವನಾಗಿದ್ದನು.

೮೯. ಅವನನ್ನು ವಂಚಿಸಲು ಇಂದ್ರನು ಗಿಡುಗದ ಶರೀರವನ್ನು ಧರಿಸಿ ಮಾಯೆಯಿಂದ ಪಾರಿವಾಳದ ರೂಪದಲ್ಲಿದ್ದ ಧರ್ಮನನ್ನು ಅಟ್ಟಿಸಿಕೊಂಡು ಬಂದನು.

೯೦. ಪಾರಿವಾಳವು ಹೆದರಿಕೊಂಡು ಶಿಬಿಯ ಮಡಿಲಲ್ಲಿ ಆಸರೆಯನ್ನು ಪಡೆಯಿತು. ಗಿಡುಗವು ಮನುಷ್ಯ ಭಾಷೆಯಿಂದ ಆ ರಾಜನಿಗೆ ಹೇಳಿತು.

೯೧. "ರಾಜನೇ, ಹಸಿದಿರುವ ನನಗೆ ಆಹಾರವಾಗಬೇಕಾದ ಆ ಪಾರಿವಾಳವನ್ನು ಬಿಟ್ಟುಬಿಡು. ಇಲ್ಲದಿದ್ದರೆ ನಾನು ಸತ್ತೆನೆಂದು ತಿಳಿದುಕೋ. ಅದರಿಂದ ನಿನಗೆ ಯಾವ ಧರ್ಮ ಉಂಟಾದೀತು ?'

೯೨. ಆಗ ಶಿಬಿಯು ಹೇಳಿದನು. "ಈ ಪಾರಿವಾಳ ನನ್ನ ಶರಣಾಗತ. ಅದನ್ನು ಬಿಟ್ಟುಕೊಡಲಾಗದು. ನಿನಗೆ ಅದಕ್ಕೆ ಸಮವಾದ ಬೇರೆ ಮಾಂಸವನ್ನು ಕೊಡುತ್ತೇನೆ.'

---

ನ ವಿಪ್ರೋ□ಯಮಯಂ ಕೋ□ಪಿ ದೇವೋ ಮದ್ವಂಚನಾಗತಃ ।
ಏವಂಪ್ರಾಯಾ ಭವಂತೀಹ ವೃತ್ತಾಂತಾಃ ಸತತಂ ಯತಃ ॥ ೮೭
ತಥಾ ಚ ಪೂರ್ವಂ ರಾಜಾಭೂತ್ ತಪಸ್ವೀ ಕರುಣಾಪರಃ ।
ದಾತಾ ಧೀರಃ ಶಿಬಿರ್ನಾಮ ಸರ್ವಸತ್ತ್ವಾಭಯಪ್ರದಃ ॥ ೮೮
ತಂ ವಂಚಯಿತುಮಿಂದ್ರೋ□ಥ ಕೃತ್ವಾ ಶ್ಯೇನವಪುಃ ಸ್ವಯಮ್ ।
ಮಾಯಾಕಪೋತವಪುಷಂ ಧರ್ಮಮನ್ವಪತದ್ ದ್ರುತಮ್ ॥ ೮೯
ಕಪೋತಶ್ಚ ಭಯಾದ್ ಗತ್ವಾ ಶಿಬೇರಂಕಮಶಿಶ್ರಿಯತ್ ।
ಮನುಷ್ಯವಾಚಾ ಶ್ಯೇನೋ□ಥ ಸ ತಂ ರಾಜಾನಮಬ್ರವೀತ್ ॥ ೯೦
ರಾಜನ್ ಭಕ್ಷ್ಯಮಿದಂ ಮುಂಚ ಕಪೋತಂ ಕ್ಷುಧಿತಸ್ಯ ಮೇ ।
ಅನ್ಯಥಾ ಮಾಂ ಮೃತಂ ವಿದ್ಧಿ ಕಸ್ತೇ ಧರ್ಮಸ್ತತೋ ಭವೇತ್ ॥ ೯೧
ತತಃ ಶಿಬಿರುವಾಚೈನಮೇಷ ಮೇ ಶರಣಾಗತಃ ।
ಅತ್ಯಾಜ್ಯಸ್ತದ್ ದದಾಮ್ಯನ್ಯನ್ಮಾಂಸಮೇತತ್ ಸಮಂ ತವ ॥ ೯೨

೬೩. "ಹಾಗಿದ್ದರೆ ನಿನ್ನ ಮಾಂಸವನ್ನೇ ಕೊಡು' ಎಂದು ಗಿಡುಗವು ಹೇಳಿದಾಗ ರಾಜನು ಸಂತೋಷದಿಂದ 'ಹಾಗೆಯೇ ಆಗಲಿ' ಎಂದು ಒಪ್ಪಿಕೊಂಡನು.

೬೪. ರಾಜನು ತನ್ನ ಶರೀರದ ಮಾಂಸವನ್ನು ಕತ್ತರಿಸಿ ಕತ್ತರಿಸಿ ತಕ್ಕಡಿಯಲ್ಲಿ ಹಾಕುತ್ತಿರಲು ಆ ಪಾರಿವಾಳದ ತೂಕ ಹೆಚ್ಚುತ್ತಲೇ ಹೋಯಿತು.

೬೫. ಆಮೇಲೆ ರಾಜನು ತನ್ನ ಸಮಸ್ತ ಶರೀರವನ್ನೂ ತಕ್ಕಡಿಯ ಬಟ್ಟಲಿನಲ್ಲಿ ಇಟ್ಟನು. ಆಗ 'ಭಲೇ ಭಲೇ ತ್ಯಾಗವೆಂದರೆ ಇದು' ಎಂಬ ದಿವ್ಯವಾಣಿಯು ಕೇಳಿ ಬಂದಿತು.

೬೬. ಆಗ ಇಂದ್ರನೂ ಧರ್ಮನೂ ಸಂತುಷ್ಟರಾಗಿ ಗಿಡುಗಪಾರಿವಾಳಗಳ ರೂಪವನ್ನು ತ್ಯಜಿಸಿ ರಾಜ ಶಿಬಿಯನ್ನು ಅವನ ದೇಹದಲ್ಲಿ ಯಾವ ನೋವೂ ಲೋಪವೂ ಇಲ್ಲದಂತೆ ಪುನರುಜ್ಜೀವನಗೊಳಿಸಿದರು.

೬೭. ಅವನಿಗೆ ಬೇರೆ ವರಗಳನ್ನೂ ನೀಡಿ ಅವರಿಬ್ಬರೂ ಮಾಯವಾದರು. ಹೀಗೆ ನನ್ನನ್ನೂ ಪರೀಕ್ಷಿಸಲು ಯಾವನೋ ದೇವತೆ ಬಂದಿದ್ದಾನೆ.'

೬೮. ಹೀಗೆ ತನಗೆ ತೋಚಿದಂತೆ ಮಂತ್ರಿಗಳಿಗೆ ಹೇಳಿದ ದೊರೆ ಸುಶರ್ಮನು ಭಯದಿಂದ ಬಗ್ಗಿ ವಿಪ್ರರೂಪದಲ್ಲಿದ್ದ ಗಣೋತ್ತಮ ಪಂಚಶಿಖನಿಗಿಂತೆಂದನು.

---

ಶ್ಯೇನೋ ಜಗಾದ ಯದ್ಯೇವಮಾತ್ಮಮಾಂಸಂ ಪ್ರಯಚ್ಛ ಮೇ ।
ತಥೇತಿ ತತ್ ಪ್ರಹೃಷ್ಟಃ ಸನ್ ಸ ರಾಜಾ ಪ್ರತ್ಯಪದ್ಯತ ॥ ೬೩

ಯಥಾಯಥಾ ಚ ಮಾಂಸಂ ಸ್ವಮುತ್ಕೃತ್ಯಾರೋಪಯನ್ನೃಪಃ ।
ತಥಾತಥಾ ತುಲಾಯಾಂ ಸ ಕಪೋತೋಽಭ್ಯಧಿಕೋಽಭವತ್ ॥ ೬೪

ತತಃ ಶರೀರಂ ಸಕಲಂ ತುಲಾಂ ರಾಜಾಧ್ಯರೋಪಯತ್ ।
ಸಾಧು ಸಾಧು ಶಮಂ ತ್ವೇತದ್ ದಿವ್ಯಾವಾಗುದಭೂತ್ತತಃ ॥ ೬೫

ಇಂದ್ರಧರ್ಮೌ ತತಸ್ತ್ಯಕ್ತ್ವಾ ರೂಪಂ ಶ್ಯೇನಕಪೋತಯೋಃ ।
ತುಷ್ಟಾವಕ್ಷತದೇಹಂ ತಂ ರಾಜಾನಂ ಚಕ್ರತುಃ ಶಿಬಿಮ್ ॥ ೬೬

ದತ್ತ್ವಾ ಚಾಸ್ಮೈ ವರಾನನ್ಯಾಂಸ್ತಾವಂತರ್ಧಾನಮೀಯತುಃ ।
ಏವಂ ಮಾಮಪಿ ಕೋಽಪ್ಯೇಷ ದೇವೋ ಜಿಜ್ಞಾಸುರಾಗತಃ ॥ ೬೭

ಇತ್ಯುಕ್ತ್ವಾ ಸಚಿವಾನ್ ಸ್ವೈರಂ ಸ ಸುಶರ್ಮಾ ಮಹೀಪತಿಃ ।
ತಮುವಾಚ ಭಯಪ್ರಹ್ವೋ ವಿಪ್ರರೂಪಂ ಗಣೋತ್ತಮಮ್ ॥ ೬೮

೯೯. "'ನನಗೆ ಅಭಯವನ್ನು ನೀಡು. ಆ ನಿನ್ನ ಸೊಸೆ ಇಂದೇ ಕಳೆದುಹೋಗಿದ್ದಾಳೆ. ರಾತ್ರಿಯಲ್ಲಿ ಮಾಯೆಯಿಂದ ಅವಳು ಎಲ್ಲೋ ಹೋಗಿರಬೇಕು. ಹಗಲು ರಾತ್ರಿ ನಾವು ಅವಳನ್ನು ನೋಡಿಕೊಳ್ಳುತ್ತಿದ್ದರೂ ಹೀಗಾಗಿದೆ."

೧೦೦. ಬ್ರಾಹ್ಮಣ ವೇಷದಲ್ಲಿದ್ದ ಗಣ ಪಂಚಶಿಖನು ದಯೆಯಿಂದಲೋ ಎಂಬಂತೆ ಬಹಳ ಕಷ್ಟದಿಂದ ಹೇಳಿದನು. "ರಾಜನೇ, ಹಾಗಾದರೆ ನನ್ನ ಮಗನಿಗೆ ನಿನ್ನ ಮಗಳನ್ನು ಕೊಡು.'

೧೦೧. ಅದನ್ನು ಕೇಳಿದ ರಾಜನು ಶಾಪಕ್ಕೆ ಹೆದರಿ ತನ್ನ ಮಗಳನ್ನು ದೇವದತ್ತನಿಗೆ ಕೊಟ್ಟನು. ಅನಂತರ ಪಂಚಶಿಖನು ಹೊರಟುಹೋದನು.

೧೦೨. ತನ್ನ ಪ್ರಿಯವಲ್ಲಭೆಯನ್ನು ಮತ್ತೆ ಎಲ್ಲರ ಎದುರಿನಲ್ಲಿ ಪಡೆದ ದೇವದತ್ತನು ಮಾವನಿಗೆ ಬೇರೆ ಮಕ್ಕಳಿಲ್ಲದ ಕಾರಣ ಅವನ ಎಲ್ಲ ಐಶ್ವರ್ಯಗಳನ್ನೂ ಹೊಂದಿ ವಿಜೃಂಭಿಸಿದನು.

೧೦೩. ಕಾಲ ಕಳೆದ ಮೇಲೆ ತನ್ನ ಮಗಳ ಮಗನೂ ದೇವದತ್ತಪುತ್ರನೂ ಆದ ಮಹೀಧರನೆಂಬುವನಿಗೆ ಪಟ್ಟಾಭಿಷೇಕವನ್ನು ಮಾಡಿ ಸುಶರ್ಮನು ತಪಸ್ಸಿಗಾಗಿ ಕಾಡನ್ನು ಆಶ್ರಯಿಸಿದನು.

೧೦೪. ಮಗನ ರಾಜ್ಯಭಾರವನ್ನು ನೋಡಿ ಕೃತಾರ್ಥನಾದ ದೇವದತ್ತನೂ ರಾಜಪುತ್ರಿಯೊಡನೆ ತಪೋವನವನ್ನು ಆಶ್ರಯಿಸಿದನು.

---

ಅಭಯಂ ದೇಹಿ ಸಾದ್ಯೈವ ಸ್ನುಷಾ ತೇ ಹಾರಿತಾ ನಿಶಿ ।
ಮಾಯಯೈವ ಗತಾ ಕ್ವಾಪಿ ರಕ್ಷ್ಯಮಾಣಾಪ್ಯಹರ್ನಿಶಮ್ ॥ ೯೯

ಕೃಚ್ಛ್ರಾತ್ ಸ ದಯಯೇವಾಥ ವಿಪ್ರರೂಪೋ ಗಣೋಽಬ್ರವೀತ್ ।
ತರ್ಹಿ ಪುತ್ರಾಯ ರಾಜನ್ಮೇ ದೇಹಿ ಸ್ವಾಂ ತನಯಾಮಿತಿ ॥ ೧೦೦

ತಚ್ಛ್ರುತ್ವಾ ಶಾಪಭೀತೇನ ರಾಜ್ಞಾ ತಸ್ಮೈ ನಿಜಾ ಸುತಾ ।
ಸಾ ದತ್ತಾ ದೇವದತ್ತಾಯ ತತಃ ಪಂಚಶಿಖೋ ಯಯೌ ॥ ೧೦೧

ದೇವದತ್ತೋಽಪಿ ತಾಂ ಭೂಯಃ ಪ್ರಕಾಶಂ ಪ್ರಾಪ್ಯ ವಲ್ಲಭಾಮ್ ।
ಜಜೃಂಭೇಽನನ್ಯಪುತ್ರಸ್ಯ ಶ್ವಶುರಸ್ಯ ವಿಭೂತಿಷು ॥ ೧೦೨

ಕಾಲೇನ ತಸ್ಯ ಪುತ್ರಂ ಚ ದೌಹಿತ್ರಮಭಿಷಿಚ್ಯ ಸಃ ।
ರಾಜ್ಯೇ ಮಹೀಧರಂ ನಾಮ ಸುಶರ್ಮಾ ಶಿಶ್ರಿಯೇ ವನಮ್ ॥ ೧೦೩

ತತೋ ದೃಷ್ಟ್ವಾ ಸುತೈಶ್ವರ್ಯಂ ಕೃತಾರ್ಥಃ ಸ ತಪೋವನಮ್ ।
ರಾಜಪುತ್ರ್ಯಾ ತಯಾ ಸಾಕಂ ದೇವದತ್ತೋಽಪ್ಯಶಿಶ್ರಿಯತ್ ॥ ೧೦೪

೧೦೫. ಅಲ್ಲಿ ಶಂಭುವನ್ನು ಆರಾಧಿಸಿ ಮಾನವಶರೀರವನ್ನು ತೊರೆದು ಶಿವನ ಅನುಗ್ರಹದಿಂದ ಗಣಸ್ಥಾನವನ್ನು ಪಡೆದನು.

೧೦೬. ಪ್ರಿಯೆಯು ದಂತದಿಂದ ಬೀಳಿಸಿದ ಹೂವಿನ ಸಂಜ್ಞೆಯನ್ನು ಅರಿತುಕೊಳ್ಳಲಾರದ ಕಾರಣದಿಂದ ಅವನು ಗಣಗಳ ಸಭೆಯಲ್ಲಿ ಪುಷ್ಪದಂತ ಎಂಬ ಹೆಸರಿನವನಾದನು.

೧೦೭. ಅವನ ಭಾರ್ಯೆಯೂ ಜಯಾ ಎಂಬ ಹೆಸರಿನಿಂದ ದೇವಿ ಪಾರ್ವತಿಯ ದ್ವಾರಪಾಲಿಕೆ ಆದಳು. ಅವನು ಪುಷ್ಪದಂತ ಎಂಬ ಹೆಸರನ್ನು ಪಡೆದದ್ದು ಹೀಗೆ. ನನ್ನ ಹೆಸರಿನ ಬಗೆಗೆ ಈಗ ಕೇಳು.

೧೦೮. ದೇವದತ್ತನ ತಂದೆ ಗೋವಿಂದದತ್ತನೆಂಬುವನಿಗೆ ನಾನು ಹಿಂದೆ ಸೋಮದತ್ತ ಎಂಬ ಹೆಸರಿನಿಂದ ಮಗನಾಗಿದ್ದೆನು.

೧೦೯. (ದೇವದತ್ತನಂತೆಯೇ) ಅದೇ ಸಿಟ್ಟಿನಿಂದ ನಾನೂ ಹಿಮಾಲಯಕ್ಕೆ ಹೋಗಿ ತಪಸ್ಸು ಮಾಡಿದೆನು. ಅನೇಕ ಪುಷ್ಪಮಾಲೆಗಳಿಂದ ಭಗವಾನ್ ಶಂಕರನನ್ನು ಸಂತೋಷಪಡಿಸುತ್ತಿದ್ದೆನು.

೧೧೦. ಪ್ರಸನ್ನನಾದ ಚಂದ್ರಶೇಖರನು ಪ್ರತ್ಯಕ್ಷನಾದಾಗ ಬೇರೆ ಸುಖಭೋಗಗಳಲ್ಲಿ ಆಸೆಯನ್ನು ಬಿಟ್ಟಿದ್ದ ನಾನು ಅವನ ಗಣಪದವಿಯನ್ನೇ ಬೇಡಿಕೊಂಡೆನು.

---

ತತ್ರಾರಾಧ್ಯ ಪುನಃ ಶಂಭುಂ ತ್ಯಕ್ತ್ವಾ ಮರ್ತ್ಯಕಲೇವರಮ್ ।
ತತ್ಪ್ರಸಾದೇನ ತಸ್ಯೈವ ಗಣಭಾವಮುಪಾಗತಃ ॥ ೧೦೫
ಪ್ರಿಯಾದಂತೋಜ್ಝಿತಾತ್ ಪುಷ್ಪಾತ್ ಸಂಜ್ಞಾಂ ನ ಜ್ಞಾತವಾನ್ ಯತಃ ।
ಅತಃ ಸ ಪುಷ್ಪದಂತಾಖ್ಯಃ ಸಂಪನ್ನೋ ಗಣಸಂಸದಿ ॥ ೧೦೬
ತದ್‌ಭಾರ್ಯಾ ಚ ಪ್ರತೀಹಾರೀ ದೇವ್ಯಾ ಜಾತಾ ಜಯಾಭಿಧಾ ।
ಇತ್ಥಂ ಸ ಪುಷ್ಪದಂತಾಖ್ಯೋ ಮದಾಖ್ಯಾಮಧುನಾ ಶೃಣು ॥ ೧೦೭
ಯಃ ಸ ಗೋವಿಂದದತ್ತಾಖ್ಯೋ ದೇವದತ್ತಪಿತಾ ದ್ವಿಜಃ ।
ತಸ್ಯೈವ ಸೋಮದತ್ತಾಖ್ಯಃ ಪುತ್ರೋ□ಹಮಭವಂ ಪುರಾ ॥ ೧೦೮
ತೇನೈವ ಮನ್ಯುನಾ ಗತ್ವಾ ತಪಸ್ಯಾಹಂ ಹಿಮಾಚಲೇ ।
ಅಕಾರ್ಷಂ ಬಹುಭಿರ್ಮಾಲ್ಯೈಃ ಶಂಕರಂ ನಂದಯನ್ ಸದಾ ॥ ೧೦೯
ತಥೈವ ಪ್ರಕಟೀಭೂತಾತ್ ಪ್ರಸನ್ನಾದಿಂದುಶೇಖರಾತ್ ।
ತ್ಯಕ್ತಾನ್ಯಭೋಗಲಿಪ್ಸೇನ ತದ್ಗಣತ್ವಂ ಮಯಾ ವೃತಮ್ ॥ ೧೧೦

೧೧೧. 'ದುರ್ಗಮವಾದ ಕಾಡಿನ ನೆಲದಲ್ಲಿ ಬೆಳೆದ ಹೂಗಳ ಮಾಲೆಯನ್ನು ನೀನೇ ತಂದು ನನ್ನನ್ನು ಪೂಜಿಸಿರುವೆ. ಆದ್ದರಿಂದ ನೀನು ಮಾಲ್ಯವಾನ್ ಎಂಬ ಗಣವಾಗುವೆ' ಎಂದು ಭಗವಾನ್ ಗಿರಿಜಾಪತಿಯು ನನಗೆ ಆಣತಿಯನ್ನಿತ್ತನು.

೧೧೨. ಅನಂತರ ಮನುಷ್ಯ ಶರೀರವನ್ನು ಕಳಚಿಹಾಕಿ ಪುಣ್ಯಮಯವಾದ ಗಣಪದವಿಯನ್ನು ನಾನು ಪಡೆದುಕೊಂಡೆನು. ನನ್ನನ್ನು ಅನುಗ್ರಹಿಸಿದ ಶಿವನು ಮಾಲ್ಯವಾನ್ ಎಂಬ ಈ ಹೆಸರನ್ನು ನನಗೆ ಇಟ್ಟನು.

೧೧೩. ಕಾಣಭೂತಿಯೇ, ಅದೇ ನಾನು ಮತ್ತೆ ಇಲ್ಲಿ ಪರ್ವತರಾಜನ ಮಗಳ ಶಾಪದಿಂದ ಮನುಷ್ಯರೂಪವನ್ನು ಪಡೆದಿದ್ದೇನೆ. ಆದ್ದರಿಂದ ಈಗ ನೀನು ನನಗೆ ಶಿವನು ಹೇಳಿದ ಕಥೆಯನ್ನು ಹೇಳು. ಅದರಿಂದ ನಮ್ಮಿಬ್ಬರಿಗೂ ಶಾಪದ ಅವಸ್ಥೆಯು ಕೊನೆಗೊಳ್ಳುವುದು."

**ಮಹಾಕವಿ ಸೋಮದೇವಭಟ್ಟನು ರಚಿಸಿದ**
**ಕಥಾಸರಿತ್ಸಾಗರದ ಕಥಾಪೀಠಲಂಬಕದಲ್ಲಿ**
**ಏಳನೆಯ ತರಂಗ ಮುಗಿಯಿತು.**

---

ಯತ್ ಪೂಜಿತೋಽಸ್ಮಿ ಭವತಾ ಸ್ವಯಮಾಹೃತೇನ
ಮಾಲ್ಯೇನ ದುರ್ಗವನಭೂಮಿಸಮುದ್ಭವೇನ ।
ತನ್ಮಾಲ್ಯವಾನಿತಿ ಭವಿಷ್ಯಸಿ ಮೇ ಗಣಸ್ತ್ವಮ್
ಇತ್ಯಾದಿಶಚ್ಚ ಸ ವಿಭುರ್ಗಿರಿಜಾಪತಿರ್ಮಾಮ್ ॥ ೧೧೧

ಅಥ ಮರ್ತ್ಯವಪುರ್ವಿಮುಚ್ಯ ಪುಣ್ಯಾಂ
ಸಹಸಾ ತದ್ಗಣತಾಮಹಂ ಪ್ರಪನ್ನಃ ।
ಇತಿ ಧೂರ್ಜಟಿನಾ ಕೃತಂ ಪ್ರಸಾದಾದ್
ಅಭಿಧಾನಂ ಮಮ ಮಾಲ್ಯವಾನಿತೀದಮ್ ॥ ೧೧೨

ಸೋಽಹಂ ಗತಃ ಪುನರಿಹಾದ್ಯ ಮನುಷ್ಯಭಾವಂ
ಶಾಪೇನ ಶೈಲದುಹಿತುರ್ಬತ ಕಾಣಭೂತೇ ।
ತನ್ಮೇ ಕಥಾಂ ಹರಕೃತಾಂ ಕಥಯಾಧುನಾ ತ್ವಂ
ಯೇನಾವಯೋರ್ಭವತಿ ಶಾಪದಶೋಪಶಾಂತಿಃ ॥ ೧೧೩

**ಇತಿ ಮಹಾಕವಿ ಶ್ರೀ ಸೋಮದೇವಭಟ್ಟವಿರಚಿತೇ**
**ಕಥಾಸರಿತ್ಸಾಗರೇ ಕಥಾಪೀಠಲಂಬಕೇ**
**ಸಪ್ತಮಸ್ತರಂಗಃ ।**

# ಎಂಟನೆಯ ತರಂಗ

## ಬೃಹತ್ಕಥೆಯ ಕಥೆ

೧ ಗುಣಾಢ್ಯನ ಕೋರಿಕೆಯಂತೆ ಏಳುಕಥೆಗಳಿಂದ ಕೂಡಿದ ದಿವ್ಯವಾದ ಕಥೆಯನ್ನು ಕಾಣಭೂತಿಯು ತನ್ನ ಭಾಷೆಯಾದ ಪೈಶಾಚಿಯಲ್ಲಿ ಹೇಳಿದನು.

೨. ಹಾಗೆಯೇ ಗುಣಾಢ್ಯನೂ ಪೈಶಾಚೀ ಭಾಷೆಯಲ್ಲಿ ಏಳುಲಕ್ಷ ಶ್ಲೋಕಗಳಿದ್ದ ಕಥೆಯನ್ನು ಏಳು ವರ್ಷಗಳಲ್ಲಿ ಬರೆದನು.

೩ ಅಡವಿಯಲ್ಲಿ ಮಸಿ ಇಲ್ಲದುದರಿಂದ ಮತ್ತು ವಿದ್ಯಾಧರರು ಅದನ್ನು ಎತ್ತಿಕೊಂಡು ಹೋಗಬಾರದೆಂಬ ಉದ್ದೇಶದಿಂದ ಮಹಾಕವಿ ಗುಣಾಢ್ಯನು ಆ ಕಥೆಯನ್ನು ತನ್ನ ರಕ್ತದಿಂದ ಬರೆದನು.

೪. ಅದನ್ನು ಕೇಳಲು ಬಂದ ಸಿದ್ಧವಿದ್ಯಾಧರಾದಿಗಳಿಂದ ತುಂಬಿ ಹೋದ ಆಕಾಶವು ಚಪ್ಪರವನ್ನು ಹೊದಿಸಿದಂತೆ ಕಾಣುತ್ತಿತ್ತು.

೫ ಗುಣಾಢ್ಯನು ರಚಿಸಿದ ಆ ಮಹಾಕಥೆಯನ್ನು ನೋಡಿಯೇ ಕಾಣಭೂತಿಯು ಶಾಪಮುಕ್ತನಾಗಿ ತನ್ನ ಸ್ಥಿತಿಗೆ ಮರಳಿದನು.

---

# ಅಷ್ಟಮಸ್ತರಂಗಃ

ಏವಂ ಗುಣಾಢ್ಯವಚಸಾ ಸಾಥ ಸಪ್ತಕಥಾಮಯೀ ।
ಸ್ವಭಾಷಯಾ ಕಥಾ ದಿವ್ಯಾ ಕಥಿತಾ ಕಾಣಭೂತಿನಾ ॥ ೧
ತಥೈವ ಚ ಗುಣಾಢ್ಯೇನ ಪೈಶಾಚ್ಯಾ ಭಾಷಯಾ ತಯಾ ।
ನಿಬದ್ಧಾ ಸಪ್ತಭಿರ್ವರ್ಷೈರ್ಗ್ರಂಥಲಕ್ಷಾಣಿ ಸಪ್ತ ಸಾ ॥ ೨
ಮೈತಾಂ ವಿದ್ಯಾಧರಾ ಹಾರ್ಷುರಿತಿ ತಾಮಾತ್ಮಶೋಣಿತೈಃ ।
ಅಟವ್ಯಾಂ ಮಷ್ಯಭಾವಾಚ್ಚ ಲಿಲೇಖ ಸ ಮಹಾಕವಿಃ ॥ ೩
ತಥಾ ಚ ಶ್ರೋತುಮಾಯಾತೈಃ ಸಿದ್ಧವಿದ್ಯಾಧರಾದಿಭಿಃ ।
ನಿರಂತರಮಭೂತ್ತತ್ರ ಸವಿತಾನಮಿವಾಂಬರಮ್ ॥ ೪
ಗುಣಾಢ್ಯೇನ ನಿಬದ್ಧಾಂ ಚ ತಾಂ ದೃಷ್ಟ್ವೈವ ಮಹಾಕಥಾಮ್ ।
ಜಗಾಮ ಮುಕ್ತಶಾಪಃ ಸನ್ ಕಾಣಭೂತಿರ್ನಿಜಾಂ ಗತಿಮ್ । ೫

೬ ಅಲ್ಲಿದ್ದ ಪಿಶಾಚರೂ ಅವರ ಜೊತೆಯಲ್ಲಿದ್ದವರೂ ದಿವ್ಯವಾದ ಆ ಕಥೆಯನ್ನು ಕೇಳಿ ಸ್ವರ್ಗವನ್ನು ಸೇರಿದರು.

೭ ನನ್ನ ಈ ಬೃಹತ್ಕಥೆಯು ಭೂಮಿಯಲ್ಲಿ ಮನ್ನಣೆಯನ್ನು ಪಡೆಯುವಂತೆ ಮಾಡಬೇಕು. ಶಾಪವಿಮುಕ್ತಿಯನ್ನು ಹೇಳಿದ ದೇವಿ ಪಾರ್ವತಿಯು ಈ ವಿಷಯವನ್ನೂ ತಿಳಿಸಿದ್ದಾಳೆ.

೮ ಇದನ್ನು ಹೇಗೆ ಜನರಿಗೆ ತಲುಪಿಸಲಿ ? "ಯಾರಿಗೆ ಸಮರ್ಪಿಸಲಿ, ಎಂದು ಮಹಾಕವಿ ಗುಣಾಢ್ಯನು ಚಿಂತಿಸಿದನು.

೯. ಉಪಾಧ್ಯಾಯನನ್ನು ಅನುಸರಿಸಿ ಬಂದಿದ್ದ ಗುಣದೇವ, ನಂದಿದೇವ ಎಂಬ ಇಬ್ಬರು ಶಿಷ್ಯರು ಅವನನ್ನು ಕುರಿತು ಹೀಗೆಂದರು.

೧೦. "'ನಿಮ್ಮ ಕಾವ್ಯವನ್ನು ಅರ್ಪಿಸಲು ಸರಿಯಾದ ಒಂದು ಸ್ಥಾನವೆಂದರೆ ಶ್ರೀ ಸಾತವಾಹನ ಮಹಾರಾಜ, ಹೂವಿನ ಪರಿಮಳವನ್ನು ಹೊರುವ ಮಾರುತದಂತೆ ಕಾವ್ಯವನ್ನು ರಸಿಕನು ತಾನೆ ಹೊರಬಲ್ಲನು?"

೧೧. ಹಾಗೆಯೇ ಆಗಲಿ ಎಂದು ಗುಣಾಢ್ಯನು ಗುಣಶಾಲಿಗಳಾದ ಆ ಶಿಷ್ಯರಿಗೆ ಪುಸ್ತಕವನ್ನು ಕೊಟ್ಟು ಅವರನ್ನು ಸಾತವಾಹನಮಹಾರಾಜನ ಬಳಿಗೆ ಕಳುಹಿಸಿದನು.

೧೨. ಗುಣಾಢ್ಯನು ತಾನೂ ಹೋಗಿ ಪ್ರತಿಷ್ಠಾನಪುರದ ಹೊರಗೆ ದೇವೀನಿರ್ಮಿತವಾದ ಉದ್ಯಾನದಲ್ಲಿ ಶಿಷ್ಯರಿಗೆ ಸ್ಥಾನಸಂಕೇತವನ್ನು ನೀಡಿ ನಿಂತಿದ್ದನು.

---

ಪಿಶಾಚಾ ಯೇಽಪಿ ತತ್ರಾಸನ್ ಅನ್ಯೇ ತತ್ಸಹಚಾರಿಣಃ ।
ತೇಽಪಿ ಪ್ರಾಪುರ್ದಿವಂ ಸರ್ವೇ ದಿವ್ಯಾಮಾಕರ್ಣ್ಯ ತಾಂ ಕಥಾಮ್ ॥ ೬
ಪ್ರತಿಷ್ಠಾಂ ಪ್ರಾಪಣೀಯೈಷಾ ಪೃಥಿವ್ಯಾಂ ಮೇ ಬೃಹತ್ಕಥಾ ।
ಅಯಮರ್ಥೋಽಪಿ ಮೇ ದೇವ್ಯಾ ಶಾಪಾಂತೋಕ್ತಾವುದೀರಿತಃ ॥ ೭
ತತ್ಕಥಂ ಪ್ರಾಪಯಾಮ್ಯೇನಾಂ ಕಸ್ಮೈ ತಾವತ್ ಸಮರ್ಪಯೇ ।
ಇತಿ ಚಾಚಿಂತಯತ್ತತ್ರ ಸ ಗುಣಾಢ್ಯೋ ಮಹಾಕವಿಃ ॥ ೮
ಅಥೈಕೋ ಗುಣದೇವಾಖ್ಯೋ ನಂದಿದೇವಾಭಿಧಃ ಪರಃ ।
ತಮೂಚತುರುಪಾಧ್ಯಾಯಂ ಶಿಷ್ಯಾವನುಗತಾವುಭೌ ॥ ೯
ತತ್ಕಾವ್ಯಸ್ಯಾರ್ಪಣಸ್ಥಾನಮೇಕಃ ಶ್ರೀಸಾತವಾಹನಃ ।
ರಸಿಕೋ ಹಿ ವಹೇತ್ ಕಾವ್ಯಂ ಪುಷ್ಪಾಮೋದಮಿವಾನಿಲಃ ॥ ೧೦
ಏವಮಸ್ತ್ವಿತಿ ತೌ ಶಿಷ್ಯಾವಂತಿಕಂ ತಸ್ಯ ಭೂಪತೇಃ ।
ಪ್ರಾಹಿಣೋತ್ ಪುಸ್ತಕಂ ದತ್ತ್ವಾ ಗುಣಾಢ್ಯೋ ಗುಣಶಾಲಿನೌ ॥ ೧೧
ಸ್ವಯಂ ಚ ಗತ್ವಾ ತತ್ರೈವ ಪ್ರತಿಷ್ಠಾನಪುರಾದ್ ಬಹಿಃ ।
ಕೃತಸಂಕೇತ ಉದ್ಯಾನೇ ತಸ್ಥೌ ದೇವೀವಿನಿರ್ಮಿತೇ ॥ ೧೨

೧೩. ಅವನ ಇಬ್ಬರು ಶಿಷ್ಯರೂ ಹೋಗಿ ಸಾತವಾಹನ ಭೂಪಾಲನಿಗೆ 'ಇದು ಗುಣಾಢ್ಯನ ಕೃತಿ' ಎಂದು ಹೇಳಿ ಕಾವ್ಯ ಗ್ರಂಥವನ್ನು ತೋರಿಸಿದರು.

೧೪. ಆ ಕೃತಿಯ ಪಿಶಾಚಭಾಷೆಯನ್ನು ಕೇಳಿ, ಪಿಶಾಚಗಳಂತೆ ಕಾಣಿಸುತ್ತಿದ್ದ ಆ ಇಬ್ಬರು ಶಿಷ್ಯರನ್ನೂ ನೋಡಿ ಅಸಹನೆಯಿಂದ ರಾಜನು ವಿದ್ಯಾಗರ್ವದಿಂದ ಹೀಗೆ ಮಾತನಾಡಿದನು.

೧೫. "'ಏಳು ಲಕ್ಷ ಶ್ಲೋಕಗಳಷ್ಟು ಉದ್ದದ ಕಥೆ! ನೀರಸವಾದ ಪೈಶಾಚೀ ಭಾಷೆ! ಅಕ್ಷರಗಳನ್ನು ಬರೆದಿರುವುದು ರಕ್ತದಿಂದ! ಈ ಪಿಶಾಚಕಥೆಗೆ ಧಿಕ್ಕಾರ".

೧೬. ಆಗ ಆ ಇಬ್ಬರು ಶಿಷ್ಯರೂ ಪುಸ್ತಕವನ್ನೆತ್ತಿಕೊಂಡು ಬಂದ ದಾರಿಯಲ್ಲೇ ಹಿಂದಿರುಗಿ ಗುಣಾಢ್ಯನಿಗೆ ನಡೆದ ವೃತ್ತಾಂತವನ್ನೆಲ್ಲ ಹೇಳಿದರು.

೧೭. ಅದನ್ನು ಕೇಳಿ ಗುಣಾಢ್ಯನು ಅತ್ಯಂತ ಬೇಸರಕ್ಕೆ ಈಡಾದನು. ತತ್ತ್ವವನ್ನು ತಿಳಿಯಬಲ್ಲವರೇ ತಿರಸ್ಕರಿಸಿದರೆ ಯಾರ ಮನಸ್ಸು ತಾನೆ ನೊಂದುಕೊಳ್ಳುವುದಿಲ್ಲ?

೧೮. ಶಿಷ್ಯಸಹಿತನಾಗಿ ಸ್ವಲ್ಪ ದೂರ ಹೋಗಿ ನಿರ್ಜನವೂ ರಮಣೀಯವೂ ಆಗಿದ್ದ ನೆಲವನ್ನು ಹೊಂದಿದ್ದ ಬೆಟ್ಟದ ಪ್ರದೇಶದಲ್ಲಿ ಗುಣಾಢ್ಯನು ನಿಂತು ಅಗ್ನಿಕುಂಡವನ್ನು ನಿರ್ಮಿಸಿದನು.

---

ತಚ್ಛಿಷ್ಯಾಭ್ಯಾಂ ಚ ಗತ್ವಾ ತತ್ ಸಾತವಾಹನಭೂಪತೇಃ ।
ಗುಣಾಢ್ಯಕೃತಿರೇಷೇತಿ ದರ್ಶಿತಂ ಕಾವ್ಯಪುಸ್ತಕಮ್ ॥ ೧೩
ಪಿಶಾಚಭಾಷಾಂ ತಾಂ ಶ್ರುತ್ವಾ ತೌ ಚ ದೃಷ್ಟ್ವಾ ತದಾಕೃತೀ ।
ವಿದ್ಯಾಮದೇನ ಸಾಸೂಯಂ ಸ ರಾಜೈವಮಭಾಷತ ॥ ೧೪
ಪ್ರಮಾಣಂ ಸಪ್ತ ಲಕ್ಷಾಣಿ ಪೈಶಾಚಂ ನೀರಸಂ ವಚಃ ।
ಶೋಣಿತೇನಾಕ್ಷರನ್ಯಾಸೋ ಧಿಕ್ ಪಿಶಾಚಕಥಾಮಿಮಾಮ್ ॥ ೧೫
ತತಃ ಪುಸ್ತಕಮಾದಾಯ ಗತ್ವಾ ತಾಭ್ಯಾಂ ಯಥಾಗತಮ್ ।
ಶಿಷ್ಯಾಭ್ಯಾಂ ತದ್ ಗುಣಾಢ್ಯಾಯ ಯಥಾವೃತ್ತಮಕಥ್ಯತ ॥ ೧೬
ಗುಣಾಢ್ಯೋಽಪಿ ತದಾಕರ್ಣ್ಯ ಸದ್ಯಃ ಖೇದವಶೋಽಭವತ್ ।
ತತ್ತ್ವಜ್ಞೇನ ಕೃತಾವಜ್ಞಃ ಕೋ ನಾಮಾಂತರ್ನ ತಪ್ಯತೇ ॥ ೧೭
ಸಶಿಷ್ಯಶ್ಚ ತತೋ ಗತ್ವಾ ನಾತಿದೂರಂ ಶಿಲೋಚ್ಚಯಮ್ ।
ವಿವಿಕ್ತರಮ್ಯಭೂಭಾಗಮಗ್ನಿಕುಂಡಂ ವ್ಯಧಾತ್ ಪುರಃ ॥ ೧೮

೧೯. ಗ್ರಂಥದ ಒಂದೊಂದು ಪತ್ರವನ್ನೂ ಓದಿ ಅವನು ಅದನ್ನು ಬೆಂಕಿಯಲ್ಲಿ ಎಸೆಯತೊಡಗಿದನು. ಶಿಷ್ಯರಿಬ್ಬರೂ ಕಣ್ಣೀರಿಡುತ್ತಾ ನೋಡುತ್ತಿದ್ದರು. ಕಾಡಿನ ಮೃಗಗಳೂ ಪಕ್ಷಿಗಳೂ ಕಥೆಯನ್ನು ಕೇಳುತ್ತಿದ್ದವು.

೨೦. ಶಿಷ್ಯರಿಗೆ ನರವಾಹನದತ್ತನ ಕಥೆ ತುಂಬ ಇಷ್ಟವಾದದ್ದು ಎಂದು ಒಂದು ಲಕ್ಷ ಶ್ಲೋಕಗಳ ಆ ಕಥೆಯೊಂದನ್ನು ಬೆಂಕಿಯಲ್ಲಿ ಎಸೆಯದೆ ಬಿಟ್ಟನು.

೨೧-೨೨. ಆ ದಿವ್ಯವಾದ ಕಥೆಯನ್ನು ಅವನು ಓದಿ ಓದಿ ಸುಟ್ಟು ಹಾಕುತ್ತಿರಲು ಜಿಂಕೆ, ಕಾಡುಹಂದಿ, ಕಾಡೆಮ್ಮೆ ಮುಂತಾದ ಎಲ್ಲ ಪ್ರಾಣಿಗಳೂ ಹುಲ್ಲು ತಿನ್ನುವುದನ್ನೂ ಕಡೆಗಣಿಸಿ ಕಥೆಯನ್ನು ಕೇಳುತ್ತಾ ಕಣ್ಣೀರನ್ನು ಸುರಿಸುತ್ತಾ ಸುತ್ತುಗಟ್ಟಿ ನಿಶ್ಚಲವಾಗಿ ನಿಂತಿದ್ದವು.

೨೩. ಈ ಮಧ್ಯದಲ್ಲಿ ಮಹಾರಾಜ ಸಾತವಾಹನನು ಅಸ್ವಸ್ಥನಾದನು. ಒಣಗಿದ ಮಾಂಸವನ್ನು ತಿಂದಿರುವುದೇ ರೋಗಕ್ಕೆ ಕಾರಣವಾದ ದೋಷ ಎಂದು ವೈದ್ಯರು ಹೇಳಿದರು.

೨೪. ಈ ಬಗೆಗೆ ಅಡಿಗೆಯವರನ್ನು ಆಕ್ಷೇಪಿಸಿದಾಗ ಅವರು "ಅದಕ್ಕೆ ಕಾರಣ ಬೇಡರು ಅಂಥ ಮಾಂಸವನ್ನೇ ಒದಗಿಸುತ್ತಿರುವುದು' ಎಂದರು.

೨೫. ಬೇಡರನ್ನು ವಿಚಾರಿಸಿದಾಗ ಅವರಿಂತೆಂದರು "'ಇಲ್ಲಿಗೆ ಸ್ವಲ್ಪ ದೂರದಲ್ಲಿರುವ ಬೆಟ್ಟದಲ್ಲಿ ಯಾವನೋ ಒಬ್ಬ ಬ್ರಾಹ್ಮಣನು ಪತ್ರಗಳನ್ನು ಒಂದೊಂದಾಗಿ ಓದಿ ಬೆಂಕಿಗೆ ಎಸೆಯುತ್ತಿದ್ದಾನೆ.

---

ತತ್ರಾಗ್ನೌ ಪತ್ರಮೇಕೈಕಂ ಶಿಷ್ಯಾಭ್ಯಾಂ ಸಾಶ್ರು ವೀಕ್ಷಿತಃ ।
ವಾಚಯಿತ್ವಾ ಸ ಚಿಕ್ಷೇಪ ಶ್ರಾವಯನ್ ಮೃಗಪಕ್ಷಿಣಃ ॥ ೧೯
ನರವಾಹನದತ್ತಸ್ಯ ಚರಿತಂ ಶಿಷ್ಯಯೋಃ ಕೃತೇ ।
ಗ್ರಂಥಲಕ್ಷಂ ಕಥಾಮೇಕಾಂ ವರ್ಜಯಿತ್ವಾ ತದೀಪ್ಸಿತಾಮ್ ॥ ೨೦
ತಸ್ಮಿಂಶ್ಚ ತಾಂ ಕಥಾಂ ದಿವ್ಯಾಂ ಪಠತ್ಯಪಿ ದಹತ್ಯಪಿ ।
ಪರಿತ್ಯಕ್ತತೃಣಾಹಾರಾಃ ಶೃಣ್ವಂತಃ ಸಾಶ್ರುಲೋಚನಾಃ ॥ ೨೧
ಆಸನ್ನಭ್ಯೇತ್ಯ ತತ್ರೈವ ನಿಶ್ಚಲಾ ಬದ್ಧಮಂಡಲಾಃ ।
ನಿಖಿಲಾಃ ಖಲು ಸಾರಂಗವರಾಹಮಹಿಷಾದಯಃ ॥ ೨೨
ಅತ್ರಾಂತರೇ ಚ ರಾಜಾಭೂದಸ್ವಸ್ಥಃ ಸಾತವಾಹನಃ ।
ದೋಷಂ ಚಾಸ್ಯಾವದನ್ ವೈದ್ಯಾಃ ಶುಷ್ಕಮಾಂಸೋಪಭೋಗಜಮ್ ॥ ೨೩
ಆಕ್ಷಿಪ್ತಾಸ್ತನ್ನಿಮಿತ್ತಂ ಚ ಸೂಪಕಾರಾ ಬಭಾಷಿರೇ ।
ಅಸ್ಮಾಕಮೀದೃಶಂ ಮಾಂಸಂ ದದತೇ ಲುಬ್ಧಕಾ ಇತಿ ॥ ೨೪
ಪೃಷ್ಟಾಶ್ಚ ಲುಬ್ಧಕಾ ಊಚುರ್ನಾತಿದೂರೇ ಗಿರಾವಿತಃ ।
ಪಠಿತ್ವಾ ಪತ್ರಮೇಕೈಕಂ ಕೋಽಪ್ಯಗ್ನೌ ಕ್ಷಿಪತಿ ದ್ವಿಜಃ ॥ ೨೫

೨೬. ಎಲ್ಲ ಪ್ರಾಣಿಗಳೂ ಹೋಗಿ ಗುಂಪುಕಟ್ಟಿಕೊಂಡು ನಿಂತು ಆಹಾರವನ್ನು ತಿನ್ನದೆ ಕಥೆಯನ್ನು ಕೇಳುತ್ತಿವೆ. ಆ ಸ್ಥಳವನ್ನು ಬಿಟ್ಟು ಬೇರೆ ಎಲ್ಲಿಗೂ ಅವು ಹೋಗುತ್ತಿಲ್ಲ. ಹಸಿವಿನಿಂದ ಅವುಗಳ ಮಾಂಸ ಶುಷ್ಕವಾಗಿದೆ.”

೨೭. ಬೇಡರ ಈ ಮಾತುಗಳನ್ನು ಕೇಳಿ ದೊರೆಯು ಕುತೂಹಲದಿಂದ ಆ ಬೇಡರನ್ನೇ ಮುಂದಿಟ್ಟುಕೊಂಡು ಗುಣಾಢ್ಯನ ಬಳಿಗೆ ಹೋದನು.

೨೮. ಆರಿಹೋಗಿ ಉಳಿದ ಶಾಪಾಗ್ನಿಯ ಎಳೆಗಳೋ ಎಂಬಂತಿದ್ದ, ವನವಾಸದಿಂದ ಉಂಟಾಗಿದ್ದ ಜಟೆಗಳಿಂದ ಆವೃತನಾಗಿದ್ದ ಗುಣಾಢ್ಯನನ್ನು ರಾಜನು ಕಂಡನು.

೨೯. ಕಣ್ಣೀರಿಡುತ್ತಿದ್ದ ಮೃಗಗಳ ಮಧ್ಯದಲ್ಲಿ ಕುಳಿತಿದ್ದ ಗುಣಾಢ್ಯನನ್ನು ರಾಜನು ಗುರುತು ಹಿಡಿದು ನಮಸ್ಕರಿಸಿ ಅವನ ವೃತ್ತಾಂತವನ್ನು ಕೇಳಿದನು.

೩೦. ಜ್ಞಾನಿಯಾಗಿದ್ದ ಗುಣಾಢ್ಯನು ಪುಷ್ಪದಂತನ ಶಾಪಕ್ಕೆ ಕಾರಣವಾಗಿದ್ದ ತನ್ನ ಚೇಷ್ಟೆಯನ್ನೂ ಕಥೆಯು ಈ ಲೋಕಕ್ಕೆ ಹೇಗೆ ಬಂದಿತೆಂಬುದನ್ನೂ ಭೂತಗಳು ಆಡುವ ಪೈಶಾಚೀ ಭಾಷೆಯಲ್ಲೇ ಹೇಳಿದನು.

೩೧. ಅವನು ಗಣಾವತಾರ ಎಂಬುದನ್ನು ಅರಿತ ರಾಜನು ಅವನ ಕಾಲಿಗೆ ಬಿದ್ದು ನಮಸ್ಕರಿಸಿ ಶಿವನ ಬಾಯಿಂದ ಬಂದ ಆ ದಿವ್ಯ ಕಥೆಯನ್ನು ತನಗೆ ಕೊಡಬೇಕೆಂದು ಬೇಡಿಕೊಂಡನು.

---

ತತ್ಸಮೇತ್ಯ ನಿರಾಹಾರಾಃ ಶೃಣ್ವಂತಿ ಪ್ರಾಣಿನೋಽಖಿಲಾಃ ।
ನಾನ್ಯತೋ ಯಂತಿ ತೇನೈಷಾಂ ಶುಷ್ಕಂ ಮಾಂಸಮಿದಂ ಕ್ಷುಧಾ ॥ ೨೬
ಇತಿ ವ್ಯಾಧವಚಃ ಶ್ರುತ್ವಾ ಕೃತ್ವಾ ತಾನೇವ ಚಾಗ್ರತಃ ।
ಸ್ವಯಂ ಸ ಕೌತುಕಾದ್ ರಾಜಾ ಗುಣಾಢ್ಯಸ್ಯಾಂತಿಕಂ ಯಯೌ ॥ ೨೭
ದದರ್ಶ ತಂ ಸಮಾಕೀರ್ಣಂ ಜಟಾಭಿರ್ವನವಾಸತಃ ।
ಪ್ರಶಾಂತಶೇಷಶಾಪಾಗ್ನಿಧೂಮಿಕಾಭಿರಿವಾಭಿತಃ ॥ ೨೮
ಅಥೈನಂ ಪ್ರತ್ಯಭಿಜ್ಞಾಯ ಸಬಾಷ್ಪಮೃಗಮಧ್ಯಗಮ್ ।
ನಮಸ್ಕೃತ್ಯ ಚ ಪಪ್ರಚ್ಛ ತಂ ವೃತ್ತಾಂತಂ ಮಹೀಪತಿಃ ॥ ೨೯
ಸೋಽಪಿ ಸ್ವಂ ಪುಷ್ಪದಂತಸ್ಯ ರಾಜ್ಞೇ ಶಾಪಾದಿಚೇಷ್ಟಿತಮ್ ।
ಜ್ಞಾನೀ ಕಥಾವತಾರಂ ತಮಾಚಖ್ಯೌ ಭೂತಭಾಷಯಾ ॥ ೩೦
ತತೋ ಗಣಾವತಾರಂ ತಂ ಮತ್ವಾ ಪಾದಾನತೋ ನೃಪಃ ।
ಯಯಾಚೇ ತಾಂ ಕಥಾಂ ತಸ್ಮಾದ್ದಿವ್ಯಾಂ ಹರಮುಖೋದ್ಗತಾಮ್ ॥ ೩೧

೩೨. ಆಗ ಗುಣಾಢ್ಯನು ಸಾತವಾಹನಮಹಾರಾಜನಿಗೆ ಹೀಗೆ ಹೇಳಿದನು. 'ದೊರೆಯೇ! ಆರು ಲಕ್ಷ ಶ್ಲೋಕಗಳಷ್ಟಿದ್ದ ಆರು ಕಥೆಗಳನ್ನು ನಾನು ಸುಟ್ಟುಹಾಕಿಬಿಟ್ಟೆನು.

೩೩. ಒಂದು ಲಕ್ಷಶ್ಲೋಕಗಳ ಒಂದು ಕಥೆ ಮಾತ್ರ ಉಳಿದಿದೆ. ಅದನ್ನೇ ತೆಗೆದುಕೋ. ನನ್ನ ಈ ಇಬ್ಬರು ಶಿಷ್ಯರು ನಿನಗೆ ಕಥೆಯನ್ನು ವಿವರಿಸಿ ಹೇಳುತ್ತಾರೆ.'

೩೪. ಇಷ್ಟನ್ನು ಹೇಳಿ ದೊರೆಯನ್ನು ಬೀಳ್ಕೊಟ್ಟು ಯೋಗದಿಂದ ಮಾನುಷಶರೀರವನ್ನು ತ್ಯಜಿಸಿ ಶಾಪನಿರ್ಮುಕ್ತನಾದ ಗುಣಾಢ್ಯನು ತನ್ನ ದಿವ್ಯ ಸ್ಥಾನವನ್ನು ತಲುಪಿದನು.

೩೫. ಗುಣಾಢ್ಯನು ಕೊಟ್ಟ ನರವಾಹನದತ್ತನ ಚರಿತ್ರೆಯನ್ನೊಳಗೊಂಡ ಬೃಹತ್ಕಥಾ ಎಂಬ ಹೆಸರಿನ ಕಥೆಯನ್ನು ತೆಗೆದುಕೊಂಡು ರಾಜನು ತನ್ನ ನಗರಕ್ಕೆ ತೆರಳಿದನು.

೩೬. ಆ ಬೃಹತ್ಕಥೆಯ ಕವಿಯಾದ ಗುಣಾಢ್ಯನ ಶಿಷ್ಯರಾಗಿದ್ದ ಗುಣದೇವ ಮತ್ತು ನಂದಿದೇವರನ್ನು ರಾಜನು ಭೂಮಿ, ಚಿನ್ನ, ವಸ್ತ್ರ, ವಾಹನ, ಮನೆ, ಹಣ ಇತ್ಯಾದಿಗಳಿಂದ ಸತ್ಕರಿಸಿದನು.

೩೭. ಅವರಿಬ್ಬರಿಂದ ಆ ಬೃಹತ್ಕಥೆಯನ್ನು ಪಡೆದುಕೊಂಡು, ಸಾತವಾಹನ ಮಹಾರಾಜನು ಅವತರಣಿಕೆಯನ್ನು ಹೇಳಲು ಆ ಭಾಷೆಯಲ್ಲೇ ಕಥಾಪೀಠವನ್ನು ರಚಿಸಿದನು.

---

ಅಥೋವಾಚ ಸ ತಂ ಭೂಪಂ ಗುಣಾಢ್ಯಃ ಸಾತವಾಹನಮ್ ।
ರಾಜನ್ ಷಡ್ ಗ್ರಂಥಲಕ್ಷಾಣಿ ಮಯಾ ದಗ್ಧಾನಿ ಷಟ್‌ಕಥಾಃ ॥ ೩೨
ಲಕ್ಷಮೇಕಮಿದಂ ತ್ವಸ್ತಿ ಕಥೈಕಾ ಸೈವ ಗೃಹ್ಯತಾಮ್ ।
ಮಚ್ಛಿಷ್ಯೌ ತವ ಚಾತ್ರೈತೌ ವ್ಯಾಖ್ಯಾತಾರೌ ಭವಿಷ್ಯತಃ ॥ ೩೩
ಇತ್ಯುಕ್ತ್ವಾ ನೃಪಮಾಮಂತ್ರ್ಯ ತ್ಯಕ್ತ್ವಾ ಯೋಗೇನ ತಾಂ ತನುಮ್ ।
ಗುಣಾಢ್ಯಃ ಶಾಪನಿರ್ಮುಕ್ತಃ ಪ್ರಾಪ ದಿವ್ಯಂ ನಿಜಂ ಪದಮ್ ॥ ೩೪
ಅಥ ತಾಂ ಗುಣಾಢ್ಯದತ್ತಾಮಾದಾಯ ಕಥಾಂ ಬೃಹತ್ಕಥಾಂ ನಾಮ್ನಾ ।
ನೃಪತಿರಗಾನ್ನಿಜನಗರಂ ನರವಾಹನದತ್ತಚರಿತಮಯೀಮ್ ॥ ೩೫
ಗುಣದೇವನಂದಿದೇವೌ ತತ್ರ ಚ ತೌ ತತ್ಕಥಾಕವೇಃ ಶಿಷ್ಯೌ ।
ಕ್ಷಿತಿಕನಕವಸ್ತ್ರವಾಹನಭವನಧನೈಃ ಸಂವಿಭೇಜೇ ಸಃ ॥ ೩೬
ತಾಭ್ಯಾಂ ಸಹ ಚ ಕಥಾಂ ತಾಮಾಶ್ವಾಸ್ಯ ಸಾತವಾಹನಸ್ತಸ್ಯಾಃ ।
ತದ್‌ಭಾಷಯಾವತಾರಂ ವಕ್ತುಂ ಚಕ್ರೇ ಕಥಾಪೀಠಮ್ ॥ ೩೭

೩೮. ಅದ್ಭುತರಸದಿಂದ ತುಂಬಿತುಳುಕುವ ಆ ಕಥೆಯು ಕೌತುಕದಿಂದ ದೇವತೆಗಳ ಕಥೆಯನ್ನೂ ಮರೆಸುವುದಾಗಿದ್ದು ಆ ನಗರದಲ್ಲಿ ನಿರಂತರವಾದ ಕೀರ್ತಿಯನ್ನು ಪಡೆದು ಮೂರು ಲೋಕಗಳಲ್ಲೂ ಹರಡಿತು.

ಮಹಾಕವಿ ಸೋಮದೇವಭಟ್ಟನು ರಚಿಸಿದ
ಕಥಾಸರಿತ್ಸಾಗರದ ಕಥಾಪೀಠಲಂಬಕದಲ್ಲಿ
ಎಂಟನೆಯ ತರಂಗವು ಮುಗಿಯಿತು.

**ಮೊದಲನೆಯದಾದ ಕಥಾಪೀಠಲಂಬಕವು ಮುಗಿಯಿತು.**

---

ಸಾ ಚ ಚಿತ್ರರಸನಿರ್ಭರಾ ಕಥಾ ವಿಸ್ಮೃತಾಮರಕಥಾ ಕುತೂಹಲಾತ್ ।
ತದ್ವಿಧಾಯ ನಗರೇ ನಿರಂತರಾಂ ಖ್ಯಾತಿಮತ್ರ ಭುವನತ್ರಯೇ ಗತಾ ॥ ೩೮

ಇತಿ ಮಹಾಕವಿ ಶ್ರೀಸೋಮದೇವಭಟ್ಟ ವಿರಚಿತೇ
ಕಥಾಸರಿತ್ಸಾಗರೇ ಕಥಾಪೀಠಲಂಬಕೇ􀀀ಷ್ಟಮಸ್ತರಂಗಃ

**ಸಮಾಪ್ತಶ್ಚಾಯಂ ಕಥಾಪೀಠಲಂಬಕಃ ಪ್ರಥಮಃ**

❖❖❖